ಬೆಳಕು ತೋರಿದ ಗುರು

# ಶ್ರೀ ಚಂದ್ರಶೇಖರ ಭಾರತೀ

ಹುರಗಲವಾಡಿ ಲಕ್ಷ್ಮೀನರಸಿಂಹಶಾಸ್ತ್ರೀ

ವಿದ್ಯಾಶಂಕರ ಪ್ರಕಾಶನ
ಮೈಸೂರು-570004

*BELAKU THORIDA GURU SRI CHANDRASHEKHARA BHARATI* - written by Huragalavadi Lakshminarasimha Shastri. Published by Vidyashankara Prakashana, Mysore-570 004.

**ಮೊದಲ ಮುದ್ರಣ : ಅಕ್ಟೋಬರ್ 2018**

**ಪುಟಗಳು : 416**

ಮುಖಪುಟ ವಿನ್ಯಾಸ : **ಕರ್ನಾಟಕ ಆಫ್‌ಸೆಂಟ್ ಪ್ರಿಂಟರ್ಸ್**
ಚಿತ್ರ ಕೃಪೆ : **ಅಂತರ್ಜಾಲ**



**ಬೆಲೆ : ರೂ. 150/–**

**ಪ್ರತಿಗಳಿಗೆ ಸಂಪರ್ಕಿಸಿ**
ಶ್ರೀಶಾರದಾ ಟ್ರಸ್ಟ್
ಶೃಂಗೇರಿ 577139

ಆಯೋಜಕರು : ಬಿ.ಎಸ್. ಸುರೇಶ್‌ಕುಮಾರ್

ಮುದ್ರಕರು :
**ಕರ್ನಾಟಕ ಆಫ್‌ಸೆಟ್ ಪ್ರಿಂಟರ್ಸ್**
ನಂ. 30/2, 4ನೇ ಮುಖ್ಯರಸ್ತೆ, 3ನೇ ಕ್ರಾಸ್
ಚಾಮರಾಜಪೇಟೆ, ಬೆಂಗಳೂರು – 560 018.
ಫೋನ್ : 080– 26678525
ಇ–ಮೇಲ್ : kop.bangalore@gmail.com



# ಅರ್ಪಣೆ

ಶ್ರೀ ಶ್ರೀ ಅಭಿನವ ವಿದ್ಯಾತೀರ್ಥ
ಮಹಾಸ್ವಾಮಿಗಳವರ ದಿವ್ಯ
ಚರಣಾರವಿಂದಕ್ಕೆ

ಶ್ರೀ ಗುರುಭ್ಯೋನಮಃ

## ಆಶೀಃ ಪತ್ರ



ಸನಾತನ ವೈದಿಕ ವಾಙ್ಮಯವು ಮಾನವನಿಗೆ ನಾಲ್ಕು ಪುರುಷಾರ್ಥಗಳನ್ನು ಉಪದೇಶಿಸಿದೆ. ಪುರುಷಾರ್ಥಗಳೆಂದರೆ ವಿವೇಕಿಯಾದ ಮನುಷ್ಯನಿಂದ ಬಯಸಲ್ಪಡತಕ್ಕವು. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಇವೇ ಆ ನಾಲ್ಕು. ಇವುಗಳಲ್ಲಿ ನಾಲ್ಕನೆಯದಾದ ಮೋಕ್ಷವೆಂಬುದು ಪರಮಶ್ರೇಷ್ಠ. ಇದಕ್ಕೆ ಸಾಧನವೆಂದರೆ ಆತ್ಮನ ವಾಸ್ತವಿಕವಾದ ಸ್ವರೂಪದ ಅರಿವು. ಶಂಕರ ಭಗವತ್ಪಾದಾದಿಗಳು ಈ ವಿಷಯವನ್ನು ಭಾಷ್ಯಗ್ರಂಥಗಳಲ್ಲಿ ಸ್ಪಷ್ಟಪಡಿಸಿರುತ್ತಾರೆ. ಈ ಅರಿವನ್ನು ಸಾಧಿಸಲು ಶ್ರವಣ, ಮನನ, ನಿದಿಧ್ಯಾಸನಗಳು ಕಾರಣವಾಗುತ್ತವೆ; ಶಮದಮಾದಿಗಳು, ವಿವೇಕ, ವೈರಾಗ್ಯ ಮುಮುಕ್ಷುತ್ವಗಳು ಸಹಕಾರಿ ಕಾರಣಗಳಾಗುತ್ತವೆ. ಈ ಸಾಧನೆಗಳಿಂದ ಆತ್ಮಸಾಕ್ಷಾತ್ಕಾರವನ್ನು ಪಡೆದು ಜೀವಿಸಿರುವವರನ್ನು ಜೀವನ್ಮುಕ್ತರೆಂದು ಕರೆಯುತ್ತಾರೆ.

ನಮ್ಮ ಗುರುವರೇಣ್ಯರಾದ ಶ್ರೀ ಜಗದ್ಗುರು ಚಂದ್ರಶೇಖರ ಭಾರತೀ ಮಹಾಸ್ವಾಮಿಗಳವರು ಜೀವನ್ಮುಕ್ತರಾದವರು. ವಿದ್ಯಾಮೂರ್ತಿಗಳು, ತಪೋನಿಷ್ಠರು ಮತ್ತು ಪರಮ ಪೂಜ್ಯರೂ ಆದ ಅವರ ದರ್ಶನವನ್ನು ಪಡೆದು ಉಪದೇಶ ಹೊಂದಿ ಇಹ ಪರ ಮತ್ತು ಪರಮಾರ್ಥವನ್ನು ಸಾಧಿಸಿ ಧನ್ಯರಾದವರನೇಕರು. ಈ ಜೀವನ್ಮುಕ್ತರ ಜೀವಿತಚರಿತ್ರೆಯು ಮುಮುಕ್ಷುಗಳಿಗೆ ದಾರಿದೀಪ, ಆರ್ತ ಮತ್ತು ಅರ್ಥಾರ್ಥಿಗಳಿಗೆ ತೃಪ್ತಿದಾಯಕ.



ಶಿಷ್ಯರಾದ ಶ್ರೀ ಹುರಗಲವಾಡಿ ಲಕ್ಷ್ಮೀನರಸಿಂಹಶಾಸ್ತ್ರಿಗಳು ಶ್ರದ್ಧೆಯಿಂದ ವಿಷಯಗಳನ್ನು ಸಂಗ್ರಹಿಸಿ ಗ್ರಂಥವನ್ನು ರಚಿಸಿರುತ್ತಾರೆ.

ಇದರಲ್ಲಿ ಆಚಾರ್ಯಸ್ವಾಮಿಗಳವರ ಬಾಲ್ಯ, ವಿದ್ಯಾಧ್ಯಯನ, ವಿರಕ್ತ ಜೀವನ, ಸಂನ್ಯಾಸಾಶ್ರಮ ಮುಂತಾದ ವಿಷಯಗಳನ್ನೆತ್ತಿ ಮನಸ್ಸಿಗೆ ಉಪದೇಶ ಮುಟ್ಟುವಂತೆ ವಿವರಿಸಿದ್ದಾರೆ. ಧಾರ್ಮಿಕ ಜೀವನವನ್ನು ನಡೆಸಲು ಶಿಷ್ಯರ ಅರ್ಹತೆಯನ್ನನುಸರಿಸಿ ಆಚಾರ್ಯರು ಕೊಡುತ್ತಿದ್ದ ಉಪದೇಶಗಳು, ಅವರ ಕೃಪೆ ಮತ್ತು ಅನುಗ್ರಹಗಳನ್ನು ಕಣ್ಣೆದುರಿಗೆ ಕಾಣುವಂತೆ ಚಿತ್ರಿಸಿರುತ್ತಾರೆ. ಗುರುನಾಥರ ಗುಣಾತಿಶಯಗಳನ್ನು ಸರಳವಾಗಿ ಬಣ್ಣಿಸಿರುತ್ತಾರೆ.

ಇದರ ಓದುವಿಕೆಯು ಮನಸ್ಸಿನ ಧಾರ್ಮಿಕ ಮತ್ತು ಆಧ್ಯಾತ್ಮಿಕ ವಿಕಾಸಕ್ಕೆ ಕಾರಣವಾಗಬಲ್ಲದು.

ವಿಷಯ ವಿಲಾಸಗಳ ವ್ಯಾಮೋಹದಿಂದ ಸನಾತನ ಸಂಸ್ಕೃತಿಯಲ್ಲಿ ಔದಾಸೀನ್ಯ ತಿರಸ್ಕಾರಗಳನ್ನು ಹೊಂದುವದೇ ಪ್ರಧಾನವಾಗಿರುವ ಈ ಕಾಲದಲ್ಲಿ ಇಂತಹ ಗ್ರಂಥಗಳು ಪ್ರಕಾಶಕ್ಕೆ ಬರುವದು ಅತ್ಯವಶ್ಯಕ.

ಈ ಉತ್ತಮ ಚರಿತ್ರ ಗ್ರಂಥವು ಪ್ರಕಾಶಿತವಾಗಿ ಸಜ್ಜನರ ಕರಕಮಲಾಲಂಕಾರವಾಗಲಿ. ಶ್ರೀ ಶಾರದಾ ಚಂದ್ರಮೌಳೀಶ್ವರರು ಲೇಖಕರನ್ನು ಚಿರಕಾಲ ಸುಖಿಗಳಾಗಿ ಬಾಳುವಂತೆ ಕರುಣಿಸಲಿ.

ಶೃಂಗೇರಿ
25-6-1973

ಇತಿ ನಾರಾಯಣಸ್ಮರಣಂ

विद्यातीर्थ

# ಲೇಖಕನ ಬಿನ್ನಹ

**ಗುರು ಶ್ರೀ ಶ್ರೀ ಭಾರತೀ ತೀರ್ಥರು ಮತ್ತು ಗುರು ಶ್ರೀ ಶ್ರೀ ವಿಧುಶೇಖರ ಭಾರತೀ ಇವರಿಗೆ ನನ್ನ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತಿದ್ದೇನೆ.**

ಧರ್ಮವೆಂದರೆ ಸನ್ನಡತೆ, ದುರ್ನಡತೆಯೇ ಅಧರ್ಮ.ಈ ಧರ್ಮಾಧರ್ಮಗಳನ್ನು ಪದೇ ಪದೇ ಬೋಧಿಸುವುದಕ್ಕಾಗಿ ಅವತಾರಗಳು ಉಂಟಾಗುತ್ತಲೇ ಇವೆ. ಈ ಅವತಾರಿಗಳಿಗೂ ನಮಗೂ ಏನು ವ್ಯತ್ಯಾಸ? ಅವತಾರಿಗಳು ಲೋಕೋದ್ಧಾರಕ್ಕಾಗಿ ಜನ್ಮ ತಾಳಿದವರು. ನಾವು ನಮ್ಮ ಪೂರ್ವ ಜನ್ಮಗಳಲ್ಲಿ–ನೂರಾರು ಜನ್ಮಗಳು–ನಡೆಸಿದ ಪುಣ್ಯಪಾಪ ಕರ್ಮಗಳ ಫಲವನ್ನು ಅನುಭವಿಸುವುದಕ್ಕಾಗಿ ಪದೇ ಪದೇ ಹುಟ್ಟುತ್ತಲೇ ಇರುತ್ತೇವೆ. ಈ ಕರ್ಮ ಮತ್ತು ಅದರ ಫಲವು ನಮ್ಮನ್ನು ಎಡೆಬಿಡದೆ ಕಾಡುತ್ತದೆ. ಆದರೆ ಆಧಿಕಾರಿಕ ಪುರುಷರಾದ ಮಹಾತ್ಮರು ನಮ್ಮನ್ನು ಕರ್ಮಜಂಜಡದಿಂದ ಬಿಡಿಸಲು ಮಾರ್ಗದರ್ಶನ ಮಾಡುವ, ಪಥದರ್ಶನ ಮಾಡಿಸುವ ದಿವ್ಯ ದೀಪಧಾರಿಗಳು.

ಶ್ರೀರಾಮಕೃಷ್ಣ ಪರಮಹಂಸ [೧೮೩೬–೧೮೮೬] ಶ್ರೀರಮಣ ಮಹರ್ಷಿ [೧೮೭೯–೧೯೫೦] ಶ್ರೀ ಚಂದ್ರಶೇಖರ ಭಾರತೀಯವರು[೧೮೯೨–೧೯೫೪] ನಮಗೆ ತೀರಾ ಸಮೀಪರಾದ ಇತ್ತೀಚಿನ ದಿವ್ಯ ದೀಪಧಾರಿಗಳು. ನಮ್ಮನ್ನು ಬೆಳಕಿನೆಡೆಗೆ ಒಯ್ದ ಮಹಾನುಭಾವರು. ಅದ್ವೈತ ತತ್ತ್ವಕ್ಕೆ ನಿದರ್ಶನವಾಗಿದ್ದ ಜೀವನ್ಮುಕ್ತರು.

ಈ ಕೃತಿ "ಬೆಳಕು ತೋರಿದ ಗುರು" ಶೃಂಗೇರಿಯ ಶಾರದಾಪೀಠದಲ್ಲಿ ೧೯೧೨ ರಿಂದ ೧೯೫೪ರವರೆಗೆ ವಿರಾಜಮಾನರಾಗಿದ್ದ ಶ್ರೀ ಚಂದ್ರಶೇಖರ ಭಾರತೀಯವರನ್ನು ಕುರಿತ ಒಂದು ಕಿರುನೋಟ.

ನನ್ನ ಜನ್ಮಸ್ಥಳ ಶೃಂಗೇರಿ. ನನಗೆ ನನ್ನ ಆರು, ಒಂಭತ್ತು ಮತ್ತು ಇಪ್ಪತ್ತನೆಯ ವಯಸ್ಸಿನಲ್ಲಿ ಮೂರು ಬಾರಿ ಶ್ರೀ ಸ್ವಾಮಿಗಳ ದರ್ಶನವಾಗಿತ್ತು. ನನ್ನ ಆರನೆಯ ವಯಸ್ಸಿನಲ್ಲಿ ಶೃಂಗೇರಿಯ ಅಜ್ಜಿಮನೆಗೆ ಹೋಗಿದ್ದಾಗ ಶ್ರೀ ಚಂದ್ರಶೇಖರ ಭಾರತೀಯವರು ರಾತ್ರಿಯಲ್ಲಿ ನಡೆಸುತ್ತಿದ್ದ ಶ್ರೀ ಚಂದ್ರಮೌಳೀಶ್ವರ ಪೂಜೆಗೆ ನಾಲ್ಕೈದು ಬಾರಿಯಾದರೂ ಹೋಗಿದ್ದ ನೆನಪಿದೆ. ಆಗ ಶೃಂಗೇರಿಯಲ್ಲಿ ಇನ್ನೂ ವಿದ್ಯುದ್ದೀಪಗಳು ಬಂದಿರಲಿಲ್ಲ. ಮಠದಲ್ಲಿ ಮಾತ್ರ ಡೈನಮೋ ಇದ್ದುದರಿಂದ ವಿದ್ಯುದ್ದೀಪಗಳು ಬೆಳಗುತ್ತಿದ್ದವು. ಗುರುಗಳ ಪೂಜೆಗೆ ಹತ್ತು ಹದಿನೈದು ಜನ ಮಾತ್ರ ಇರುತ್ತಿದ್ದರು. ವೇದಘೋಷ ಮಾಡುವವರು ಮತ್ತು ಹೊರಗಿನ ಭಕ್ತರು. ಪೂಜೆಯೆಲ್ಲಾ ಬೆಳೆದ ನಂತರ ಶ್ರೀಸ್ವಾಮಿಗಳು ನನ್ನತ್ತ ತಿರುಗಿ 'ಬಾ' ಎಂದು ಕಣ್ಸನ್ನೆ ಮಾಡುತ್ತಿದ್ದರು. ನಾನು ಅವರ ಸಮೀಪಕ್ಕೆ ಹೋಗಿ



ಕೈಮುಗಿದು ನಿಲ್ಲುತ್ತಿದ್ದೆ. ಹಸನ್ಮುಖದಿಂದ ಕಲ್ಲುಸಕ್ಕರೆ, ಬಾದಾಮಿ, ಖರ್ಜೂರ, ದ್ರಾಕ್ಷಿಗಳ ಮಿಶ್ರಣವಾದ ಪ್ರಸಾದದ ಪೊಟ್ಟಣವನ್ನು ನನಗೆ ನೀಡುತ್ತಿದ್ದರು. ನಾನು ಆಗ ಐದು ಆರು ತಿಂಗಳುಗಳ ಕಾಲ ಶೃಂಗೇರಿಯಲ್ಲಿದ್ದೆ. ಈ ಅದೃಷ್ಟವು ನಾಲ್ಕೈದು ಬಾರಿಯಾದರೂ ನನಗೆ ಲಭಿಸಿತ್ತು.

ಮುಂದೆ ೧೯೩೮ರಲ್ಲಿ ಗುರುಗಳು ಕಾಲಟಿಗೆ ಯಾತ್ರೆ ಹೋಗುವ ದಾರಿಯಲ್ಲಿ ನಮ್ಮ ವಾಸಸ್ಥಳವಾಗಿದ್ದ ಮಂಡ್ಯಕ್ಕೆ ಆಗಮಿಸಿ, ಪೌರಸಭೆಯವರು ನಿರ್ಮಿಸಿದ್ದ ಚಪ್ಪರದಲ್ಲಿ ಕಾರನ್ನು ನಿಲ್ಲಿಸಿದ್ದರು. ನನ್ನ ತಾತ ಕರಾಳ ಲಕ್ಷ್ಮೀನರಸಿಂಹ ಶಾಸ್ತ್ರಿಗಳು ಪೂರ್ಣಕುಂಭವನ್ನು ನೀಡಿ ಫಲಸಮರ್ಪಣೆ ಮಾಡಿದರು. ನಾನು ತಾತನ ಪಕ್ಕದಲ್ಲಿ ವೇದವಿದ್ವಾಂಸರ ಸಮೂಹದಲ್ಲಿ ನಿಂತಿದ್ದೆ. ನನಗೆ ಆಗ ಗುರುದರ್ಶನ ಲಭಿಸಿತ್ತು.

ಮುಂದೆ ೧೯೪೯ರಲ್ಲಿ ನನ್ನ ಇಪ್ಪತ್ತನೆಯ ವಯಸ್ಸಿನಲ್ಲಿ ನನ್ನ ತಂಗಿಯೊಡನೆ ಶೃಂಗೇರಿಗೆ ಹೋಗಿದ್ದೆ. ಆಗ ಅಲ್ಲಿ ಒಂದೆರಡು ತಿಂಗಳುಗಳಿದ್ದಂತೆ ನೆನಪು. ನನಗೆ ಬಾಲ್ಯದಿಂದಲೂ ಪದ್ಯಗಳನ್ನು ಓದುವ, ರಾಗವಾಗಿ ಹಾಡುವ ಗೀಳಿತ್ತು. ನನ್ನ ಸೋದರಮಾವನ ಪುಸ್ತಕ ಭಂಡಾರದಲ್ಲಿದ್ದ ಕವನ ಸಂಕಲನಗಳಿಂದ ಪದ್ಯಗಳನ್ನು ಉಯ್ಯಾಲೆಯಲ್ಲಿ ಕುಳಿತು ಹಾಡಿಕೊಳ್ಳುತ್ತಿದ್ದೆ. ನನ್ನ ಪದ್ಯವಾಚನ ಕೇಳಿದ ಉಪಾಧ್ಯಾಯರೊಬ್ಬರು ಬಂದು, ಮನೆಯ ಪಕ್ಕದಲ್ಲಿಯೇ ಇದ್ದ ಮಾಧ್ಯಮಿಕ ಶಾಲೆಯಲ್ಲಿ ನನ್ನ ಕಾವ್ಯವಾಚನವನ್ನು ಮಾಡಿಸಿದರು. ಮತ್ತೊಂದು ಕಾರ್ಯಕ್ರಮವನ್ನು ಒಂದು ದೇವಾಲಯದಲ್ಲಿ ಏರ್ಪಡಿಸಿದರು. ಆ ಕಾರ್ಯಕ್ರಮಕ್ಕೆ ಬಂದಿದ್ದ ಮುಲ್ಲಂಡ್ರಂ ವೆಂಕಟರಾಮ ಅಯ್ಯರ್ ಎಂಬ ಪಂಡಿತರು ನನ್ನ ವಾಚನವನ್ನು ಮೆಚ್ಚಿಕೊಂಡು, ಶ್ರೀ ಅಭಿನವ ವಿದ್ಯಾತೀರ್ಥರ ಸಮ್ಮುಖದಲ್ಲಿಯೂ ನನ್ನ ಕಾವ್ಯವಾಚನವನ್ನು ವ್ಯವಸ್ಥೆ ಮಾಡಿದರು.

ಆ ದಿನ ನನ್ನ ಕಾರ್ಯಕ್ರಮ ಮುಗಿಸಿ ಸಚ್ಚಿದಾನಂದ ವಿಲಾಸದ ಮಹಡಿಯಿಂದಿಳಿದು ಕೆಳಗೆ ಬಂದೆ. ಶ್ರೀ ಚಂದ್ರಶೇಖರ ಭಾರತೀಯವರ ಆಪ್ತಸಹಾಯಕರಾಗಿದ್ದ ರಾಮ ಸೋಮಯಾಜಿಯವರು ನನ್ನನ್ನು ಕುರಿತು"ನೀನು ನಮ್ಮ ಸ್ವಾಮಿಗಳ ಮೇಲೆಯೂ ಏನಾದರೂ ಬರೆದುಕೊಂಡು ಬಾ. ಅವರ ಮುಂದೆಯೂ ವಾಚನ ಮಾಡಬಹುದು" ಎಂದರು. ನನಗೆ ಆಶ್ಚರ್ಯವಾಯಿತು. ನನಗಾಗ ಇದ್ದುದು ಸಮಾಜವಾದ, ಸಮತಾವಾದಗಳ ಗುಂಗು. ನಾನು ಸೋಮಯಾಜಿ ಗಳಿಗೆ ಉತ್ತರಿಸಲಿಲ್ಲ.

ಮುಂದೆ ೧೯೬೦ರಲ್ಲಿ ಕೇಂದ್ರ ಸರ್ಕಾರದ ನೌಕರರ ಮಹಾಮುಷ್ಕರದ ಪರಿಣಾಮವಾಗಿ ನನಗೆ ಶಿಕ್ಷೆಯಾಗಿ ಚಿಕ್ಕಮಗಳೂರಿನ ಕೊಪ್ಪಕ್ಕೆ ವರ್ಗವಾಯಿತು. ಆದರೆ ಅದು ವರವಾಗಿ ಪರಿಣಮಿಸಿತು. ನನ್ನ ಮುಂದಿನ ದಾರಿಯನ್ನು ಸ್ಪಷ್ಟವಾಗಿ ತೋರಿಸಿತು.

ಕೊಪ್ಪದಿಂದ ಹತ್ತೊಂಬತ್ತು ಮೈಲಿ ದೂರದಲ್ಲಿದ್ದ ಶೃಂಗೇರಿಗೆ ಪ್ರತಿವಾರವೂ

ಹೋಗಿಬರುತ್ತಿದ್ದೆ. ಅಲ್ಲಿ ಶ್ರೀಶಾರದಾಂಬೆಯ ಕೃಪೆ ಮೌನವಾಗಿ ಕೆಲಸ ಮಾಡಲಾರಂಭಿಸಿತು. ೧೯೬೨ರಲ್ಲಿ ನನಗೆ ಅರಿವಾಗದಂತೆಯೇ ರಾಮ ಸೋಮಯಾಜಿಗಳು ಯಾರನ್ನು ಕುರಿತು ಬರೆದುಕೊಂಡು ಬಾ ಎಂದು ಹೇಳಿದ್ದರೋ, ಆ ಮಹಾತ್ಮರನ್ನು ಕುರಿತೇ ನನ್ನ ಮೊದಲ ಗದ್ಯಕೃತಿ, "ಮಹಾ ತಪಸ್ವಿ ಶ್ರೀಚಂದ್ರಶೇಖರ ಭಾರತೀ" ರಚಿತವಾಯಿತು. ಅದರ ರಚನೆ, ಪ್ರಕಟಣೆ ಎಲ್ಲವೂ ಪವಾಡದಂತೆ ಜರುಗಿದವು.

ಅನಂತರ ತುಂಗೆಯ ಮಡಿಲ ತಪಸ್ವಿ, ಅವಧೂತ ಗುರು ಶ್ರೀ ಚಂದ್ರಶೇಖರ ಭಾರತೀ, ಶ್ರೀ ಚಂದ್ರಶೇಖರ ಭಾರತೀ ಅನುಗ್ರಹ ಪರಂಪರೆ ಈ ಮೂರು ಪುಸ್ತಕಗಳೂ ಪ್ರಕಟವಾದುವು. ಶಾಸ್ತ್ರಗಳನ್ನು ಕ್ರಮವಾಗಿ ಅಧ್ಯಯನ ಮಾಡದವನೂ, ವಿಶ್ವವಿದ್ಯಾನಿಲಯಗಳ ಪದವೀಧರನಲ್ಲದವನೂ ಆದ ನನ್ನಿಂದ ಈ ಮಹತ್ಕೃತಿಗಳನ್ನು ಬರೆಸಿದ ಅಪೂರ್ವಶಕ್ತಿ ಗುರುದೇವರ ದಿವ್ಯಕಟಾಕ್ಷವಲ್ಲದೇ ಬೇರಾವುದೂ ಅಲ್ಲ.

ನನ್ನ ಈ ಎಲ್ಲಾ ಪುಸ್ತಕಗಳೂ ಹಲವಾರು ಬಾರಿ ಮುದ್ರಿತವಾಗಿವೆ. 'ಮಹಾತಪಸ್ವಿ' ಪುಸ್ತಕ ತೆಲುಗಿಗೂ ಅನುವಾದವಾಗಿದೆ. 'ಅನುಗ್ರಹ ಪರಂಪರೆ' 'ಲೆಗಸಿ ಆಫ್ ಬ್ಲೆಸಿಂಗ್ಸ್' ಶೀರ್ಷಿಕೆಯಲ್ಲಿ ಇಂಗ್ಲಿಷಿಗೆ ಅನುವಾದವಾಗಿದೆ. ಈ ಪುಸ್ತಕಗಳನ್ನು ಓದಿದ ವಾಚಕರು ತಮ್ಮ ಹರ್ಷ ಸಂತೋಷಗಳನ್ನು ಸೂಚಿಸಿ ಆಗಾಗ ಪತ್ರ ಬರೆಯುತ್ತಾರೆ. ಇದೆಲ್ಲವೂ ಶ್ರೀಶಾರದಾ ಗುರುಕೃಪೆಯೆಂದೇ ಭಾವಿಸಿದ್ದೇನೆ.

ಈ ಪ್ರಸಕ್ತ ಕೃತಿಯ ಆರಂಭದಲ್ಲಿ ಶ್ರೀ ಗುರುದೇವರ ಜೀವನ ಚಿತ್ರಣವಿದೆ, ಎರಡನೆಯ ಭಾಗದಲ್ಲಿ ಅವರು ತೋರಿದ ಮಾರ್ಗದರ್ಶನದ ಹಲವಾರು ನಿದರ್ಶನಗಳಿವೆ. ಈ ಎರಡೂ 'ತುಂಗೆಯ ಮಡಿಲ ತಪಸ್ವಿ' ಮತ್ತು ಅನುಗ್ರಹ ಪರಂಪರೆ ಪುಸ್ತಕಗಳ ಪರಿಷ್ಕೃತ ವಿಸ್ತೃತ ರೂಪಗಳಾಗಿವೆ. ಈ ಕೃತಿಗಳ ಸಾಮಗ್ರಿಯನ್ನು ಹಲವಾರು ಪುಸ್ತಕಗಳಿಂದಲೂ ಭಕ್ತರಿಂದಲೂ ಕಲೆ ಹಾಕಿದ್ದೇನೆ. ಅವರೆಲ್ಲರಿಗೂ ನನ್ನ ಹೃತ್ಪೂರ್ವಕ ವಂದನೆಯನ್ನು ಸಲ್ಲಿಸುತ್ತೇನೆ.

ಈ ಕೃತಿಯ ಪ್ರೇರಕರು, ಪ್ರಾಯೋಜಕರು, ಇದರ ಪ್ರಕಟಣೆಯಲ್ಲಿ ನೆರವಾದ ಎಲ್ಲರಿಗೂ, ಇದರ ವಿನ್ಯಾಸ ಮತ್ತು ಮುದ್ರಣ ಮಾಡಿದವರಿಗೂ ಶ್ರೀಶಾರದಾ ಗುರುಕೃಪೆಯು ವರ್ಷಿಸಲಿ ಎಂದು ಹಾರೈಸುತ್ತೇನೆ. ನನ್ನ ಅಪರ ವಯಸ್ಸಿನಲ್ಲಿ ಸಿದ್ಧವಾದ ಈ ಪುಸ್ತಕದಲ್ಲಿ ಏನಾದರೂ ಲೋಪದೋಷಗಳಿದ್ದಲ್ಲಿ ವಾಚಕರ ಕ್ಷಮೆಕೋರುತ್ತೇನೆ.

ವಿಳಂಬಿ ಸಂವತ್ಸರ — ಇತಿ ಶಮ್
ಜ್ಯೇಷ್ಠ ಬಹುಳ ಚತುರ್ಥಿ — **ಹುರಗಲವಾಡಿ ಲಕ್ಷ್ಮೀನರಸಿಂಹ ಶಾಸ್ತ್ರೀ**
೦೧/೦೭/೨೦೧೮



# ಪರಿವಿಡಿ

## ಭಾಗ – ೧

**ಭಾಗ – ೨**





**ಶಾರದಾಂಬಾನವರ ಫೋಟೋ**

## ಶ್ರೀ ಶ್ರೀ ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿ ವಿರಚಿತ

## ಗಣೇಶ ಸ್ತುತಿ ಮಂಜರಿ

**೧. ಸದ್ಗುರು ಗಜಾಸ್ಯವಾಣೀ ಚರಣಯುಗಾಂಭೋರುಹೇಷು ಮದ್ಧೃದಯಂ ।**
**ಸತತಂ ದ್ವಿರೇಫಲೀಲಾಂ ಕರುಣಾಮಕರಂದಲಿಪ್ಸಯಾ ತನುತಾಂ ॥೧॥**

ಸದ್ಗುರು ಗಣೇಶ ಮತ್ತು ವಾಣೀ (ಶಾರದೆ) ಯರ ಅನುಗ್ರಹದ ಮಧುವಿನಿಂದ ತುಂಬಿದ ಚರಣ ಕಮಲಗಳಲ್ಲಿ ನನ್ನ ಮನವು ಸದಾಕಾಲ ಕರುಣಾ ಮಕರಂದದಿಂದ ಪ್ರಮತ್ತವಾದ ದುಂಬಿಯಂತೆ ವಿನೋದಿಸಲಿ.

**೨. ಕಲ್ಯಾಣಂ ನಃ ಕ್ರಿಯಾಸುಃ ಕಟತಟವಿಗಲದ್ದಾನನೀರಪ್ರವಾಹೋನ್ಮಾದ್ಯದ್**
**ಭೃಂಗಾರವಾರವಿತನಿಖಿಲ ಜಗನ್ಮಂಡಲಸ್ಯೇಶಸೂನೋಃ ।**
**ಪ್ರತ್ಯೂಹಧ್ವಾಂತರಾಶಿಪ್ರಮಥನಶುಚಿಕಾಲೀನಮಧ್ಯಾಹ್ನಭಾನೋಃ**
**ವಾಮಾಶ್ಲಿಷ್ಟಪ್ರಿಯಸ್ಯ ಪ್ರಣತದುರಿತಹೃದ್ದಂತಿನಃ ಸತ್ಕಟಾಕ್ಷಾಃ ॥೨॥**

ಗಣೇಶನ ಗಂಡಸ್ಥಳದಿಂದ ಸ್ರವಿಸುತ್ತಿರುವ ಮದವೃಷ್ಟಿಯ ನಿನಾದದ ಸ್ವರದಿಂದ ಭೃಂಗಗಳು ದಿಕ್ಕುಗಳನ್ನು ಅನುರಣನದಿಂದ ತುಂಬಿಸುವಂತೆ, ಒಡನಾಡಿ ವಲ್ಲಭಾಲಿಂಗನ ದಲ್ಲಿರುವಂಥಹವನು, ಅಪಾರಾಹ್ನದ ರವಿತೇಜನಂತೆ ವಿಘ್ನ ಗಾಡಾಂಧಕಾರವನ್ನು ಓಡಿಸಲಿ. ಆತನ ಹಿತವಾದ ಕೃಪಾಶೀರ್ವಾದಗಳು ಪ್ರವಹಿಸಲಿ

**೩. ಸಿಂಧೂರಬಂಧುರಮುಖಂ ಸಿಂಧುರಮಾದ್ಯಂ ನಮಾಮಿ ಶಿರಾಸಾಽಹಮ್**
**ವೃಂದಾರಕ ಮುನಿಬೃಂದಕ ವಿಘ್ನಶೈಲದಂಭೋಲಿಮ್ ॥೩॥**

ದೇವಮುನಿವೃಂದಗಳ ಪರ್ವತಾಕಾರದ ವಿಘ್ನಗಳನ್ನು ಬರಸಿಡಿಲಿನಂತೆ ಬಡಿದೋಡಿಸುವ ಸಿಂಧೂರಾಲಂಕೃತವಾದ ಆದ್ಯಗಜಾನನಗೆ ಶಿರಸಾ ಪ್ರಣಾಮಗಳು

**೪. ಆಧೋರಣಾ ಅಂಕುಶಮೇತ್ಯ ಹಸ್ತೇ ಗಜಂ ವಿಶಿಕ್ಷಂತ ಇತಿ ಪ್ರಥಾಽಸ್ತಿ**
**ಪಂಚಾಸ್ಯಸೂನುರ್ಗಜ ಏವ ಹಸ್ತೇ ಧೃತ್ವಾಂಕುಶಂ ಭಾತಿ ವಿಚಿತ್ರಮೇತತ್ ॥೪॥**

ಹಸ್ತದಲ್ಲಿ ಅಂಕುಶವನ್ನು ಹಿಡಿದಿರುವ ಮಾವುತನು ಆನೆಯನ್ನು ನಿಯಂತ್ರಿಸುವ ಲೋಕಾರೂಢಿಗೆ ವಿಭಿನ್ನವಿರೋಧಬಾಸವಾಗಿ, ಆಶ್ಚರ್ಯಗಳ ಆಶ್ಚರ್ಯಗಳಂತೆ (ಸಖೇದಾಶ್ಚರ್ಯ) ಅದ್ಭುತವಾಗಿ ಶಿವನ ಮಗನಾದ (ಪಂಚಾಸ್ಯಕ್ಕೆ ಇನ್ನೊಂದು ಅರ್ಥ– ಸಿಂಹದ ಮರಿಯಾದ) ಈ ಗಜವು ಕೈಯಲ್ಲಿ ಅಂಕುಶವನ್ನು ಹಿಡಿದು ಮೆರೆದಾಡುತ್ತಿದೆ.

**೫. ಲೋಕೇ ಹಸ್ತತಲೇ ಸಮೇತ್ಯ ಹಿ ಸೃಣಿಂ ಶಿಕ್ಷಂತ ಆಧೋರಣಾಃ**
**ಸ್ತಂಬಕ್ರೀಡಮಿತಿ ಪ್ರಥಾಖಿಲಜನೈಃ ಸಂಶ್ರೂಯತೇ ದೃಶ್ಯತೇ ।**
**ಧೃತ್ವಾ ಸ್ವೀಯಶಯೇಽಂಕುಶಂ ಮದವಿಹೀನೋಽಯಂ ನಿರಾಧೋರಣಃ**
**ಚಿತ್ರಂ ಪಶ್ಯತ ರಾಜತೀಹ ವಿಬುಧಾಃ ಪಂಚಾಸ್ಯಸೂನುರ್ಗಜಃ ॥೫॥**

ಆಶ್ಚರ್ಯಕರವಾದ ವಿಷಯವೆಂದರೆ ಈ ಗಜ ದೇವರು ಸಾಧಾರಣ ಮದೋನ್ಮತ್ತ ಮೃಗದಂತೆ ಹುಚ್ಚೆದ್ದು ಓಡುತ್ತಿಲ್ಲ, ಯಾವುದೇ ಅಹಂ ಇಲ್ಲ ಮತ್ತು ಅಂಕುಶದಿಂದ ನಿರ್ಬಂಧಿಸಿಲ್ಲ ಮತ್ತು ಮೋಡಿ ಮಾಡಿದಂತೆ ತನ್ನ ಹಸ್ತದಲ್ಲಿ ಅಂಕುಶವನ್ನು ಹಿಡಿದುಕೊಂಡಿದ್ದಾನೆ

೬. **ಖಗಪೂಜಿತಸಚ್ಚರಣಾಂಬುಜಂ ಖಗಪಶಾತ್ರವವೇಷ್ಟಿತತುಂದಕಂ ।**
**ಕವನಸಿದ್ಧ್ಯಭಿಲಾಷ್ಯಹಮಾಶ್ರಯೇ ಕವನದೀಕ್ಷಿತಮಾದಿಗಜಾನನಂ ॥೬॥**

ಪಕ್ಷಿಗಳ ರಾಜ ಗರುಡನು ಗಣೇಶನನ್ನು ಪೂಜಿಸುತ್ತಾನೆ, ಆದರೆ ಗರುಡನ ಶತ್ರುವಾದ ಸರ್ಪವು ಉದರಕ್ಕೆ ಬಿಗಿಯಲ್ಪಟ್ಟಿದೆ ಒಗಟಾಗಿರುವ ಗಣೇಶನು ನನ್ನ ನಾಲಿಗೆಯನ್ನು ಕವಿತ್ವ (ಕಾವ್ಯ ರಚಿತ್ವ) ದಿಂದ ಸಿಂಗರಿಸಲಿ

೭. **ಗಗನಚಾರಿಭಿರಂಚಿತಪಾದುಕಂ ಕರಧೃತಾಂಕುಶಪಾಶಸುಮೋದಕಮ್ ।**
**ಜಿತಪತಂಗರುಚಿಂ ಶಿವಯೋರ್ಮುದಂ ದದತಮಾದಿಗಜಾನನಮಾಶ್ರಯೇ ॥ ೭॥**

ಗಗನಚಾರಿಗಳು (ದಿವ್ಯ ಆಕಾಶೀಯರು) ಯಾರ ಚರಣಗಳನ್ನು ಹುಡುಕುತ್ತಾರೋ, ಯಾರದೇಹವು ಸೂರ್ಯನಂತೆ ಝಗಮಗಿಸುವುದೋ, ಕರಗಳಲ್ಲಿ ಪಾಶ, ಅಂಕುಶ ಮತ್ತು ಮೋದಕಗಳನ್ನು ಹಿಡಿದು ತನ್ನ ತಂದೆ ತಾಯಿಗಳಿಗೆ (ಶಿವ, ಶಕ್ತಿಗಳಿಗೆ) ಶಾಶ್ವತ ಸಂತೋಷದ ಮೂಲವೋ, ಆ ಆದಿಗಜಾನನನಿಗೆ ನಮಿಸಿ ಆಶ್ರಯಿಸುವೆ

೮. **ನಾಗಾನನಸ್ಯ ಜಠರೇ ನಿಬದ್ಧೋಽಯಂ ವಿರಾಜತೇ ।**
**ವಿನಿರ್ಗತೋ ಯಥಾ ನಾಗೋ ನಾಭ್ಯಧೋಭುವನಾದ್ಬಹಿಃ ॥ ೮॥**

ಸರ್ಪವು (ಸೊಂಟಕ್ಕೆ ಸುತ್ತಿಕೊಂಡಿರುವ), ಗಣೇಶನ ಉದರದಲ್ಲಡಗಿರುವ ಸಪ್ತಲೋಕಗಳಿಂದ ಹೊರಹೊಮ್ಮಿರುವಂತೆ ಗೋಚರವಾಗುತ್ತಿದೆ.

೯. **ಪ್ರಲಂಬಾರಿಮುಖಸ್ತುತ್ಯಂ ಜಗದಾಲಂಬಕಾರಣಂ ।**
**ಲಂಬಿಮುಕ್ತಾಲತಾರಾಜಲ್ಲಂಬೋದರಮಹಂ ಭಜೇ ॥೯॥**

ಜಗದಾಲಂಬಕಾರಣ (ಜಗಕ್ಕೆ ಸಹಕಾರವನ್ನೀಯುವ) (ಲೋಕವು ಆಶ್ರಯಿಸುವ), ಕೊರಳಲ್ಲಿ ಮುತ್ತಿನ ಹಾರವನ್ನು ಧರಿಸಿರುವ ಪ್ರಲಂಬಾಸುರನ ಶತ್ರುವಾದ ವಿಷ್ಣುವಿನಿಂದ ಹೊಗಳಲ್ಪಟ್ಟಿರುವ, ಕಂಠದಲ್ಲಿ ಮುತ್ತಿನಹಾರದಿಂದ ಕಂಗೊಳಿಸುತ್ತಿರುವ ಲಂಬೋದರನಾದ ಗಣೇಶನನ್ನು ಪೂಜಿಸುತ್ತೇನೆ.

೧೦. **ಗಜೇಂದ್ರವದನಂ ಹರಿಪ್ರಮುಖದೇವಸಂಪೂಜಿತಂ**
**ಸಹಸ್ರಕರತೇಜಸಂ ಸಕಲಲೋಕಕಾಮಪ್ರದಂ ।**
**ದಯಾರಸಮದೋದಕಸ್ರವದುಭೌ ಕಟೌ ವಿಭ್ರತಂ**
**ನಮಾಮಿ ಶಿರಸಾ ಸದಾ ಶೃಣಿವಿಭೂಷಿತಂ ವಿಘ್ನಪಂ ॥೧೦॥**

ಗಜೇಂದ್ರವದನನಿಗೆ, ಗಜಾನನನಿಗೆ ನಮಸ್ಕಾರಗಳು, ಕೈಯಲ್ಲಿ ಅಂಕುಶದೊಂದಿಗೆ ಸಹಸ್ರಕಿರಣಗಳ ಸೂರ್ಯನಂತೆ ಶೋಭಾಯಮಾನವಾಗಿದ್ದಾನೆ ಸರ್ವಪೂಜಿತನು ಮತ್ತು ಹರಿ ಮೊದಲಾದ ದೇವರುಗಳಿಂದ ಪೂಜಿಸಲ್ಪಟ್ಟವನು ಸಕಲ ಲೋಕಗಳಿಗೂ



ಅಸಂಖ್ಯಾತ ಆಶೀರ್ವಾದಗಳನ್ನು ನೀಡುವ ಮತ್ತು ಪೋಷಿಸುವ ವರದಾಯಕನಿಗೆ ನಮನಗಳು

೧೧. **ಗಂಡಸ್ರವತ್ಸ್ವಚ್ಛಮದಪ್ರವಾಹಗಂಗಾಕಟಾಕ್ಷಾರ್ಕಸುತಾಯುತಶ್ಚ ।**
**ಜಿಹ್ವಾಂಚಲೇ ಗುಪ್ತವಹತ್ಸರಸ್ವತೀಯುತೋಽಯಮಾಭಾತಿ ಗಜಪ್ರಯಾಗಃ ॥**

ಪ್ರಯಾಗದ ತ್ರಿವೇಣಿ ಸಂಗಮದಂತೆ, ಗಂಡಸ್ಥಳದಿಂದ ಪ್ರವಹಿಸುತ್ತಿರುವ ಮದಪ್ರವಾಹ, ಗಾಢವಾದ ಕಣ್ಣೋಟದಿಂದ ಗಂಗೆ, ಯಮುನೆಯರು ಉಕ್ಕಿ ಹರಿಯುತ್ತಿದ್ದಾರೆ, ಜಿಹ್ವಾಗ್ರದಿಂದ ಪ್ರವಹಿಸುತ್ತಿರುವ ಸರಸ್ವತಿ ಗುಪ್ತಗಾಮಿನಿಯಾಗಿ ಮುನ್ನುಗ್ಗಲು, ಈ ನದಿಗಳ ಸಂಗಮವು ಗಜಪ್ರಯಾಗವಾಗಿದೆ.

ಪ್ರಯಾಗದಲ್ಲಿ ಗಂಗಾ, ಯಮುನಾ, ಸರಸ್ವತಿಯರ ತ್ರಿವೇಣಿ ಸಂಗಮವಿದ್ದು ಲೋಕಕ್ಕೆ ಪುಣ್ಯದಾಯಕವಾಗಿದೆ. ಸರಸ್ವತಿ ಗುಪ್ತಗಾಮಿನಿಯಾಗಿ ಪ್ರವಹಿಸುತ್ತಾಳೆ.

ಗುರುಗಳಾದ ಶ್ರೀ ಚಂದ್ರಶೇಖರ ಭಾರತೀಸ್ವಾಮಿಗಳಿಗೆ ಗಣೇಶನ ಮುಖಾರವಿಂದದಲ್ಲಿ ಗಂಗಾ ಯಮುನಾ, ಜಿಹ್ವಾಂಚನದಲ್ಲಿ ಸರಸ್ವತಿಯು ಗುಪ್ತಗಾಮಿನಿಯಾಗಿ ಮನೋಹರವಾದ ಭಾವನಾ ತ್ರಿವೇಣಿ ಸಂಗಮ ಗೋಚರಿಸುವಂತಿದೆ

೧೨. **ದಂತೀನಟಃ ಸ್ವಪುರತೋಽಂಗಣರಿಂಖಮಾಣ**
**ಪಾಂಚಾಲಿಕೇಕ್ಷಣವತಾಮಿತಿ ಸೂಚಯನ್ ಸನ್ ।**
**ಮತ್ಪಾದತಾಮರಸಬಂಭರಮಾನಸಾನಾಂ**
**ಜಿಹ್ವಾಂಗಣೇಽಜಗೃಹಿಣೀಂ ಖಲು ನಾಟಯಾಮಿ ॥೧೨॥**

ಗಣೇಶ (ದಂತೀ) ಅಧ್ಭುತ ನಟನಾಗಿರುವನು ಮತ್ತು ಯಾರು ಆತನ ಪಾದಗಳಲ್ಲಿ ತಮ್ಮ ಮನಸ್ಸನ್ನು ಸ್ಥಿರವಾಗಿಸಿದ್ದಾರೋ ಅವರ ನಾಲಿಗೆಯಲ್ಲಿ ಸರಸ್ವತಿ ನಾಟ್ಯವಾಡುತ್ತಾಳೆಂದು ಸೂಚಿಸುತ್ತಿದ್ದಾನೆ.

೧೩. **ಪಿನಾಕಿಪಾರ್ವತೀಮುಖಾರವಿಂದಭಾಸ್ಕರಾಯಿಂತಂ**
**ವರಾಯಭಯಾಂಕುಶಾದಿಮಾನ್ ಪ್ರಫುಲ್ಲಕಂಜಸಂನಿಭೈಃ ॥**
**ಕರೈರ್ದಧಾನಮಾನಮತ್ಸುತೀಕ್ಷಣಬುದ್ಧಿದಾಯಕಂ**
**ಸಮಸ್ತವಿಘ್ನನಾಶಕಂ ನಮಾಮ್ಯಹಂ ವಿನಾಯಕಮ್ ॥೧೩॥**

ಶಿವ ಪಾರ್ವತೀಯರ ಮುಖಾರವಿಂದಗಳಿಗೆ ಮುದ ನೀಡುತ್ತಿರುವ ಕೋಟಿಸೂರ್ಯ ಸಮಪ್ರಭನು, ಹಸ್ತಗಳಲ್ಲಿ ವರಾಂಕುಶ ಅಭಯ ಧಾರಿಯಾಗಿರುವ ಪೂರ್ಣ ವಿಕಸಿತ ಕಮಲಗಳಂತೆ ಹೊಳೆಯುತ್ತಿರುವ ವಿನಾಯಕನಿಗೆ ನಮಸ್ಕಾರಗಳು

೧೪. **ಅಂತರಾಯಗಿರಿಕೃಂತನವಜ್ರಂ ದಂತಕಾಂತಿಸುವಿಭಾಸಿತಲೋಕಂ।**
**ಚಿಂತನೀಯ ಮನಿಶಂ ಮುನಿಬೃಂದೈಃ ಚಿಂತಯಾಮಿ ಸತತಂ ಗಣನಾಥಮ್ ॥೧೪॥**

ಪರ್ವತಗಾತ್ರದ ವಿಘ್ನಗಳನ್ನು ನಿವಾರಿಸುವ ಗಣನಾಥನನ್ನು ಧ್ಯಾನಿಸುತ್ತೇನೆ. ತನ್ನ ದಂತಕಾಂತಿಯಿಂದ ಜಗತ್ತನ್ನು ಪ್ರಜ್ವಲಿಸುವ, ಮುನಿವೃಂದಗಳು ಸದಾ ಚಿಂತಿಸುವ, (ಆಲೋಚಿಸುವ) ಗಣೇಶನನ್ನು ಸತತ ಧ್ಯಾನಿಸುತ್ತೇನೆ.

**೧೫. ಮುಕ್ತಿವಧೂವರಣೋತ್ಸುಕಲೋಕೋ ರಕ್ತಿಮಾಶಾಶ್ವತ ಆಶು ವಿಹಾಯ ।**
**ಭಕ್ತಿಯುತೋಽಮರಪೂಜಿತಮುರ್ತೇ ಶಕ್ತಿಗಣೇಶ ಮುದಾಽರ್ಚತಿ ಹಿ ತ್ವಾಮ್**
**॥೧೫॥**

ಲೌಕಿಕದ ಆಶಾಪಾಶಗಳನ್ನು ತೊರೆಯುತ್ತಾ ಮಹಾತ್ಮರೆನಿಸಿರುವ ಯೋಗಿಗಳು, ಋಷಿಗಳು ನಿನ್ನನ್ನು ಧ್ಯಾನಿಸುತ್ತಾರೆ.

ಶಕ್ತಿಗಣೇಶನನ್ನು ಭಕ್ತಿಯಿಂದ ಪೂಜಿಸಿದರೆ ಲೌಕಿಕದಿಂದ ವಿರಕ್ತರಾಗಿ ಮುಕ್ತಿಯನ್ನು ಪಡೆಯುತ್ತಾರೆ.

**೧೬. ಯತ್ಪಾದಪಂಕಜಮತೀವ ಸುಪುಣ್ಯಪಾಕಾಃ ಸಂಪೂಜಯಂತಿ**
**ಭವಸಾಗರತಾರಣಾರ್ಥಮ್ ।**
**ತಂ ಪಾರ್ವತೀಶಿವಮುಖಾಬ್ಜಸಹಸ್ರಭಾನುಂ ವಂದೇ**
**ಸಮಸ್ತವಿಷಯಾಂಚಿತಮಾವಹಂತಮ್॥೧೬॥**

ಭವಸಾಗರದ ತಾರಣಕ್ಕೆ (ಬಂಧನ ನಿವೃತಿಗೆ) (ಭವ ಸಮುದ್ರವನ್ನು ಧಾಟಿಸುವುದು) ಒಳ್ಳೆಯ ಪುಣ್ಯಕಾರ್ಯಗಳನ್ನು ಮಾಡಿರುವ ಸುಪುಣ್ಯಕರು ವಿಘ್ನೇಶನ ಪಾದ ಪಂಕಜಗಳನ್ನು ಸಂಪೂಜಿಸುತ್ತಾರೆ. ಶಿವಪಾರ್ವತಿಯರಿಗೆ ಚಿರಂತನ ಪರಮಾನಂದ ವನ್ನೂ ನೀಡುವ ಸಹಸ್ರಭಾನುವಿನಂತೆ ಪ್ರಜ್ವಲಿಸುತ್ತಿರುವ ಸುಮುಖನು ಎಲ್ಲರನೂ ಆಶೀರ್ವದಿಸಲಿ

**೧೭. ಗಂಡಪ್ರದೇಶವಿಗಲನ್ಮದನೀರಪಾನಮತ್ತದ್ವಿರೇಫಮಧುರಸ್ವರದತ್ತಕರ್ಣಮ್ ।**
**ವಿಘ್ನಾದ್ರಿಭೇದಶತಕೋಟಿಮುಮಾದಿಗುರ್ವೋಃ ವಕ್ತ್ರಾಬ್ಜಭಾಸ್ಕರಗಣೇಶಮಹಂ**
**ನಮಾಮಿ ॥೧೭॥**

ತನ್ನ ತೋಷಿತ (ಸಂತೋಷಭರಿತ) ಮಾತಾಪಿತೃಗಳು ಹಾಗೂ ಗಂಡ ಸ್ಥಳದಿಂದ ಸ್ರವಿಸುತ್ತಿರುವ ಮದಸ್ರಾವವನ್ನು ಸುತ್ತುವರೆದಿರುವ ದುಂಬಿಗಳ ಝೇಂಕಾರದ ಸಂಗೀತದಲ್ಲಿ ಮೈಮರೆತಿರುವ ವಿಘ್ನನಿವಾರಕನಿಗೆ ತಲೆಬಾಗಿ ನಮಿಸುತ್ತೇನೆ

**೧೮. ಗಣೇಶೋಽಯಂ ಸೂಚಯತಿ ಮದ್ದ್ರಷ್ಟ್ಯಣಾಂ ದದೇ ಶ್ರಿಯಮ್ ।**
**ಅಶ್ವಪೂರ್ವಾಂ ರಥಮಧ್ಯಾಂ ಹಸ್ತಿನಾದಪ್ರಬೋಧಿನೀಮ್॥೧೮॥**

ಮೊದಲು (ಆದಿಯಲ್ಲಿ) ಅಶ್ವ, ನಂತರ (ಮದ್ಯದಲ್ಲಿ) ರಥ ಮತ್ತು ಆನೆಯನ್ನು ನೀಡುವ, ಸದಾಕಾಲ ಇದೇ ಮೊದಲಾದ ಸಕಲಸೌಭಾಗ್ಯವನ್ನು ಅನುಗ್ರಹಿಸಲು ಸಿದ್ದನಾಗಿರುತ್ತಾನೆ ನಮ್ಮ ಗಣೇಶ.

**೧೯. ಪುರೇಂದುಕೋಪಯುಕ್ತದಂತಿಸಾಂತ್ವನೇತತಾರಕಾಃ**
**ಉತ ಸ್ಮಿತಾಂಶುಸಂಚಯೋ ದಿನೇ ದಿನೇ ವಿಜೃಂಭಿತಃ ।**
**ಉತೋತ್ತಮಾಂಗನಿಸ್ಸೃತಾ ನು ಕುಂಭಸಂಭವಾ ಇತಿ**
**ಗಣೇಶಕಂಠತಾರಕಾ ಭವಂತಿ ಸಂಶಯಾಸ್ಪದಮ್ ॥೧೯॥**

ಹೇ ಗಣೇಶ, ನಿನ್ನ ಕಂಠದಲ್ಲಿ ಝಳಪಿಸುತ್ತಿರುವ ಮುತ್ತುಗಳು, ಚಂದ್ರನ ಮೇಲಿನ ನಿನ್ನ ಮುನಿಸನ್ನು ಶಾಂತ ಮಾಡಲು ಜಾರಿದ ತಾರೆಗಳೇನು ? ಅಥವಾ ನಿತ್ಯ



ವೃದ್ಧಿಸುತ್ತಿರುವ ಚಂದ್ರ (ಚಂದಿರನ ಗೊಂಚಲೋ) ಅಥವಾ ಉತ್ತಮವಾದ ಗಜದಿಂದ ಮೂಡಿದ ನಿಜವಾದ ಗಜಮೌಕ್ತಿಕವೋ ಎಂಬ ಸಂಶಯ ಮೂಡುತ್ತದೆ.

"ಮೌಕ್ತಿಕ್ರ್ಯ ನ ಗಜೆ ಗಜೆ" ಎಂಬ ವಾಕ್ಯದಂತೆ ಎಲ್ಲಾ ಆನೆಗಳಲ್ಲು ಗಜಮೌಕ್ತಿಕವು ದೊರೆಯುವುದಿಲ್ಲ.

**೨೦. ಮದದಂಘ್ರ್ಯರ್ಚಕಾನಾಂ ಭವೇಜ್ಜಾನುದಘ್ನೋ**
**ಭವಾಂಭೋಧಿರಿತ್ಯೇತಮರ್ಥಂ ವಿವಕ್ಷುಃ ।**
**ಕರೌ ಜಾನುಯುಗ್ಮೇ ನಿಧಾಯಾ ವಿರಾಸ್ತೇ ಪುರಃ**
**ಶ್ರೀ ಗಣೇಶಃ ಕೃಪಾವಾರಿರಾಶಿಃ ॥೨೦॥**

ತನ್ನ ಭಕ್ತರ ಭವಸಾಗರದ ಆಳವು ಮೊಳಕಾಲು ಮಟ್ಟದೇ ಆಗಿರುತ್ತದೆ ಎಂಬುದರ ಭಾವಾರ್ಥದಂತೆ

ತನ್ನ ಮಂಡಿಗಳ ಮೇಲೆ ಕೈಗಳನ್ನು ಇಟ್ಟುಕೊಂಡಿರುವ ಗಣೇಶನಂತೆ ನನಗೆ ಭಾಸವಾಗುತ್ತಿದೆ

**೨೧. ಲೋಕೇ ಧನಾಢ್ಯೋ ಧನಿನಃ ಕರೋತಿ ಸ್ವಪಾದಮೂಲೇತಜನಾನ್ ದರಿದ್ರಾನ್ ।**
**ತ್ವಂ ಪಾಶಯುಕ್ತೋಪಿ ಪದಾಬ್ಜನಾಮ್ರಾನ್ ಪಾಶೈರ್ವಿಮುಕ್ತಾನ್ ಕಿಮು ಯುಕ್ತಮೇತತ್**
**॥೨೧॥**

ಈ ಜಗತ್ತಿನಲ್ಲಿ ಶ್ರೀಮಂತನು ತನ್ನನ್ನು ಕೋರಿ ಬರುವ ಬಡವರನ್ನು ಧನಿಕರನ್ನಾಗಿ ಮಾಡಬಹುದು ಆದರೆ  ನಿನ್ನ ಹಸ್ತದಲ್ಲಿ ಪಾಶವಿದ್ದರೂ ಬಿಗಿಯದೆ ಎಲ್ಲರನ್ನು ಮೋಚಿಸುತ್ತಿರುವ ನಿನಗೆ ಇದು ಯೋಗ್ಯವೇ ?

ಪಾಶದ ಉಪಯೋಗಕ್ಕೆ ವ್ಯತಿರಿಕ್ತವಾಗಿ, ವಿಮೋಚನೆಗೆ ಬಳಸುತ್ತಿರುವ ದ್ವೈಮಾತುರನ ಕಾರ್ಯಶೈಲಿಯ ಮೆಚ್ಚುಗೆಯನ್ನು ಗುರುಗಳು ವ್ಯಕ್ತಪಡಿಸಿದ್ದಾರೆ.

**೨೨. ಹೇ ಹೇರಂಬ ಮದೀಯಚಿತ್ತಹರಿಣಂ ಹ್ಯತ್ಯಂತಲೋಲಂ ಮುಧಾ**
**ಧಾವಂತಂ ವಿಷಯಾಖ್ಯದುಃಖಫಲದಾರಣ್ಯೇಽನುಧಾವನ್ನಹಮ್**
**ಶ್ರಾಂತೋ ನಾಸ್ತಿ ಬಲ ಮಮಾಸ್ಯ ಹನನೇ ಗ್ರಾಹೇಽಪಿ ವಾ ತದ್ಭವಾನ್**
**ಕೃತ್ವಾಽಸ್ಮಿನ್ ಪರಿಪಾತು ಮಾಂ ಕರುಣಯಾ ಶಾರ್ದೂಲವಿಕ್ರೀಡಿತಮ್**

ಹೇ ಹೇರಂಬ, ನನ್ನ ಮನಸ್ಸು ಚಪಲ ಚಿತ್ತದ ಚಾಂಪಲ್ಯದಿಂದ ಆಸೆಗಳ ಕಾಡಿನಲ್ಲಿ ಭಯದಿಂದ ಧಾವಿಸುತ್ತಿರುವ ಜಿಂಕೆಯಂತಾಗಿದೆ ನಾನು ದಣಿದಿರುವೆ, ಆ ಜಿಂಕೆಯನ್ನು ಹಿಡಿಯಲು ಕೊಲ್ಲಲು ಆಶಕ್ತನಾಗಿರುವೆ ಆಟಿಕೆಯ ಹುಲಿಯಂತೆ (ಶಾರ್ದೂಲ ವಿಕ್ತೀಡಿತಮ), ನನ್ನ ಮೂರ್ಖ ಮೃಗವನ್ನು ತೊಲಗಿಸು

"ಶಾರ್ದೂಲ ವಿಕ್ತೀಡಿತಮ್" ಎಂಬ ವೃತ್ತದಿಂದ ಈ ಶ್ಲೋಕವನ್ನು ಮಾಡಲಾಗಿದೆ ಇದರರ್ಥ "ಆಟಿಕೆಯ ಹುಲಿ" ಅಥವಾ "ಹುಲಿಯಾಟವೆಂದೆ"

ಮಿತಿಮೀರಿದ ಆಸೆಗಳೆಂಬ ಜಿಂಕೆಗಳು ಮನದಾಳದಲ್ಲಿ ಹತೋಟಿಗೆ ಸಿಗದೆ ಹುಚ್ಚಾಗಿ ಓಡುತ್ತಿದೆ, ಅದನ್ನು ಹಿಡಿಯಲಾಗದೆ, ಭಾವನೆಗಳನ್ನು ಕೊಲ್ಲಲಾಗದೆ ದಣಿದಿರುವಂತಾಗಿದೆ

ಅಮೃತ ಬಿಂಧುವಾಗಿರುವ, ಅವಧೂತ ಗುರುಗಳು, ಶ್ರೀಶ್ರೀ ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಗಳು ಅಶಕ್ತ ಶಾರ್ದೂಲವೆಂಬ ಭಾವನೆಯಲ್ಲಿ, ವಿಷಯಾಖ್ಯದ, ಲೌಕಿಕದ ಅರಣ್ಯದಲ್ಲಿ ಧಾವಿಸುತ್ತಿರುವ ಚಿತ್ತಹರಿಣವನ್ನು (ಮನಸ್ಸೆಂಬ ಜಿಂಕೆ) ಹಿಡಿಯಲು, ಕೊಲ್ಲಲು ಆಗುತ್ತಿಲ್ಲವೆಂದು ಹೇಳುತ್ತಿದ್ದಾರೆ.

* * *



# ೧. ಪಾವನಕ್ಷೇತ್ರ ಶೃಂಗೇರಿ

ಭರತಖಂಡದಲ್ಲಿ ನದಿಗಳ ಉಗಮಸ್ಥಾನಗಳು, ಅವು ಹರಿವೆಡೆಗಳು, ಗಿರಿಪರ್ವತಗಳು, ವನಕಾನನಗಳು, ಸಮುದ್ರತೀರ ಮುಂತಾದವುಗಳಿಗೆ ವಿಶೇಷ ಮಹತ್ವವುಂಟು. ವಿಶ್ವದ ಇತರ ದೇಶಗಳಲ್ಲೆಲ್ಲಾ ಇಂತಹ ಸ್ಥಳಗಳಲ್ಲಿ ವಿಹಾರ ಕೇಂದ್ರಗಳೂ, ಪ್ರವಾಸೀತಾಣಗಳೂ ಏರ್ಪಟ್ಟಿದ್ದರೆ ಭಾರತದಲ್ಲಿ ಅವು ಆಧ್ಯಾತ್ಮಿಕ ಪ್ರಯೋಗಶಾಲೆಗಳಾಗಿವೆ. ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ, ಅಬುವಿನಿಂದ ಅಸ್ಸಾಮದವರೆಗೆ ವ್ಯಾಪಿಸಿರುವ ಪುಣ್ಯಕ್ಷೇತ್ರಗಳೂ, ತೀರ್ಥಕ್ಷೇತ್ರಗಳೂ, ಗಿರಿವನಗಳೂ ಮಂತ್ರದ್ರಷ್ಟಾರರಾದ ಋಷಿವರ್ಯರ ತಪೋಕೇಂದ್ರಗಳಾಗಿದ್ದು ಜ್ಞಾನ, ಭಕ್ತಿ ಮತ್ತು ವೈರಾಗ್ಯದ ಉಗಮಸ್ಥಾನಗಳಾಗಿವೆ.

"ಬ್ರಹ್ಮ ಸತ್ಯಂ, ಜಗನ್ಮಿಥ್ಯಾ" ಎಂಬ ತತ್ತ್ವವನ್ನು ಬೋಧಿಸಿದ ಚತುರ್ವೇದಗಳೂ, ಬ್ರಹ್ಮಸೂತ್ರ, ಸ್ಮೃತಿ, ಪುರಾಣಗಳು, ಶಾಸ್ತ್ರಗಳು, ಅನೇಕ ಕಾವ್ಯ, ನಾಟಕಗಳೂ ಸಹ ರಚಿತವಾದುದು ಈ ಗಿರಿವನ ಪ್ರಾಂತಗಳಲ್ಲಿಯೇ. ಸತ್ಯಸಾಕ್ಷಾತ್ಕಾರಕ್ಕೆ ಹಲವು ಮಾರ್ಗಗಳನ್ನು ಕಂಡುಹಿಡಿದು, ಆ ಹಾದಿಗಳಲ್ಲಿ ತಾವು ನಡೆದು ಆತ್ಮಸಾಕ್ಷಾತ್ಕಾರ ಮಾಡಿಕೊಂಡು, ಮಂತ್ರದ್ರಷ್ಟಾರರಾಗಿದ್ದ ಋಷಿಗಳು ತಪೋನಿರತರಾಗಿದ್ದುದು ಇಂತಹ ಪವಿತ್ರಸ್ಥಳಗಳಲ್ಲಿಯೇ. ಪುಣ್ಯತಮವಾದ ಆಶ್ರಮಗಳಲ್ಲಿ ನೆಲಸಿ ಅವರಿಂದ ಮಾರ್ಗದರ್ಶನ ಪಡೆದು ಸಾಧಕರು ನಿಜಬೆಳಕನ್ನು ಕಂಡು ಜೀವನದ ಸಾರ್ಥಕ್ಯವನ್ನು ಪಡೆದುದೂ ಇಲ್ಲಿಯೇ.

ನಗರ, ಗ್ರಾಮಗಳಿಂದ ವೇದಾದಿ ಶಾಸ್ತ್ರಗಳನ್ನು ಕಲಿಯಲು ಬ್ರಾಹ್ಮಣ ಕುಮಾರರು ಬರುತ್ತಿದ್ದುದೂ ಇಲ್ಲಿಗೇ. ಶಸ್ತ್ರಾಸ್ತ್ರ ವಿದ್ಯೆ, ರಾಜನೀತಿಗಳನ್ನು ಕಲಿಯಲು ಕ್ಷತ್ರಿಯ ಕುಮಾರರು ಬರುತ್ತಿದ್ದುದೂ ಇಲ್ಲಿಗೇ. ವೈಶ್ಯ ಶೂದ್ರಾದಿ ಎಲ್ಲಾ ಜಾತಿ, ಮತ, ಪಂಥದ ಬಾಲಕರೂ ತಮ್ಮ ತಮ್ಮ ಅರ್ಹತೆಗೆ ತಕ್ಕಂತೆ ವಿದ್ಯೆ ಕಲಿಯಲು ಬರುತ್ತಿದ್ದುದೂ ಮಹರ್ಷಿಗಳ ಪಾದ ಸನ್ನಿಧಿಗೇ, ಪ್ರಕೃತಿ ಸೌಂದರ್ಯದ ದೇಗುಲಕ್ಕೇ, ಸರ್ವ ವಿದ್ಯೆಗಳನ್ನೂ ಕಲಿಸುವ ಇಂತಹ ವಿಶ್ವ ವಿದ್ಯಾನಿಲಯಗಳಿಗೇ.

ರಾಜರುಗಳೂ, ಮಂತ್ರಿಗಳೂ, ಸೇನಾನಾಯಕರೂ, ಇತರ ಅಧಿಕಾರಿಗಳೂ, ಪ್ರಜೆಗಳೂ ಸಹ ಋಷಿಗಳ ಆಶೀರ್ವಾದ ಅನುಗ್ರಹಗಳನ್ನು ಪಡೆಯಲು ಈ ವಿಪಿನ ಗಿರಿಧಾಮಗಳಿಗೆ ಬರುತ್ತಿದ್ದರು. ರಾಜ್ಯಾಡಳಿತದಲ್ಲಿ ಸಲಹೆ ಪಡೆಯಲು,

ಕಷ್ಟನಷ್ಟದಿಂದ ದಿಕ್ಕುಗಾಣದವರು ತಮ್ಮ ದುಃಖ ನಿವಾರಣೆ ಮಾಡಿಕೊಳ್ಳಲು, ಶಾಸ್ತ್ರಾದಿ ವಿಷಯಗಳಲ್ಲಿ ಸಂದೇಹ ಬಂದವರು ಆ ಕುರಿತು ಸರಿಯಾದ ತಿಳಿವನ್ನು ಪಡೆಯಲು ಈ ಪ್ರಕೃತಿದೇವಿಯ ಸನ್ನಿಧಿಯಲ್ಲಿರುತ್ತಿದ್ದ ಪವಿತ್ರಾತ್ಮರಲ್ಲಿ ಮೊರೆಯಿಡುತ್ತಿದ್ದರು. ಜೀವನಕ್ಕೆ ಬೇಕಾದ ಶ್ರದ್ಧೆ ನಂಬಿಕೆಗಳನ್ನು ಗಳಿಸಿ ಕೊಳ್ಳುತ್ತಿದ್ದರು. ಧೈರ್ಯ ಭರವಸೆಗಳನ್ನು ತುಂಬಿಕೊಂಡು ಹಿಂದಿರುಗುತ್ತಿದ್ದರು. ಈ ನದಿ, ವನ, ಗಿರಿಪ್ರಾಂತ್ಯಗಳು ಭಾರತೀಯ ಸಂಸ್ಕೃತಿಯ ಜೀವನಾಡಿ ಗಳಾಗಿದ್ದವು. ಅಟ್ಟಹಾಸದಿಂದ ಬಂದವರೂ ಈಯೆಡೆಗಳಲ್ಲಿ ವಿನೀತರಾಗಿ ಬಿಡುತ್ತಿದ್ದರು. ದರ್ಪ ಅಹಂಕಾರಗಳಿಂದ ಮತ್ತರಾದವರೂ ಸಹ ಈ ಸ್ಥಳಗಳಲ್ಲಿ ನಮ್ರತೆಯ, ವಿನಯದ ಮೂರ್ತಿಗಳಾಗಿ ಬಿಡುತ್ತಿದ್ದರು. ಇಲ್ಲಿನ ವಾತಾವರಣ, ಮಹಾಪುರುಷ ಸಂಸರ್ಗಗಳು ಚೈತನ್ಯದಾಯಕ ಕಾರಂಜಿಗಳಾಗಿದ್ದವು.

ಶ್ರೀಮತ್ ಶಂಕರ ಭಗವತ್ಪಾದರು ಭರತಭೂಮಿಯ ಅಖಂಡತೆಯನ್ನೂ, ಭಾರತೀಯ ಸಂಸ್ಕೃತಿಯ ಅದ್ವಿತೀಯತೆಯನ್ನೂ, ಸನಾತನ ಧರ್ಮದ ವಿಶ್ವವ್ಯಾಪಕತ್ವವನ್ನೂ ಜಗತ್ತಿಗೆ ಸಾರಲು, ಲೋಕಕ್ಕೆ ಸತ್ಯ ದರ್ಶನ ಮಾಡಿಸಿ, ಆಧ್ಯಾತ್ಮಿಕ ಜ್ಯೋತಿಯನ್ನು ಬೆಳಗಲು, ಭರತ ಖಂಡದ ನಾಲ್ಕು ದಿಕ್ಕುಗಳಲ್ಲಿಯೂ, ನಾಲ್ಕು ಜ್ಞಾನ ಕೇಂದ್ರಗಳನ್ನು ಸ್ಥಾಪಿಸಿದರು. ಭಾರತವೆಲ್ಲಾ ಒಂದೇ, ಅಭಿನ್ನವಾದುದು ಎಂಬ ನಂಬಿಕೆಯನ್ನು ಆಚಾರ್ಯರು ಈ ರೀತಿ ದೃಢ ಪಡಿಸಿದ್ದರು. ದೇಶದಲ್ಲಿ ಅನೇಕ ರಾಜರುಗಳು, ಪಾಳೆಯಗಾರರು ಇದ್ದರೂ ಸಹ ರಾಜಕೀಯ ಭಿನ್ನತೆಗೆ ವಿಚಲಿತರಾಗದೇ ಧಾರ್ಮಿಕ ಐಕಮತ್ಯವನ್ನು ಸ್ಥಾಪಿಸಿ, ಆಧ್ಯಾತ್ಮಿಕ ದುಂದುಭಿಯನ್ನು ಮೊಳಗಿಸಿದವರು ಶ್ರೀ ಶಂಕರ ಭಗವತ್ಪಾದರು.

ಹೀಗೆ ಸ್ಥಾಪಿಸಲ್ಪಟ್ಟ ಜ್ಞಾನಕೇಂದ್ರಗಳಲ್ಲೊಂದಾದ ದಕ್ಷಿಣಾಮ್ನಾಯ ಶಾರದಾ ಪೀಠವು ಸಹ್ಯಾದ್ರಿಯ ಪಂಕ್ತಿಯಲ್ಲಿ, ಗಿರಿಶೃಂಗದಲ್ಲಿ, ವನರಾಜಿಯ ನಡುವೆ ಪಾವನೆಯಾದ ತುಂಗೆಯ ತೀರದಲ್ಲಿ, ರಮಣೀಯವಾದ ಪ್ರಕೃತಿಸೌಂದರ್ಯದ ಮಡಿಲಿನಲ್ಲಿ, ಶಾಂತಿ ಸಂತುಷ್ಟಿಗಳ ದಿವ್ಯಧಾಮವಾದ ಶೃಂಗೇರಿಯಲ್ಲಿ ಆರಂಭಿಸಲ್ಪಟ್ಟಿತು. ಪೂರ್ವದಲ್ಲಿ ವಿಭಾಂಡಕ ಮಹರ್ಷಿಗಳ ಆಶ್ರಮವಾಗಿದ್ದು, ನಂತರ ಅವರ ಪುತ್ರ ಶ್ರೇಷ್ಠರಾದ ಋಷ್ಯಶೃಂಗರ ತಪೋಭೂಮಿಯಾಗಿ ಪವಿತ್ರವಾದ ಶೃಂಗೇರಿಯು ಶ್ರೀ ಶಂಕರ ಭಗವತ್ಪಾದರು ಪ್ರತಿಷ್ಠಾಪಿಸಿದ ಶ್ರೀಚಕ್ರ, ಶ್ರೀ ಶಾರದಾಂಬಾ ಮತ್ತು ವ್ಯಾಖ್ಯಾನಪೀಠ ಸ್ಥಾಪನೆಯಿಂದ ಪವಿತ್ರತಮವಾಯಿತು.

ಪೂಜ್ಯಪಾದರು ದೇಶವನ್ನೆಲ್ಲಾ ಕಾಲ್ನಡಿಗೆಯಲ್ಲಿಯೇ ಸಂಚರಿಸಿದರು. ಸಂಚಾರ ಕ್ರಮದಲ್ಲಿ ಹೆಚ್ಚಾಗಿ ನದಿಗಳ ಜಾಡನ್ನೇ ಹಿಡಿದು ಪರಿಕ್ರಮಿಸಬೇಕಾಗಿತ್ತು.



ಶಂಕರರು ಗೋಕರ್ಣಾದಿ ಕ್ಷೇತ್ರಗಳ ದರ್ಶನ ಮಾಡಿಕೊಂಡು ಶೃಂಗಗಿರಿಗೆ ಆಗಮಿಸಿದರು. ತುಂಗಾನದಿಯಲ್ಲಿ ಸ್ನಾನಾಹ್ನಿಕಗಳನ್ನು ಮಾಡಿ, ಅನುಷ್ಠಾನಕ್ಕೆ ಬರುತ್ತಿದ್ದಾಗ, ಸೋಪಾನದ ಮೇಲೆ ಆಶ್ಚರ್ಯಕರವಾದ ದೃಶ್ಯವೊಂದನ್ನು ಆಚಾರ್ಯರು ಕಂಡರು. ಕಪ್ಪೆಯೊಂದು ಪ್ರಸವವೇದನೆಯಿಂದ ಪರಿತಪಿಸುತ್ತ ಸುಡುವ ಬಂಡೆಯ ಮೇಲೆ ಒದ್ದಾಡುತ್ತಿತ್ತು. ಹತ್ತಿರದಲ್ಲಿಯೇ ಚಲಿಸುತ್ತಿದ್ದ ಒಂದು ಸರ್ಪವು ಒಡನೆಯೇ ಧಾವಿಸಿ ಬಂದು ಹೆಡೆ ಬಿಚ್ಚಿ ಕಪ್ಪೆಗೆ ನೆರಳನ್ನು ನೀಡಿತು. ಜಾತಿವೈರಿಗಳಾದ ಈ ಸರ್ಪಮಂಡೂಕ ಮೈತ್ರಿಯನ್ನು ಕಂಡ ಶಂಕರರು ಪುಲಕಿತರಾದರು. ತಮ್ಮ ಸಂಕಲ್ಪ ಸಿದ್ಧಿಗೆ ಕಾಲ ಪಕ್ವವಾಯಿತೆಂದು ಅರಿತರು. ತಾವು ಸಂಕಲ್ಪಿಸಿದ್ದ ಧಾರ್ಮಿಕ, ಆಧ್ಯಾತ್ಮಿಕ ಪೀಠಗಳ ಸ್ಥಾಪನೆಗೆ ಸೂಕ್ತಕಾಲವೂ, ಸನ್ನಿವೇಶವೂ ದೊರಕಿದುದನ್ನು ಮನಗಂಡು ಚತುರಾಮ್ನಾಯ ಪೀಠಗಳಲ್ಲಿ ಮೊದಲನೆಯದಾದ ಶ್ರೀದಕ್ಷಿಣಾಮ್ನಾಯ ಪೀಠವನ್ನು ಶೃಂಗೇರಿಯಲ್ಲಿಯೇ ಸ್ಥಾಪಿಸಲು ನಿರ್ಧಾರ ಮಾಡಿದರು.

ತುಂಗಾ ನದಿಯ ಉತ್ತರಕ್ಕೆ ಎತ್ತರವಾದ ಭೂಭಾಗದಲ್ಲಿ ಶ್ರೀಚಕ್ರವೂ, ಪುಟ್ಟದಾದ ಶ್ರೀಶಾರದಾಂಬಾ ದೇಗುಲವೂ, ಶ್ರೀ ದಕ್ಷಿಣಾಮ್ನಾಯ ಪೀಠವೂ ಸ್ಥಾಪಿತವಾದವು. ಅನಂತರ ಶ್ರೀ ವಿದ್ಯಾರಣ್ಯರು ಸ್ಥಳದ ಮತ್ತು ಗ್ರಾಮದ ರಕ್ಷಣೆಗೆ ಪೂರ್ವದಲ್ಲಿ ಶ್ರೀಕಾಲಭೈರವ, ಪಶ್ಚಿಮದಲ್ಲಿ ಶ್ರೀ ಆಂಜನೇಯ, ದಕ್ಷಿಣದಲ್ಲಿ ಶ್ರೀದುರ್ಗಾಂಬಿಕೆ, ಉತ್ತರದಲ್ಲಿ ಶ್ರೀ ಕಾಳಿಕಾಂಬೆಯನ್ನು ಪ್ರತಿಷ್ಠೈದರು. ಅಂದಿನಿಂದ ಶೃಂಗಗಿರಿ ಅಥವಾ ಶೃಂಗೇರಿಯು ಅಭ್ಯುದಯಕ್ಕೆ ಬಂದಿತು. ಮಹಾತಪಸ್ವಿಗಳೂ, ಯೋಗಿಶ್ರೇಷ್ಠರೂ, ಋಷಿಸದೃಶರೂ ಆದ ಮಹಾಪುರುಷರ ನೆಲೆಯಾಯಿತು. ಯಾವ ಮಹಾಪುರುಷರ ಜೀವನ ಚರಿತ್ರೆಯ ಪುಣ್ಯ ಪೀಯೂಷಪಾನ ಮಾಡಲು ನಾವು ಉದ್ಯುಕ್ತರಾಗಿದ್ದೇವೆಯೋ ಆ ಮಹಾಮಹಿಮರಾದ ಜಗದ್ಗುರು ಶ್ರೀ ಶ್ರೀಚಂದ್ರಶೇಖರ ಭಾರತೀವರ್ಯರ ಪೂರ್ವಜರೂ ಸಹ ಈ ಪುಣ್ಯಕ್ಷೇತ್ರದಲ್ಲಿಯೇ ನೆಲಸಿದವರಾಗಿದ್ದರು. ಜಗದ್ವಿಖ್ಯಾತರಾದ ಶ್ರೀವಿದ್ಯಾರಣ್ಯರು ಕರ್ನಾಟಕ ಸಾಮ್ರಾಜ್ಯ ಸ್ಥಾಪನೆಗಾಗಿ ಕಾರ್ಯತತ್ಪರರಾದುದು, ಶೈವ, ವೈಷ್ಣವ, ಶಾಕ್ತ ಮುಂತಾದ ಭಿನ್ನ ಭಿನ್ನ ಮತಗಳ ಏಕತೆಗಾಗಿ, ಸನಾತನ ಹಿಂದೂ ಧರ್ಮದ ಉದ್ಧಾರಕ್ಕಾಗಿ ಮಹಾಯೋಗಿಗಳೂ, ಮಹಾತ್ಮರೂ ತಪಸ್ಸು ಮಾಡಿದುದು ಈ ಪಾವನಕ್ಷೇತ್ರ ಶೃಂಗೇರಿಯಲ್ಲಿಯೇ.

* * *

# ೨. ಅಭಿನವ ಶಂಕರ ಗುರು ಶ್ರೀನೃಸಿಂಹ ಭಾರತೀ

ಶ್ರೀ ಚಂದ್ರಶೇಖರಭಾರತಿಯವರ ಗುರುಗಳು ಅಭಿನವ ಶಂಕರರೆಂದೇ ಪ್ರಖ್ಯಾತರಾಗಿದ್ದ, ಚಿರಸ್ಮರಣೀಯರಾದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಮಹಾಸ್ವಾಮಿಗಳವರು.

ಮಹಾವಿದ್ವಾಂಸರುಗಳ ಪೀಳಿಗೆಯಲ್ಲಿ ಜನಿಸಿದ್ದ ಗುರುಗಳು ಕೇವಲ ಎಂಟನೆಯ ವಯಸ್ಸಿನಲ್ಲಿಯೇ ಸಂನ್ಯಸ್ತರಾಗಿ ಗುರುವಂಶವನ್ನು ಬೆಳಗಿದರು. ದೀಕ್ಷೆಯನ್ನು ವಹಿಸಿಕೊಂಡ ದಿನ ವಿಧ್ಯುಕ್ತವಾದ ಎಲ್ಲಾ ಸಂಸ್ಕಾರಗಳೂ ಸಂಪನ್ನವಾದಾಗ ಸಾಯಂಕಾಲವಾಗಿದ್ದಿತು. ಆ ಮೊದಲ ದಿನ ತಲೆನೋವಿನಿಂದ ಬಾಧೆ ಪಟ್ಟಿದ್ದುದರಿಂದಲೂ, ಆ ದಿನ ಸೂರ್ಯೋದಯ ದಿಂದ ಸೂರ್ಯಾಸ್ತದವರೆಗೂ ಆಹಾರವಿಲ್ಲದೇ ಶ್ರಮಪಟ್ಟಿದುದರಿಂದ ಬಾಲಯತಿವರ್ಯರು ಬಹಳ ಬಳಲಿದ್ದರು. ಸಾಯಂಕಾಲ ಆಹ್ನಿಕವಾದ ನಂತರ ಸ್ವಲ್ಪ ಉಪಾಹಾರವನ್ನು ಸ್ವೀಕರಿಸಿ ದೊಡ್ಡಗುರುಗಳ ಬಳಿಯಲ್ಲಿಯೇ ಕೃಷ್ಣಾಜಿನದ ಮೇಲೆ ಪವಡಿಸಿದ್ದರು. ಹಿರಿಯ ಗುರುಗಳು ಎಂದಿನಂತೆ ಪೂಜಾನಿರತರಾಗಿದ್ದರು. ನಿದ್ರೆಯಲ್ಲಿದ್ದ ಚಿಕ್ಕ ಸ್ವಾಮಿಗಳು "ಸರ್ವೋಽಹಂ, ಸರ್ವೋಽಹಂ, ಸರ್ವೋಽಹಂ" ಎಂದು ಮೂರು ಬಾರಿ ಉಚ್ಚರಿಸಿದರು. ಆಗ ಹಿರಿಯ ಗುರುಗಳಿಗೆ ಉಂಟಾದ ಆಶ್ಚರ್ಯಕ್ಕೂ, ಸಂತೋಷಕ್ಕೂ ಮಿತಿಯೇ ಇರಲಿಲ್ಲ. ಚಿಕ್ಕ ಗುರುಗಳಲ್ಲಿ ಅಡಗಿದ್ದ ಆಧ್ಯಾತ್ಮ ಶಕ್ತಿಯೇ ಈ ರೀತಿ ವ್ಯಕ್ತವಾಯಿತೆನ್ನುವುದರಲ್ಲಿ ಅವರಿಗೆ ಯಾವುದೇ ಸಂದೇಹವಿರಲಿಲ್ಲ.

ಎಂಟನೆಯ ಶ್ರೀನೃಸಿಂಹ ಭಾರತಿಯವರು ಸಂನ್ಯಸ್ತರಾದ ಆರು ದಿನಗಳಲ್ಲಿಯೇ ಅವರ ಗುರುಗಳಾಗಿದ್ದ ದ್ವಿತೀಯ ಅಭಿನವ ಸಚ್ಚಿದಾನಂದ ಭಾರತೀಯವರು ಮುಕ್ತರಾಗಿದ್ದರು. ಹೀಗಾಗಿ ಅವರಿಗೆ ತಮ್ಮ ಗುರುಗಳಿಂದ ಆಧ್ಯಾತ್ಮಿಕ ಮಾರ್ಗದರ್ಶನ ದೊರೆತಿರಲಿಲ್ಲ. ಆದ್ದರಿಂದ ಅವರು ತಮ್ಮ ಉತ್ತರಾಧಿಕಾರಿ ಗಳಾಗಿದ್ದ ಶ್ರೀಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳಿಗೆ ಧರ್ಮಸೂಕ್ಷ್ಮ ಗಳನ್ನೂ, ಆಸ್ತಿಕ್ಯವನ್ನೂ, ಭಕ್ತಿಯನ್ನೂ, ಸಂನ್ಯಾಸಾಶ್ರಮದ ಪ್ರಾಶಸ್ತ್ಯವನ್ನೂ ಕುರಿತು ತಾವೇ ಬೋಧನೆ ಮಾಡುತ್ತಿದ್ದರು, ಮಾರ್ಗದರ್ಶನ ಮಾಡುತ್ತಿದ್ದರು.

ಪೂಜ್ಯ ಗುರುಗಳು ಮುಕ್ತರಾದ ಬಳಿಕ ಆರು ವರ್ಷಗಳವರೆಗೆ ಅಧ್ಯಯನ, ವ್ಯಾಸಂಗ, ಯೋಗ, ವಿದ್ಯಾಭ್ಯಾಸಗಳಲ್ಲಿ ಸ್ವಾಮಿಗಳು ಮಗ್ನರಾದರು. ಆ ಬಳಿಕ ಉತ್ತರ ದೇಶದ ಪ್ರವಾಸವನ್ನು ಕೈಗೊಂಡರು. ಗುರುಗಳು ಪದಾರ್ಪಣ



ಮಾಡಿದ ಸ್ಥಳಗಳಲ್ಲೆಲ್ಲಾ, ಬಡವ, ಬಲ್ಲಿದರೆನ್ನದೇ ಎಲ್ಲರೂ ಗುರುಗಳನ್ನು ಭಕ್ತಿ, ವಿಶ್ವಾಸ, ಗೌರವಗಳಿಂದ ಸ್ವಾಗತಿಸಿದರು. ಗುರುಗಳು ಪುಣೆಯವರೆಗೂ ಸಂಚರಿಸಿ ಆ ನಂತರ ಶೃಂಗೇರಿಗೆ ಹಿಂದಿರುಗಿದರು.

ಮೈಸೂರಿನ ರತ್ನಸಿಂಹಾಸನಾಧೀಶ್ವರರಾಗಿದ್ದ ಶ್ರೀ ಚಾಮರಾಜ ಒಡೆಯರು, ವ್ಯಾಖ್ಯಾನ ಸಿಂಹಾಸನಾಧೀಶ್ವರರಾಗಿದ್ದ ಶ್ರೀ ಜಗದ್ಗುರುಗಳನ್ನು ಮೈಸೂರಿಗೆ ಆಹ್ವಾನಿಸಿದರು. ರಾಜರ ಆಹ್ವಾನವನ್ನು ಮನ್ನಿಸಿ ಮೈಸೂರಿಗೆ ಆಗಮಿಸಿದ ಗುರುಗಳು ರಾಜ, ಪ್ರಜೆಗಳನ್ನೆಲ್ಲಾ ಆಶೀರ್ವದಿಸಿ, ದಕ್ಷಿಣ ಭಾರತ ಯಾತ್ರೆ ಕೈಗೊಂಡರು. ಸಂಚಾರ ಕ್ರಮದಲ್ಲಿ ರಾಮನಾಡಿಗೆ ಬಂದು ಅಲ್ಲಿಯ ರಾಜರ ಪ್ರಾರ್ಥನೆಯಂತೆ ಅರಮನೆಯಲ್ಲಿಯೇ ಉಳಿದುಕೊಂಡರು. ರಾಮನಾಡಿನಲ್ಲಿ ರಾಜರ ಮನೆದೇವತೆಯಾಗಿದ್ದ ಶ್ರೀರಾಜರಾಜೇಶ್ವರೀ ಸನ್ನಿಧಿಯಲ್ಲಿ ನವರಾತ್ರಿಯ ಕಾಲದಲ್ಲಿ ಸಹಸ್ರ ಪ್ರಾಣಿಗಳನ್ನು ಬಲಿಕೊಡುವ ಪದ್ಧತಿಯು ಚಿರಕಾಲದಿಂದ ನಡೆದು ಬಂದಿತ್ತು. ಗುರುಗಳು ತಮ್ಮ ಸರಳವಾದ ಮಾತುಗಳಿಂದ ವಾಮಾಚಾರ ಪೂಜೆಯ ದುಷ್ಪರಿಣಾಮ ಬಗ್ಗೆ ತಿಳಿಯಹೇಳಿ, ಶ್ರೀರಾಜರಾಜೇಶ್ವರಿ ದೇವಿಯನ್ನು ವೈದಿಕಶಾಸ್ತ್ರ ರೀತ್ಯಾ ಪುನಃ ಪ್ರತಿಷ್ಠಾಪಿಸಿ ದಕ್ಷಿಣಾಚಾರ ರೀತಿಯಲ್ಲಿ ಪೂಜೆ ನಡೆಯುವಂತೆ ವ್ಯವಸ್ಥೆ ಮಾಡಿದರು. ಸಂಚಾರಾಂತ್ಯದಲ್ಲಿ ಗುರುಗಳು ಮತ್ತೊಮ್ಮೆ ಮೈಸೂರಿಗೆ ಬಂದು ಪತಿವಿಯೋಗ ದಿಂದ ಖಿನ್ನರಾಗಿದ್ದ ಮಹಾರಾಣಿಯವರನ್ನು ಸಾಂತ್ವನಗೊಳಿಸಿ, ರಾಜಪುತ್ರರನ್ನು ಆಶೀರ್ವದಿಸಿ ಶೃಂಗೇರಿಗೆ ಹಿಂದಿರುಗಿದರು.

ಶೃಂಗೇರಿಗೆ ಹಿಂದಿರುಗಿದ ಆಚಾರ್ಯರು ಸಂಸ್ಕೃತ ವಿದ್ಯಾಭ್ಯಾಸದ ಪ್ರೋತ್ಸಾಹಕ್ಕಾಗಿ ಸದ್ವಿದ್ಯಾ ಸಂಜೀವಿನೀ ಪಾಠಶಾಲೆಯನ್ನು ಸ್ಥಾಪಿಸಿದರು. ಅಲ್ಲಿ ಆಗಾಗ ತಾವೇ ವೇದಾಂತ ಪ್ರವಚನವನ್ನೂ ನಡೆಸುತ್ತಿದ್ದರು. ಶಿಷ್ಯರಿಗೆ ಮೂರು ವರ್ಷಗಳ ಕಾಲ ಬ್ರಹ್ಮಸೂತ್ರ ಭಾಷ್ಯ, ಉಪನಿಷದ್ಭಾಷ್ಯ, ಗೀತಾಭಾಷ್ಯ ಗಳನ್ನು ಪಾಠ ಹೇಳಿದರು. ಭಾಷ್ಯಾದಿ ಗ್ರಂಥಪ್ರವಚನದಲ್ಲಿ ಆಸಕ್ತರಾಗಿದ್ದ ಗುರುಗಳಿಗೆ ಏಕಾಂತ ವಾಸದ ಅಭಿರುಚಿ ಹೆಚ್ಚುತ್ತಾ ಬಂದಿತು. ತುಂಗಾನದಿಯ ದಕ್ಷಿಣಕ್ಕಿದ್ದ ನರಸಿಂಹವನವೆಂಬ ಅರಣ್ಯದಲ್ಲಿ ಪರ್ಣಕುಟಿಯನ್ನು ನಿರ್ಮಿಸಿ ಕೊಂಡು ಅಲ್ಲಿಯೇ ವಾಸಿಸಲಾರಂಭಿಸಿದರು. ಈ ಸಂದರ್ಭದಲ್ಲಿ ಒಮ್ಮೆ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರು ಶೃಂಗೇರಿಗೆ ಬಂದು ಗುರುಗಳ ದರ್ಶನ ಪಡೆದಿದ್ದರು.

ಶ್ರೀಮತ್ ಶಂಕರಭಗವತ್ಪಾದರ ಜನ್ಮದಿನೋತ್ಸವಾಚರಣೆಯನ್ನು ಆರಂಭಿಸಿ ದವರು ಈ ಗುರುಗಳೇ. ಗುರುಗಳು ಭಗವತ್ಪಾದರ ಜನ್ಮದಿನವಾದ ವೈಶಾಖ

ಶುಕ್ಲ ಪಂಚಮಿಯಂದು ರಾಮಕೃಷ್ಣಾದಿಗಳ ಅವತಾರ ದಿನಗಳಂತೆಯೇ, ಭಗವತ್ಪಾದರ ಜಯಂತಿಯನ್ನೂ ನಿಯಮಾನುಸಾರ ನಡೆಸುವಂತೆ ನಿರ್ಧರಿಸಿದರು. ಆ ಸಿದ್ಧ ಸಂಕಲ್ಪರು ಯಾವ ಉದ್ದೇಶದಿಂದ ಉತ್ಸವವನ್ನು ನಡೆಸಲು ಆರಂಭಿಸಿದರೋ, ಆ ಉದ್ದೇಶವು ಫಲಿಸಿ ಈಗ ಭರತಖಂಡದಾದ್ಯಂತವೂ ಶ್ರೀ ಶಂಕರ ಜಯಂತ್ಯುತ್ಸವವು ನಡೆಯುತ್ತಿದೆ.

ಕಾಲಟೀ ಕ್ಷೇತ್ರವು ಆದಿಶಂಕರರ ಜನ್ಮಸ್ಥಾನವಾಗಿದ್ದು ಬಹಳಕಾಲ ಭೂಗರ್ಭದಲ್ಲಿ ಅಡಗಿದ್ದ ರತ್ನದಂತೆ ಯಾರ ದೃಷ್ಟಿಗೂ ಬೀಳದಂತೆ ಇತ್ತು. ಸುಪ್ತಾವಸ್ಥೆಯಲ್ಲಿದ್ದ ಕಾಲಟಿಯು ಆದಿ ಶಂಕರರಿಂದ ಬೆಳಕಿಗೆ ಬಂದು ಮತ್ತೆ ಅಜ್ಞಾತವಾಸಕ್ಕೆ ತೆರಳಿದಂತಿದ್ದು, ಶ್ರೀ ಅಭಿನವ ಶಂಕರರಿಂದ ಪುನಃ ಬೆಳಕಿಗೆ ಬಂದಿತು. ಗುರುಗಳು ನಾಲ್ಕನೆಯ ಬಾರಿ ತೀರ್ಥಯಾತ್ರೆ ಕೈಗೊಂಡಾಗ ಕಾಲಟಿಯಲ್ಲಿ ಶ್ರೀಶಂಕರರ ಜನ್ಮಕ್ಷೇತ್ರವನ್ನು ಆವಿಷ್ಕರಿಸಿ, ಅಲ್ಲಿ ಶ್ರೀ ಶಂಕರರಿಗೆ ಒಂದು ಆಲಯವನ್ನು ನಿರ್ಮಿಸಿ, ನಿತ್ಯ ಪೂಜಾದಿಗಳಿಗೆ ವ್ಯವಸ್ಥೆ ಮಾಡುವ ಸಂಕಲ್ಪ ಮಾಡಿದರು. ಮೈಸೂರಿನ ಮಹಾರಾಜರು ಮತ್ತು ದಿವಾನರಾಗಿದ್ದ ಶೇಷಾದ್ರಿ ಅಯ್ಯರ್‌ರವರಿಗೂ ಮತ್ತು ತಿರುವಾಂಕೂರಿನ ಮಹಾರಾಜರು ಮತ್ತು ಅವರ ದಿವಾನರಾಗಿದ್ದ ಶ್ರೀ ವಿ. ಪಿ. ಮಾಧವರಾಯರಿಗೂ ಗುರುಗಳು ತಮ್ಮ ಸಂಕಲ್ಪವನ್ನು ತಿಳಿಯಪಡಿಸಿದರು. ಗುರುಗಳ ಸಂಕಲ್ಪವನ್ನು ನೆರವೇರಿಸಲು ಎಲ್ಲರೂ ಕಂಕಣಬದ್ಧರಾಗಿ ನಿಂತರು. ಗುರುಗಳು ಬೆಂಗಳೂರಿಗೆ ಆಗಮಿಸಿ ಅಲ್ಲಿ ಭಕ್ತರ ಕೋರಿಕೆಯಂತೆ ಶ್ರೀಶಂಕರಾಚಾರ್ಯರ ಮೂರ್ತಿಯನ್ನು ಪುಟ್ಟ ಆಲಯದಲ್ಲಿ ಪ್ರತಿಷ್ಠಾಪಿಸಿದ ನಂತರ ಮಠ ಅಸ್ತಿತ್ವಕ್ಕೆ ಬಂದಿತು. ತಮ್ಮ ಪಾದಧೂಳಿಯಿಂದ ತಮಿಳುನಾಡನ್ನೂ, ಕೇರಳವನ್ನೂ ಪವಿತ್ರಗೊಳಿಸಿದ ಗುರುದೇವರು ತ್ವರೆಯಾಗಿ ಕಾಲಟೀಕ್ಷೇತ್ರಕ್ಕೆ ದಯಮಾಡಿಸಿದರು.

ಜನತೆಯಲ್ಲಿ ನಾಸ್ತಿಕ ಭಾವನೆಗಳು ಬಲಿಯುತ್ತ ಬಂದು ಆಧ್ಯಾತ್ಮಿಕ ಮತ್ತು ನೈತಿಕ ಮೌಲ್ಯಗಳ ವಿಷಯದಲ್ಲಿ ಔದಾಸೀನ್ಯ, ಅನಾದರ, ಅಸಡ್ಡೆ ಇತ್ಯಾದಿಗಳು ಪ್ರಬಲವಾಗುತ್ತಿದ್ದಾಗ, ಲೋಕತಾರಕವಾದ ಸನಾತನ ಧರ್ಮವನ್ನು ಪುನರುತ್ಥಾನಗೊಳಿಸುವ ಅವಶ್ಯಕತೆ ಇತ್ತು. ಆ ಮಹತ್ಕಾರ್ಯ ಶ್ರೀಶಂಕರ ಭಗವತ್ಪಾದರ ಅದ್ವೈತ ತತ್ತ್ವದಿಂದ ಸಾಧ್ಯವೆಂಬುದನ್ನು ಜಗದ್ಗುರುಗಳು ಆಚರಣೆಯ, ಉಪದೇಶದ ಮೂಲಕ ದರ್ಶನ ಮಾಡಿಸಿದರು.

ಕಾಲಟಿಯಲ್ಲಿ ಶ್ರೀಶಾರದಾದೇವಿ ಮತ್ತು ಶ್ರೀಶಂಕರ ಭಗವತ್ಪಾದರ ದೇವಸ್ಥಾನಗಳು ನಿರ್ಮಿಸಲ್ಪಟ್ಟವು. ಗುರುದೇವರು ಸೌಮ್ಯ ಸಂವತ್ಸರದ [ಕ್ರಿ.ಶ ೧೯೧೦] ಮಾಘ ಶುದ್ಧ ಪಂಚಮಿಯಂದು ಯಾಗಸಂಕಲ್ಪವನ್ನು ಮಾಡಿ, ಏಳು ದಿನಗಳ ಪರ್ಯಂತ ವೇದೋಕ್ತ ಕರ್ಮಗಳೆಲ್ಲವೂ ನಡೆದ ಬಳಿಕ ಮಾಘ ಶುದ್ಧ ದ್ವಾದಶಿಯಂದು ಅಭಿಜಿನ್ ಮುಹೂರ್ತದಲ್ಲಿ ಮೂರ್ತಿಗಳ ಪ್ರತಿಷ್ಠೆಯನ್ನು ನೆರವೇರಿಸಿದರು. ಈ ಮಹೋತ್ಸವಕ್ಕೆ ಭರತ ಖಂಡದ ಎಲ್ಲಾ ಸ್ಥಳಗಳಿಂದಲೂ ಭಕ್ತರು ಆಗಮಿಸಿದ್ದರು. ಉತ್ಸವಕಾಲದಲ್ಲಿ ಶಿವಗಂಗಾ ಪೀಠಾಧಿಪತಿಗಳಾಗಿದ್ದ ಶ್ರೀ ಸುಬ್ರಹ್ಮಣ್ಯಾಭಿನವ ಸಚ್ಚಿದಾನಂದ ಭಾರತೀಯವರೂ ಉಪಸ್ಥಿತರಿದ್ದರು. ಕಾಲಟಿಯಲ್ಲಿಯೇ ವಸತಿ ಮಾಡಿದ್ದ ಶ್ರೀಗುರುಗಳನ್ನು ಅನಂತರ ಕೊಚಿನ್ ಮತ್ತು ಮೈಸೂರು ಮಹಾರಾಜರುಗಳು ಸಹ ದರ್ಶಿಸಿ ಅನುಗ್ರಹವನ್ನು ಪಡೆದರು.



ಶ್ರೀಗುರುವರ್ಯರು ತಮ್ಮ ಮರುಪ್ರಯಾಣದಲ್ಲಿ ಪುನಃ ಕೇರಳ, ಕರ್ನಾಟಕ, ತಮಿಳು ದೇಶಗಳಲ್ಲಿ ಸಂಚರಿಸಿ ಕರ್ನಾಟಕ ಪ್ರವಾಸಕಾಲದಲ್ಲಿ ಬೆಂಗಳೂರಿಗೆ ಬಂದರು. ಅಲ್ಲಿ ಭಾರತೀಯ ಗೀರ್ವಾಣ ಪ್ರೌಢವಿದ್ಯಾಭಿವರ್ಧಿನೀ ಮಹಾವಿದ್ಯಾಲಯವನ್ನು ಆರಂಭಿಸುವ ಸಂಕಲ್ಪಮಾಡಿ ಶೃಂಗೇರೀ ಕ್ಷೇತ್ರಕ್ಕೆ ಆಗಮಿಸಿದರು. ಗುರುವರ್ಯರು ಬೆಂಗಳೂರಿನಲ್ಲಿದ್ದ ಸಂದರ್ಭದಲ್ಲಿ ದಿವಾನ್ ಮಾಧವರಾಯರು ತಾವು ಕಟ್ಟಿಸಿದ್ದ ಅಗ್ರಹಾರವನ್ನು ಪಾಠಶಾಲೆಯ ಉಪಯೋಗಾರ್ಥವಾಗಿ ಅರ್ಪಿಸಿದ್ದರು.

ಆತ್ಮಜ್ಞಾನಿಗಳೂ, ತಪೋನಿಷ್ಠರೂ, ಭಕ್ತಶ್ರೇಷ್ಠರೂ, ವಿದ್ಯಾನಿಧಿಯೂ, ಯೋಗನಿಷ್ಣಾತರೂ ಆಗಿದ್ದ ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳನ್ನು ಅಭಿನವ ಶಂಕರರೆಂದೇ ಭಾವಿಸಲಾಗಿತ್ತು. ಹಿಂದುಗಳು ಮಾತ್ರವಲ್ಲದೇ ಮುಸಲ್ಮಾನರು, ಕ್ರೈಸ್ತರೂ ಸಹ ಅವರಲ್ಲಿ ಪೂಜ್ಯ ಭಾವನೆಯನ್ನಿಟ್ಟಿದ್ದರು. ಮೈಸೂರು ಮಹಾರಾಜರ ಶಿಕ್ಷಕನಾಗಿದ್ದ ಫ್ರೇಜರ್ ಎಂಬಾತನು "ಶ್ರೀಗುರುಗಳೊಡನೆ ನಡೆಸುತ್ತಿದ್ದ ಸಂಭಾಷಣೆಯು ನನ್ನ ಆತ್ಮವನ್ನು ಜೀವನದ ಜಂಜಡಗಳಿಂದ ಮೇಲಕ್ಕೆತ್ತುತ್ತಿತ್ತು" ಎಂದು ಬರೆದಿದ್ದಾನೆ. ಚಾರ್ಲ್ಸ್ ಚಾನ್ಸ್ಟನ್ ಎಂಬಾತನು "ಅವರು ಅತ್ಯುತ್ತಮ ಚಾರಿತ್ರ್ಯವುಳ್ಳವರೂ, ಆಕರ್ಷಕ ವ್ಯಕ್ತಿತ್ವವುಳ್ಳವರೂ, ಸಂಸ್ಕೃತದಲ್ಲಿ ಅಗಾಧ ಪಾಂಡಿತ್ಯವುಳ್ಳವರೂ, ವೇದಾಂತ ತತ್ತ್ವಗಳಲ್ಲಿ ಪರಿಪೂರ್ಣರೂ ಆಗಿದ್ದಾರೆ" ಎಂಬುದಾಗಿ ಹಾಡಿ ಹೊಗಳಿದ್ದಾನೆ.

ಶ್ರೀಗುರುವರ್ಯರನ್ನು ವಿಶೇಷವಾಗಿ ಮೆಚ್ಚಿಕೊಂಡಿದ್ದ ಮತ್ತು ಅವರಲ್ಲಿ ಭಕ್ತಿ ಗೌರವಗಳನ್ನು ಹೊಂದಿದ್ದ ಪಂಡಿತ ಮದನ ಮೋಹನ ಮಾಳವೀಯರು ಕಾಶೀಕ್ಷೇತ್ರದಲ್ಲಿ ತಾವು ಸ್ಥಾಪಿಸಿದ್ದ ಹಿಂದೂ ವಿಶ್ವವಿದ್ಯಾಲಯಕ್ಕೆ ಸೇರಿದಂತೆ ಒಂದು ಸರ್ವಕಲಾ ಶಾಲೆಯನ್ನು ಸ್ಥಾಪಿಸಬೇಕೆಂದೂ, ಅದರ ಅಸ್ತಿಭಾರ ಸ್ಥಾಪನೆಯನ್ನು ಶ್ರೀಗಳವರಿಂದಲೇ ಮಾಡಿಸಬೇಕೆಂದೂ ಸಂಕಲ್ಪಿಸಿ ಗುರುಗಳನ್ನು

ಆಹ್ವಾನಿಸಲು ತಮ್ಮ ಆತ್ಮೀಯರಾಗಿದ್ದ ದತ್ತಾತ್ರೇಯ ಕೃಷ್ಣ ದಾಮ್ಲೆ ಎಂಬುವರನ್ನು ಕಳುಹಿಸಿಕೊಟ್ಟರು. ಆದರೆ ಇದ್ದ ಅತ್ಯಲ್ಪ ಕಾಲಾವಕಾಶದಲ್ಲಿ, ದೂರದ ಕಾಶಿಗೆ ಪ್ರಯಾಣ ಮಾಡಲು ಗುರುಗಳಿಗೆ ಅನನುಕೂಲವಾಗಿದ್ದರಿಂದ, ಮಾಳವೀಯರ ಪ್ರಾರ್ಥನೆಯನ್ನು ಅಂಗೀಕರಿಸಲಾರದುದಕ್ಕಾಗಿ ಗುರುಗಳು ವಿಷಾದವನ್ನು ಸೂಚಿಸಿ ತಮಗಿಂತ ಶ್ರೇಷ್ಠರೂ ಪೂಜ್ಯರೂ ಆದ ತಮ್ಮ ಗುರುವರ್ಯರ ಪಾದುಕೆಗಳನ್ನು ಆ ಮಹೋತ್ಸವಕ್ಕಾಗಿ ಕಳುಹಿಸಿಕೊಟ್ಟರು.

ಶ್ರೀಗುರುಗಳಲ್ಲಿ ಆರ್ತರನ್ನು ರಕ್ಷಿಸುವ ಮೃದು ಮನವಿತ್ತು. ಎಂತಹ ಅಜ್ಞರಿಗೂ ಸುಲಭಗ್ರಾಹ್ಯವಾಗುವಂತೆ ವೇದಾಂತ ತತ್ತ್ವಗಳನ್ನು ಬೋಧಿಸುವುದರಲ್ಲಿ ಅವರು ನಿಷ್ಣಾತರಾಗಿದ್ದರು. ಇತರ ಮತ ತತ್ತ್ವಗಳನ್ನು ಏಕಾಗ್ರ ಮನಸ್ಕರಾಗಿ ಆಲಿಸುತ್ತಿದ್ದರು. ಯಾರ ಮನಸ್ಸನ್ನೂ ನೋಯಿಸುತ್ತಿರಲಿಲ್ಲ. ತಾವು ಸಂಚರಿಸಿದೆಡೆಯೆಲ್ಲಾ ವೈದಿಕ ಧರ್ಮಾನುಯಾಯಿಗಳಲ್ಲಿ ಕಾಣುತ್ತಿದ್ದ ಲೋಪದೋಷಗಳನ್ನು ತಿದ್ದಿ ಸೂಕ್ತ ಮಾರ್ಗದರ್ಶನ ಮಾಡುತ್ತಿದ್ದರು. ಅನೇಕ ದೇವಾಲಯಗಳಲ್ಲಿ ವಾಮಾಚಾರ ಪೂಜೆಗಳನ್ನು ತಪ್ಪಿಸಿ ವೈದಿಕಾಚಾರ [ದಕ್ಷಿಣಾಚಾರ] ಪೂಜೆಗೆ ವ್ಯವಸ್ಥೆ ಮಾಡಿದರು.

ಅನೇಕ ಮಹನೀಯರು ಗುರುಗಳಲ್ಲಿ ವಿದ್ಯಾಭ್ಯಾಸ ಮಾಡಿದರು. ಅವರುಗಳಲ್ಲಿ ಶ್ರೀವೆಂಕಟರಮಣ ಸರಸ್ವತೀ [ಇವರು ಮುಂದೆ ಪುರಿ ಗೋವರ್ಧನ ಪೀಠಾಚಾರ್ಯರಾಗಿ ಶ್ರೀಭಾರತೀಕೃಷ್ಣ ತೀರ್ಥರೆಂದು ಪ್ರಖ್ಯಾತರಾದರು] ಶ್ರೀ ಹಾನಗಲ್ ವಿರೂಪಾಕ್ಷ ಶಾಸ್ತ್ರೀ [ಇವರು ಕೂಡಲಿ ಶೃಂಗೇರಿ ಮಠದಲ್ಲಿ ಶ್ರೀ ವಿದ್ಯಾಭಿನವ ವಾಲುಕೇಶ್ವರಭಾರತೀ ಎಂದು ಪ್ರಸಿದ್ಧರಾದರು], ಶ್ರೀರಾಮಾನಂದ ಸರಸ್ವತೀ, ಸಿದ್ಧವಲ್ಲಿಮಲ್ಲೈ ಶ್ರೀ ಸಚ್ಚಿದಾನಂದ, ಹೊಸಕೆರೆ ಚಿದಂಬರಯ್ಯ, ಹೊಳೇನರಸಿಪುರದ ಶ್ರೀಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿ ಮುಂತಾದವರು ಪ್ರಮುಖರು. ಬಾಲಗಂಗಾಧರ ತಿಲಕರು, ಝಾನ್ಸಿ ಲಕ್ಷ್ಮೀಬಾಯಿ ದತ್ತು ಮಗನೊಡನೆ ಬಂದು ಗುರುಗಳ ಅನುಗ್ರಹ ಪಡೆದಿದ್ದರು.

ಬೆಂಗಳೂರು ಮತ್ತು ಶೃಂಗೇರಿಗಳಲ್ಲಿ ವೇದವೇದಾಂತ ಪಾಠಶಾಲೆಗಳ ಸ್ಥಾಪನೆ, ಶ್ರೀಶಂಕರ ಜಯಂತ್ಯುತ್ಸವಾರಂಭ, ಕಾಲಟೀ ಕ್ಷೇತ್ರದ ಪುನರುದ್ಧಾರ ಮುಂತಾದ ಶ್ರೇಷ್ಠ ಕಾರ್ಯಗಳಲ್ಲದೇ ಆಚಾರ್ಯರು ಸಾಧಿಸಿದ ಮತ್ತೊಂದು ಮಹತ್ ಕಾರ್ಯ ಶ್ರೀಶಂಕರ ಭಗವತ್ಪಾದರ ಎಲ್ಲಾ ಗ್ರಂಥಗಳ ಪರಿಷ್ಕರಣ. ಈ ರೀತಿ ಪರಿಶೋಧಿಸಲ್ಪಟ್ಟ ಎಲ್ಲ ಕೃತಿಗಳನ್ನೂ ಶ್ರೀರಂಗದ ವಾಣೀವಿಲಾಸ ಮುದ್ರಣಾಲಯದಲ್ಲಿ ಪ್ರಕಟಿಸಲು ಪ್ರೋತ್ಸಾಹ ನೀಡಿದರು.[೧] ಜಗದ್ಗುರುಗಳವರು



ಸ್ವತಃ ಆಶುಕವಿಗಳಾಗಿದ್ದು ಅವರ ಸ್ತೋತ್ರಗಳೆಲ್ಲವೂ ಭಕ್ತಿ ಸುಧಾತರಂಗಿಣಿ ಎಂಬ ಹೆಸರಿನಲ್ಲಿ ಪ್ರಕಟವಾಗಿವೆ.

ವ್ಯಾಖ್ಯಾನ ಪೀಠದಲ್ಲಿ ವಿರಾಜಮಾನರಾಗಿ ಪ್ರಜೆಗಳಲ್ಲಿ ಆಧ್ಯಾತ್ಮಿಕ ಜಾಗೃತಿಯನ್ನುಂಟು ಮಾಡಿ ಸನಾತನ ಧರ್ಮದಲ್ಲಿ ಶ್ರದ್ಧೆ, ಭಕ್ತಿಗಳ ನವಜಾಗೃತಿ ಮೂಡಿಸಿದ ಶ್ರೀಗುರುವರ್ಯರ ಅನಂತರ ಈ ಜ್ಞಾನಪೀಠಕ್ಕೆ ಬಂದವರೇ ಮಹಾತಪಸ್ವಿಗಳೂ, ಯೋಗಾನುಷ್ಠಾನನಿಷ್ಠರೂ, ವೇದಾಂತ ವಿಶಾರದರೂ, ಮಹಾಮಹಿಮರೂ, ಅವಧೂತರೂ ಆದ ಶ್ರೀಚಂದ್ರಶೇಖರ ಭಾರತೀ ಮಹಾಸ್ವಾಮಿಗಳವರು.

* * *

೧ ಶ್ರೀಶಂಕರ ಭಗವತ್ಪಾದರ ಈ ಕೃತಿಗಳು ಈಗಾಗಲೇ ವಾಣೀವಿಲಾಸ ಮುದ್ರಣಾಲಯದಿಂದ ಹಲವಾರು ಬಾರಿ ಪ್ರಕಟವಾಗಿವೆ.
ಈ ಮಹಾತ್ಮರನ್ನು ಕುರಿತು ಇದೇ ಲೇಖಕರು ಅಭಿನವ ಶಂಕರ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಎಂಬ ಕೃತಿಯನ್ನು ರಚಿಸಿದ್ದಾರೆ.

# ೩. ಮಕ್ಕಳಿಲ್ಲದ ಮನೆ

ಎಂಟನೆಯ ಶ್ರೀ ನೃಸಿಂಹ ಭಾರತೀ ಸ್ವಾಮಿಗಳವರ ಆಸ್ಥಾನದಲ್ಲಿ ಪಟಗುಪ್ಪೆಯ ಈಶ್ವರೀ ಸುಬ್ಬಾಶಾಸ್ತ್ರಿಗಳೆಂಬವವರು ಪ್ರಸಿದ್ಧರಾಗಿದ್ದರು. ಇವರು ಶಾಸ್ತ್ರಜ್ಞರೂ, ಆಚಾರಶೀಲರೂ, ಅನುಷ್ಠಾನಪರರೂ ಆಗಿದ್ದ ವಿದ್ವಾಂಸರು. ಮಹಾನ್ಯಾಸಪೂರ್ವಕವಾಗಿ ಕೋಟಿಲಿಂಗಾರ್ಚನೆಯನ್ನು ಮಾಡಿದ್ದ ಮಹಾನುಭಾವರು. ಶ್ರೀಶ್ರೀಗಳವರು ಸಂಚಾರದಲ್ಲಿದ್ದಾಗ ಶಾಸ್ತ್ರಿಗಳನ್ನು ಕಂಡು ಹರ್ಷಪಟ್ಟು, ಒತ್ತಾಯಪೂರ್ವಕವಾಗಿ ತಮ್ಮೊಡನೆಯೇ ಶೃಂಗೇರಿಗೆ ಕರೆದುಕೊಂಡು ಬಂದಿದ್ದರು. ವ್ಯಾಕರಣಶಾಸ್ತ್ರದಲ್ಲಿ ವಿಶೇಷವಾದ ಪಾಂಡಿತ್ಯವನ್ನು ಹೊಂದಿದ್ದ ಸುಬ್ಬಾಶಾಸ್ತ್ರಿಗಳು ಪಂಡಿತಪ್ರಿಯರೂ ಆಗಿದ್ದರು. ಶುದ್ಧ ಚಾರಿತ್ರ್ಯರೂ, ಸದಾಚಾರ ಸಂಪನ್ನರೂ, ದೈವಭಕ್ತರೂ ಆಗಿದ್ದ ಇವರ ಏಕೈಕ ಪುತ್ರ ಶ್ರೀಗೋಪಾಲ ಶಾಸ್ತ್ರಿಗಳು.

ಶ್ರೀ ಸುಬ್ಬಾಶಾಸ್ತ್ರಿಗಳು ಸ್ವಲ್ಪಕಾಲ ಗುರುಸೇವೆ ಮಾಡಿ, ಶ್ರೀಶಾರದಾ ಸನ್ನಿಧಿಯಲ್ಲಿ ಅನುಷ್ಠಾನ ನಡೆಸಿ, ವೃದ್ಧಾಪ್ಯವನ್ನು ತಪೋನುಷ್ಠಾನಗಳಲ್ಲಿ ಕಳೆಯುವ ಸಲುವಾಗಿ ಗುರುಗಳವರ ಅನುಜ್ಞೆಯನ್ನು ಪಡೆದು ಹಿಮಾಚಲದತ್ತ ಹೊರಟುಹೋದವರು ಅಲ್ಲಿಯೇ ನೆಲಸಿ ಸಂನ್ಯಾಸಾಶ್ರಮ ಸ್ವೀಕರಿಸಿ ಮುಕ್ತರಾದರು. ಇಂತಹ ಮಹಾನುಭಾವರ ವಂಶದಲ್ಲಿ ಜನಿಸಿದವರೇ ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಗಳು.

ಶ್ರೀ ಗೋಪಾಲಶಾಸ್ತ್ರಿಗಳು ತಂದೆಯಂತೆಯೇ ವಿದ್ಯಾವಂತರೂ, ಕರ್ಮನಿಷ್ಠರೂ ಆಗಿದ್ದರು. ಶಮ, ದಮ, ತಪಸ್ಸು, ಶೌಚ, ಕ್ಷಾಂತಿ, ಆರ್ಜವ, ಜ್ಞಾನ, ವಿಜ್ಞಾನ ಮತ್ತು ಆಸ್ತಿಕ್ಯವೆಂಬ ಒಂಭತ್ತು ಗುಣಗಳೂ ಸಹಜವಾಗಿ ಇವರಲ್ಲಿ ನೆಲಸಿದ್ದವು. ಉಷಃಕಾಲಕ್ಕೆ ಎದ್ದು ತುಂಗಾನದಿಯಲ್ಲಿ ಸ್ನಾನಾಹ್ನಿಕಗಳನ್ನು ಮುಗಿಸಿ ಗೃಹಾಭಿಮುಖರಾಗಿ ಬಂದು, ಮನೆಯಲ್ಲಿ ದೇವಪೂಜಾದಿಗಳನ್ನು ನೆರವೇರಿಸಿ ಬಳಿಕ ಶ್ರೀಶಾರದಾಂಬಾ ಮತ್ತು ಶ್ರೀಗುರುದೇವರ ಸಂದರ್ಶನ ಮಾಡುವುದು ಇವರ ನಿತ್ಯ ವಾಡಿಕೆಯಾಗಿತ್ತು.

ಮನೆಯಲ್ಲಿ ತಮ್ಮ ಅನುಯಾಯಿಗಳೊಡನೆ ಶಾಸ್ತ್ರಾರ್ಥ ವಿಚಾರಗಳನ್ನು ಚರ್ಚಿಸುತ್ತ, ತಮಗೆ ತಿಳಿದುದನ್ನು ಇತರರಿಗೆ ಬೋಧಿಸುತ್ತ, ಇತರರಿಂದ ಅನೇಕ ವಿಷಯಗಳನ್ನು ಗ್ರಹಿಸುತ್ತಲಿದ್ದ ಶಾಸ್ತ್ರಿಗಳು ಚರ್ಚೆಗಳಿಂದ ನಿರ್ಧರಿತವಾಗದಿದ್ದ ಸಂದೇಹಗಳಿಗೆ ಶ್ರೀ ಗುರುಗಳಿಂದ ಸೂಕ್ತವಾದ ಮಾರ್ಗದರ್ಶನವನ್ನು ಪಡೆಯುತ್ತಿದ್ದರು.



ಗೋಪಾಲಶಾಸ್ತ್ರಿಗಳ ಪತ್ನಿ ಶ್ರೀಮತಿ ಲಕ್ಷಮ್ಮನವರೂ ಅಷ್ಟೇ. ಪತಿಯ ಪಡಿನೆರಳು. ಅವರ ಎಲ್ಲಾ ಕಾರ್ಯಗಳಲ್ಲಿಯೂ ಅನುಕೂಲೆಯಾಗಿದ್ದ ಸತಿ. ಜೀವನ ನಿರ್ವಹಣೆಗಾಗಿ ಮಠದಿಂದ ಬರುತ್ತಿದ್ದ ಅಲ್ಪ ವರವಾನ ಸಾಕಾಗುತ್ತಿರಲಿಲ್ಲ. ಅದರಲ್ಲಿಯೇ ಸಂಸಾರದ ಖರ್ಚುವೆಚ್ಚಗಳನ್ನು ಸರಿದೂಗಿಸುವುದು ಕಷ್ಟವಾಗಿದ್ದರೂ, ತಮ್ಮ ಬಡತನವನ್ನೇ ದೊಡ್ಡದು ಮಾಡಿಕೊಂಡು ಮನಸ್ಸನ್ನು ಕುಂಠಿತಗೊಳಿಸುತ್ತಿರಲಿಲ್ಲ ಆ ತಾಯಿ. ದಂಪತಿಗಳಿಬ್ಬರು ಇದ್ದುದರಲ್ಲಿಯೇ ತೃಪ್ತಿ ಕಾಣುತ್ತಿದ್ದರು. ಅವರ ಜೀವನವೇ ಭಗವತ್ ಕೈಂಕರ್ಯವಾಗಿದ್ದಿತು. ಬಡತನ, ಸಿರಿತನಗಳು ಕಡೆಯವರೆಗೂ ಶಾಶ್ವತವೇ?

ಜೀವನದಲ್ಲಿ ಪ್ರತಿಯೊಬ್ಬರಿಗೂ ಯಾವುದಾದರೊಂದು ಚಿಂತೆ ಇದ್ದೇ ಇರುತ್ತದೆ. ಹಾಗೆಯೇ ಇವರಿಗೂ ಮಕ್ಕಳಿಲ್ಲವೆಂಬ ಒಂದು ಕೊರತೆಯಿದ್ದಿತು. ತಮ್ಮ ವಂಶದ ಕುಡಿ ಚಿಗುರಲಿಲ್ಲವಲ್ಲಾ ಎಂಬ ನೋವು ಒಳಗುದಿ ಅವರನ್ನು ಕಾಡುತ್ತಿತ್ತು. ಮಕ್ಕಳಿಲ್ಲದ ಮನೆ ದೇವರಿಲ್ಲದ ಗುಡಿಯಂತಲ್ಲವೇ? ಅವರಿಗೆ ಮಕ್ಕಳೇ ಆಗಲಿಲ್ಲವೆಂದಲ್ಲ. ಮಕ್ಕಳಾದುವು. ಆದರೆ ಹುಟ್ಟಿದ ಮಕ್ಕಳೆಲ್ಲವೂ ಅಲ್ಪಾಯುಷಿಗಳಾಗಿದ್ದು ಮನೆಯನ್ನು ತುಂಬಿದಂತೆಯೇ ಶೂನ್ಯಗೊಳಿಸುತ್ತಿದ್ದವು. ಮಕ್ಕಳಿಲ್ಲದೇ ಶೂನ್ಯವಾಗಿದ್ದ ಆ ಮನೆ ಇನ್ನೇನು ಮಕ್ಕಳಿಂದ, ಮಕ್ಕಳ ಆಟಪಾಠಗಳಿಂದ ಹರ್ಷದ ನೆಲೆಯಾಯಿತೆಂದು ಹಿಗ್ಗುವಷ್ಟರಲ್ಲಿಯೇ ಅಪಮೃತ್ಯು ಬಂದೆರಗುತ್ತಿತ್ತು. ಸಂತೋಷದ ಹಿಂದೆಯೇ ದುಃಖ ಬಂದು ಅಪ್ಪಳಿಸುತ್ತಿತ್ತು. ಒಂದೇ, ಎರಡೇ, ವಿಧಿ ಸುಮಾರು ಹನ್ನೆರಡು ಮಕ್ಕಳನ್ನು ಕೊಟ್ಟಂತೆ ಮಾಡಿ, ಕೂಡಲೇ ಕಸಿದುಕೊಂಡು ಶಾಸ್ತ್ರಿಗಳ ಮನೆಯನ್ನು ದುಃಖದ ಮಡುವನ್ನಾಗಿ ಮಾಡಿಬಿಟ್ಟಿತ್ತು.

ಶಾಸ್ತ್ರಿಗಳಾದರೋ ಪ್ರಯತ್ನಪಟ್ಟು ಮನಸ್ಸಿಗೆ ಸಮಾಧಾನ ತಂದುಕೊಳ್ಳುತ್ತಿದ್ದರು. ಪೂರ್ವಜನ್ಮದಲ್ಲಿ ಮಾಡಿದ್ದ ಕರ್ಮಕ್ಕೆ ಈಗ ಫಲವನ್ನು ಭೋಗಿಸುತ್ತಿದ್ದೇವೆ ಎಂದುಕೊಂಡು ಈ ದುಃಖವನ್ನು ಅನುಭವಿಸುತ್ತಿದ್ದರು. ಜನ್ಮಾಂತರದಲ್ಲಿ ಮಾಡಿದುದನ್ನು ಈಗ ಭೋಗಿಸಲೇ ಬೇಕಲ್ಲವೇ? ಈ ದುಃಖದ ಬದಲು ಸುಖ, ಸಂತೋಷಗಳು ಬಂದಿದ್ದರೆ ಬೇಡವೆಂದು ದೂರ ಮಾಡುತ್ತಿದ್ದೆವೇ? ಬಂದದ್ದೆಲ್ಲಾ ಬರಲಿ, ಎಲ್ಲಕ್ಕೂ ಧೈರ್ಯವಾಗಿ ಎದೆಯೊಡ್ಡಿ ನಿಲ್ಲೋಣ ಎನ್ನುವ ಮನೋಭಾವ ಶಾಸ್ತ್ರಿಗಳದು. ಮಕ್ಕಳ ಸಾವನ್ನು ನೆನೆದು ಆ ದುಃಖವನ್ನು ಪದೇ ಪದೇ ಮನಸ್ಸಿನಲ್ಲಿ ಮೆಲುಕು ಹಾಕುವುದು ಬೇಡ ಎಂಬುದು ಶಾಸ್ತ್ರಿಗಳ ಅಭಿಪ್ರಾಯವಾಗಿತ್ತು. ಸುಖದುಃಖಗಳಲ್ಲಿ ಮನಸ್ಸನ್ನು

ಸಮತೋಲನದಲ್ಲಿಟ್ಟ ಶಾಸ್ತ್ರಿಗಳು ಸ್ಥಿತಪ್ರಜ್ಞತೆಯನ್ನು ಹೊಂದುವ ಹಾದಿಯಲ್ಲಿದ್ದರು.

ಆದರೆ ಲಕ್ಷಮ್ಮನವರು? ಹೆತ್ತ ಹೊಟ್ಟೆಯ ದುಃಖಕ್ಕೆ ಪಾರವುಂಟೆ? ನವಮಾಸಗಳು ಗರ್ಭದಲ್ಲಿ ಧರಿಸಿ ಅನೇಕ ಆಸೆ ಆಕಾಂಕ್ಷೆಗಳನ್ನಿಟ್ಟುಕೊಂಡು ಶಿಶು ಬೆಳೆದಂತೆಲ್ಲಾ ತಮ್ಮ ಆಸೆ ಆಕಾಂಕ್ಷೆಗಳನ್ನು ವಿಸ್ತರಿಸಿಕೊಂಡು ಸುಖದ ಕನಸನ್ನು ಕಾಣುತ್ತಿರುವ, ಕಲ್ಪನಾ ರಾಜ್ಯದಲ್ಲಿ ವಿಹರಿಸುತ್ತಿರುವ ತಾಯಿಯ ಮನಸ್ಸು ತನ್ನೆಲ್ಲಾ ಆಸೆ ನಂಬಿಕೆ ಇವುಗಳ ಎರಕವಾದ ತನ್ನ ಜೀವನ ಜ್ಯೋತಿಯಾದ ಶಿಶುವನ್ನು ವಿಧಿ ಕಸಿದುಕೊಂಡರೆ ಆ ಮಾತೃಹೃದಯ ಅನುಭವಿಸುವ ವೇದನೆಗೆ ಮಿತಿಯುಂಟೆ? ಆ ಕರುಳು ಮಿಡಿವ ಕಂಬನಿಗೆ ಎಣೆಯುಂಟೆ? ಮಕ್ಕಳಾಗದಿದ್ದರೆ ಮಕ್ಕಳಾಗಲಿಲ್ಲವಲ್ಲಾ ಎಂಬುದೊಂದೇ ಕೊರಗು. ಆದರೆ ಮಕ್ಕಳಾಗಿ ತಮ್ಮ ಬಾಳಿಗೊಂದು ಭರವಸೆಯುಂಟಾಗುವುದೆಂದು ನಂಬಿದ್ದ ತಾಯ ಮನಕ್ಕೆ ಮಗುವಿನ ಸಾವು ತರುವ ನೋವು ಅವರ್ಣನೀಯ. ಶಾಸ್ತ್ರಿಗಳು ಎಷ್ಟೇ ಸಮಾಧಾನ ಪಡಿಸಿದರೂ ಲಕ್ಷಮ್ಮನವರಿಗೆ ದುಃಖ ಉಮ್ಮಳಿಸುತ್ತಿತ್ತು. ಮತ್ತೆ ಮತ್ತೆ ಮರುಕಳಿಸುತ್ತಿತ್ತು. ಶಾಸ್ತ್ರಿಗಳು ಪುರಾಣ, ಇತಿಹಾಸಗಳ ನಿದರ್ಶನಗಳನ್ನೆಲ್ಲಾ ಕೊಟ್ಟು ಜೀವನದ ಅಸ್ಥಿರತೆಯನ್ನೂ, ಸಾವು ಎಲ್ಲರಿಗೂ ಕಟ್ಟಿಟ್ಟುದೇ ಎಂಬುದನ್ನೂ ವಿವರಿಸುತ್ತಿದ್ದಾಗ ಲಕ್ಷಮ್ಮನವರಿಗೆ ಸ್ವಲ್ಪ ಸಮಾಧಾನವಾದರೂ, ಶಾಸ್ತ್ರಿಗಳು ಮರೆಯಾದರೆಂದರೆ ಮನಸ್ಸು ಎತ್ತೆತ್ತಲೋ ತಿರುಗಿ, ಯಾವುದಾವುದೋ ಭಾವಗಳಲ್ಲಿ ಸಂಚರಿಸಿ ಕೊನೆಗೆ ಅದರ ಸ್ಥಾಯಿಭಾವಕ್ಕೆ ಎಂದರೆ ದುಃಖಕ್ಕೆ ಜೋತು ಬೀಳುತ್ತಿತ್ತು. ಯಾವ ವಿಷಯ ಕುರಿತು ಆಲೋಚಿಸಿದರೂ ಚಿತ್ರದಂತೆ ಎಲ್ಲ ಯೋಚನೆಗಳೂ ಸರಿಯುತ್ತಾ ಬಂದು ಕೊನೆಗೆ ನಿಲ್ಲುತ್ತಿದ್ದುದು ತಮಗಾದ ದುಃಖದ ನೆನಪೊಂದೇ. ತಮಗಾದ ದಾರುಣ ವೇದನೆ, ತಮ್ಮ ಮಕ್ಕಳ ಸಾವು, ಒಂದರ ಹಿಂದೊಂದರಂತೆ ಘಟಿಸಿದ ದುಃಖ ಪರಂಪರೆ ಇವೇ ಆಕೆಯ ಮನಃಪಟಲದ ಮೇಲೆ ನಿಲ್ಲುತ್ತಿದ್ದವು.

ಜೀವನ ಮತ್ತು ಜೀವನದ ಅನುಭವಗಳಾದ ಸುಖ, ಸಂತೋಷ, ಕಷ್ಟನಷ್ಟಗಳೆಲ್ಲವೂ ಶಾಶ್ವತವಲ್ಲವಾದರೂ ಇರುವವರೆಗೆ ಸಮಾಧಾನದಿಂದ ಇರಬೇಡವೇ? ದುಃಖದಲ್ಲಿ ಕುಗ್ಗದೇ, ಹರ್ಷದಲ್ಲಿ ಹಿಗ್ಗದೇ ಮನಸ್ಸನ್ನು ಸಮತೋಲದಲ್ಲಿ ಇಟ್ಟರೆ ಸ್ವಲ್ಪವಾದರೂ ಶಾಂತಿ ಲಭಿಸದೆ? ವಿಚಾರಪರವಾದ ಮನಸ್ಸು ಇವೆಲ್ಲವನ್ನೂ ಕುರಿತು ತನ್ನಲ್ಲಿ ತಾನು ಚರ್ಚಿಸಿಕೊಳ್ಳಬಹುದು. ಸರಿಯಾದ ಹಾದಿಯಲ್ಲಿ ನಡೆಯಲು ಪ್ರಯತ್ನಿಸಬಹುದು. ಆದರೆ ಎಲ್ಲರೂ



ವಿಚಾರಪರರೇ? ದುಃಖ ಸಂಕಟಗಳ ಸಮಯದಲ್ಲಿ ಮನಸ್ಸನ್ನು ಸ್ವಸ್ಥಾನದಲ್ಲಿ ಎಷ್ಟು ಮಂದಿ ನಿಲ್ಲಿಸಬಲ್ಲರು? ಭಾವನಾಪ್ರಧಾನ ಮನಸ್ಸುಳ್ಳವರು ದುಃಖವಾಗಲೀ, ಹರ್ಷವಾಗಲೀ ಆ ಕ್ಷಣವೇ ತದ್ವಶರಾಗಿ ಬಿಡುತ್ತಾರೆ. ಅಂತಹವರ ಮನಸ್ಸು ಸಮಾಧಾನ ಸ್ಥಿತಿಗೆ ಬರುವುದು ಬಹು ಕಷ್ಟ. ಅಭ್ಯಾಸದಿಂದ ಪದೇ ಪದೇ ಮನಸ್ಸನ್ನು ನಿಗ್ರಹಿಸುವುದರಿಂದ ಸ್ವಲ್ಪಮಟ್ಟಿಗೆ ಸ್ವಾಸ್ಥ್ಯವನ್ನು ಹೊಂದಬಹುದು. ಶಾಸ್ತ್ರಿಗಳ ಮನಸ್ಸು ವಿಚಾರಪ್ರಧಾನವಾದರೆ ಲಕ್ಷಮ್ಮನವರ ಮನಸ್ಸು ಭಾವನಾಪ್ರಧಾನವಾಗಿತ್ತು. ಆಕೆ ಸಮಾಧಾನಕ್ಕೆ ಬರಬೇಕಾದರೆ ಆಕೆಯ ಮನಸ್ಸನ್ನು ನಿರಂತರವಾಗಿ ಕೊರೆಯುತ್ತಿದ್ದ ತೀವ್ರ ದುಃಖದಿಂದ ಬೇರೆ ಕಡೆ ತಿರುಗಿಸಬೇಕು. ಅದಕ್ಕೆ ಆ ಮನೆ, ಆ ಊರು ಬಿಟ್ಟು ಆ ಸನ್ನಿವೇಶದಿಂದ ದೂರ ಹೋದರೆ ಸಾಧ್ಯವಾಗಬಹುದು. ಪತ್ನಿಯ ಮನಸ್ಸಿಗೆ ಆಗಿರತಕ್ಕ ಆಘಾತ, ಆಕೆಯು ಅನುಭವಿಸುತ್ತಿರುವ ದುಃಖ ಇವು ಕಡಿಮೆಯಾಗಬೇಕಾದರೆ ಸ್ವಲ್ಪಮಟ್ಟಿಗಾದರೂ ಆಕೆಯ ಮುಖದಲ್ಲಿ ಗೆಲುವು ಕಾಣಬೇಕಾದರೆ ಸ್ಥಳ ಬದಲಾವಣೆಯಾಗುವುದು ಒಳ್ಳೆಯದೇನೋ ಎನಿಸಿತು ಶಾಸ್ತ್ರಿಗಳಿಗೆ.

* * *

# ೪. ತೀರ್ಥಯಾತ್ರೆಯ ಸಂಕಲ್ಪ

ಶೃಂಗೇರಿಯನ್ನು ಬಿಟ್ಟು ಬೇರೆಲ್ಲಾದರೂ ದೂರ ನೆಲಸಬೇಕೆನ್ನಿಸಲಿಲ್ಲ ಶಾಸ್ತ್ರಿಗಳಿಗೆ. ಸ್ವಲ್ಪ ದಿನ ತೀರ್ಥಯಾತ್ರೆ ಮಾಡಿಕೊಂಡು ಬಂದರೆ ತಮ್ಮ ಪತ್ನಿಗೆ ಸ್ಥಳಪಲ್ಲಟದಿಂದಾಗುವ ಹೊಸ ಜನರ ಪರಿಚಯದಿಂದ ವಿಶಾಲ ಜಗತ್ತಿನಲ್ಲಿ ತನಗಿಂತಲೂ ದುಃಖಿಗಳೂ, ಕಷ್ಟದಲ್ಲಿರುವವರೂ ಇದ್ದಾರೆಂಬ ನಂಬಿಕೆಯುಂಟಾಗಿ, ಆಕೆಯ ದುಃಖವೂ ಕಡಿಮೆಯಾಗಬಹುದು; ಪುಣ್ಯಕ್ಷೇತ್ರಗಳ ಸಂದರ್ಶನದಿಂದ ಭಗವತ್ಕೃಪೆಯಿಂದ ಆಕೆಯ ಮನಸ್ಸು ತನ್ನ ಜಂಜಡಗಳನ್ನು ಕಳಚಿಕೊಂಡು ಹಗುರಾಗಬಹುದು. ಹೀಗೆ ಶಾಸ್ತ್ರಿಗಳು ಮನಸ್ಸಿನಲ್ಲಿಯೇ ಕೆಲವು ದಿನಗಳು ಆಲೋಚಿಸಿದರು. ಈ ಆಲೋಚನೆ ಬಲವಾದಾಗ ಪತ್ನಿಯಲ್ಲಿಯೂ ಪ್ರಸ್ತಾಪ ಮಾಡಿದರು. ಇದನ್ನು ಕೇಳಿದೊಡನೆಯೇ ಆಕೆ ಉತ್ಸಾಹಿತರಾದರು.

ಈ ಮಧ್ಯೆ ಕೆಲ ಜನ ಶಾಸ್ತ್ರಿಗಳು ವಾಸವಿದ್ದ ಮನೆಯಲ್ಲಿ ಯವುದಾದರೂ ವಾಸ್ತುದೋಷವಿದ್ದು ಅದೇ ಕಾರಣದಿಂದ ಅವರ ಸಂಸಾರಕ್ಕೆ ಏಳಿಗೆ ಇಲ್ಲದೇ, ಕಷ್ಟ ಪರಂಪರೆಯೇ ಸಂಭವಿಸುತ್ತಿರಬಹುದೇನೋ ಎಂದು ಅನುಮಾನಿಸಿದರು ಮತ್ತು ಆ ಮನೆಯನ್ನು ಬಿಟ್ಟು ಬೇರೆ ಯಾವುದಾದರೂ ಮನೆಗೆ ಹೋಗಬೇಕೆಂದು ಸೂಚಿಸಿದರು. ತಮ್ಮ ಕಷ್ಟಗಳಿಗೆಲ್ಲಾ ಪೂರ್ವಕೃತ ಕರ್ಮಗಳೇ ಕಾರಣವೆಂದು ನಂಬಿದ್ದರಲ್ಲವೇ ಶಾಸ್ತ್ರಿಗಳು? ತಮ್ಮ ಹಿತಮಿತ್ರರ ಈ ಸಲಹೆಯನ್ನು ಕುರಿತು ಆಲೋಚಿಸಿದಾಗ ತಮ್ಮ ಕಷ್ಟನಷ್ಟಗಳಿಗೆ ಆ ಮನೆ ಹೇಗೆ ಕಾರಣವಾದೀತು? ಮನೆ ಬಿಟ್ಟು ಬೇರೆ ಮನೆಗೆ ಹೋದರೆ ಕಷ್ಟನಷ್ಟಗಳೆಲ್ಲಾ ಕಳೆಯುತ್ತವೆ ಎಂಬುದಕ್ಕೆ ಭರವಸೆಯೇನು? ಈಗ ತಾವು ಅನುಭವಿಸುತ್ತಿರುವುದಕ್ಕೆ ಪೂರ್ವಕರ್ಮ ಕಾರಣವಾದರೆ ಈ ಜನ್ಮದಲ್ಲಿ ಒಳ್ಳೆಯ ಕರ್ಮಾಚರಣೆಯಿಂದ ಸತ್ಫಲ ಬರಬೇಕಲ್ಲವೇ? ಎಂಬುದಾಗಿ ಶಾಸ್ತ್ರಿಗಳು ಮನಸ್ಸಿಗೆ ಸಮಾಧಾನ ತಂದುಕೊಳ್ಳುತ್ತಿದ್ದರು.

ತೀರ್ಥಯಾತ್ರೆ ಹೊರಡುವ ಪ್ರೇರಣೆ ಮೊಟ್ಟಮೊದಲು ಅವರ ಮನಸ್ಸಿನಲ್ಲುಂಟಾದಾಗ ಚಂಚಲ ಮನಸ್ಸಿನಲ್ಲಿ ಏಳುತ್ತಿದ್ದ ನೂರಾರು ತರಂಗಗಳಲ್ಲಿ ಅದೂ ಒಂದೆಂದು ಸುಮ್ಮನಿದ್ದರು ಶಾಸ್ತ್ರಿಗಳು. ಆದರೆ ಅದೇ ಆಲೋಚನೆ ಪದೇ ಪದೇ ಮನಸ್ಸನ್ನು ತನ್ನೆಡೆಗೆ ಸೆಳೆಯುತ್ತಿದ್ದಾಗ ಇದರ



ಹಿಂದೆ ದೈವಪ್ರೇರಣೆಯೂ ಇದೆಯೆಂಬ ನಂಬಿಕೆ, ದೃಢವಿಶ್ವಾಸ ಅವರಲ್ಲಿ ಮೂಡಿತು. ತಾವು ತೀರ್ಥಯಾತ್ರೆ ಹೊರಡಬೇಕೆಂಬುದು ಭಗವಂತನ ಆಣತಿಯೆಂದು ಅವರು ನಂಬಿದರು.

ಶಾಸ್ತ್ರಿಗಳು ತೀರ್ಥಯಾತ್ರೆಯನ್ನು ಕುರಿತು ಪ್ರಸ್ತಾಪಿಸಿದ ಮಾರನೆಯ ದಿನದಿಂದಲೇ ಲಕ್ಷಮ್ಮನವರು ಪ್ರಯಾಣದ ಸಿದ್ಧತೆಯಲ್ಲಿ ತೊಡಗಿದರು. ಭಾವುಕರಾದ ಆಕೆ ಮನದಲ್ಲಿಯೇ ನೂರಾರು ಚಿತ್ರಗಳನ್ನು ಕಲ್ಪಿಸಿಕೊಂಡು ಹರ್ಷಪಟ್ಟರು. ಸಂತೋಷವನ್ನು ಅನುಭವಿಸಿದರು. ಉತ್ಸಾಹದಿಂದ ಪ್ರಯಾಣಕಾಲಕ್ಕೆ ಅಗತ್ಯವಾದ ಉಪಾಹಾರ ಸಾಮಗ್ರಿಗಳನ್ನು ಅನುಗೊಳಿಸಿದರು. ಪತ್ನಿಯ ಈ ಸಂಭ್ರಮ, ಸಂತೋಷಗಳನ್ನು ಕಂಡ ಶಾಸ್ತ್ರಿಗಳಿಗೆ ವಿಸ್ಮಯವಾಯಿತು. ತೀರ್ಥಯಾತ್ರೆಗೆ ಹೊರಡೋಣವೆಂದಾಗಲೇ ಇಷ್ಟು ಪರಿವರ್ತನೆ ಹೊಂದಿದ ಮನಸ್ಸು ತೀರ್ಥಸ್ನಾನ, ಪುಣ್ಯಕ್ಷೇತ್ರ ವಾಸ, ದೇವತಾ ಸಂದರ್ಶನ ಮತ್ತು ಭಗವದ್ಭಕ್ತರೊಡನೆ ಕಲೆಯುವುದರಿಂದ ಖಂಡಿತವಾಗಿಯೂ ತನ್ನೆಲ್ಲಾ ಸಂಕೋಲೆಗಳನ್ನು ಕಳಚಿಕೊಂಡು ಹಗುರವಾಗುವುದೆಂದು ಶಾಸ್ತ್ರಿಗಳು ನಂಬಿದರು. ಸಹಧರ್ಮಿಣಿಯ ದುಃಖ ನಿವಾರಣೆಗಿಂತ ಅವರಿಗೆ ಆ ಘಳಿಗೆಯಲ್ಲಿ ಬೇರಾವ ಚಿಂತೆಯೂ ಇರಲಿಲ್ಲ.

ಪ್ರಯಾಣಕ್ಕೆ ಶುಭದಿನವೊಂದನ್ನು ನಿಶ್ಚಯಿಸಿ ತಮ್ಮ ಗುರುವರ್ಯರಾದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರ ಅಪ್ಪಣೆ ಪಡೆಯಲೆಂದು ದಂಪತಿಗಳು ಮಠಕ್ಕೆ ಬಂದರು. ಗುರುಗಳಿಗೂ ಆ ಪತಿಸತಿಯರ ಅಂತರಂಗದ ವೇದನೆಯ ಅರಿವು ಇತ್ತು. ಅವರಿಗೊದಗಿದ್ದ ದುಃಖ, ಒಂದರ ಮೇಲೊಂದರಂತೆ ಮಕ್ಕಳ ಸಾವು, ಬಂದೊದಗುತ್ತಿದ್ದ ವಿಪತ್ಪರಂಪರೆ ಇವೆಲ್ಲವೂ ಗುರುಗಳಿಗೆ ತಿಳಿದೇ ಇದ್ದವು. ಶಾಸ್ತ್ರಿಗಳು ಮತ್ತು ಲಕ್ಷಮ್ಮನವರು ತಮ್ಮ ದರ್ಶನಕ್ಕೆ ಬಂದಾಗ ಗುರುಗಳು ಅವರನ್ನು ಹಸನ್ಮುಖದಿಂದ ಸ್ವಾಗತಿಸಿ ಯೋಗಕ್ಷೇಮ ವಿಚಾರಿಸಿದರು. ಶಾಸ್ತ್ರಿಗಳು ತಾವು ಸಪತ್ನೀಕರಾಗಿ ತೀರ್ಥಯಾತ್ರೆ ಹೊರಡಬೇಕೆಂದಿರುವ ವಿಷಯವನ್ನು ಗುರುಗಳಿಗೆ ನಿವೇದಿಸಿ, ಗುರುಗಳ ಅಪ್ಪಣೆಯನ್ನೂ, ಆಶೀರ್ವಾದವನ್ನೂ ಕೋರಿ ಬಂದಿರುವುದಾಗಿ ಅರಿಕೆ ಮಾಡಿದರು. ಗುರುಗಳು ಮಂದಹಾಸದಿಂದ "ನಿಮ್ಮ ತೀರ್ಥಯಾತ್ರೆಯು ಯಾವ ಅಡ್ಡಿ ಆತಂಕಗಳೂ ಇಲ್ಲದೇ ನೆರವೇರಲಿ. ನಿಮಗೆ ಸುಖಶಾಂತಿ ಲಭಿಸಲಿ" ಎಂದು ಆಶೀರ್ವದಿಸಿ, "ನಿಮ್ಮ ಉದ್ದೇಶ ಶ್ರೀಭಗವಂತನ ಕೃಪೆಯಿಂದ ಸಿದ್ಧಿಸಲಿ, ಹೋಗಿಬನ್ನಿ" ಎಂದು ಅನುಗ್ರಹಿಸಿದರು. ಫಲ ಮಂತ್ರಾಕ್ಷತೆಗಳನ್ನು ಸ್ವೀಕರಿಸಿ, ಗುರುಗಳ ಆಶೀರ್ವಾದವನ್ನು ಶಿರಸಾ ಧರಿಸಿ ಸತಿಪತಿಯರು

ಮನೆಗೆ ಮರಳಿದರು. ಶ್ರೀಗುರುಗಳ ಆಶೀರ್ವಾದದ ಹಿಂದೆ ಭಗವಂತನ ಯಾವ ಸೂಚನೆಯಿತ್ತೋ?

ತೀರ್ಥಯಾತ್ರೆಗೆ ಹೊರಡೋಣವೆಂದು ಹೇಳಿದ್ದೇ ಲಕ್ಷ್ಮಮ್ಮನವರಿಗೆ ಸಂಜೀವಿನಿಯಾಯಿತು. ಲವಲವಿಕೆಯಿಂದ ಓಡಾಡಲಾರಂಭಿಸಿದರು. ಅವರ ಕೆಲಸಗಳಲ್ಲಿ ಉತ್ಸಾಹ ಚಟುವಟಿಕೆಗಳೂ ಕಾಣಿಸಿಕೊಂಡವು. ನೋವಿನಿಂದ ಬಾಡಿ ದೈನ್ಯವಾಗಿದ್ದ ಅವರ ಮುಖದಲ್ಲಿ ಹರ್ಷಸಂತೋಷದ ಗೆರೆಗಳು ಮೂಡಿದವು. ಗುರುಗಳು ಆಶೀರ್ವದಿಸಿ "ನಿಮ್ಮ ಉದ್ದೇಶ ನೆರವೇರಲಿ" ಎಂದಾಗ ಲಕ್ಷ್ಮಮ್ಮನವರಿಗೆ ನೂರಾರು ಭರವಸೆಗಳನ್ನಿತ್ತಂತಾಯಿತು. ಆ ತಾಯಿಯ ಮುಖ ಅಪೂರ್ವಕಾಂತಿಯಿಂದ ಅಂತಶ್ಶಾಂತಿಯ ಕನ್ನಡಿಯಂತೆ ಶೋಭಿಸಿತು.

ಶ್ರೀಗುರುದರ್ಶನ, ಶ್ರೀಶಾರದಾಂಬಾ ದರ್ಶನ, ಶೃಂಗೇರಿ ಕ್ಷೇತ್ರದ ಎಲ್ಲಾ ದೇವಾಲಯಗಳ ಸಂದರ್ಶನ ಮಾಡಿಕೊಂಡು ಒಂದು ಬೆಳಿಗ್ಗೆ ಶುಭ ಮುಹೂರ್ತದಲ್ಲಿ ಪ್ರಯಾಣವಾರಂಭಿಸಿದರು. ಆಪ್ತರಾದವರು ಕೆಲವರು ಊರ ಅಗಸೆಯ ಬಾಗಿಲವರೆಗೂ ಬಂದು ದಂಪತಿಗಳನ್ನು ಬೀಳ್ಕೊಟ್ಟರು. ಒಬ್ಬಿಬ್ಬರು ಅನುಚರರೊಡನೆ ಕಾಲ್ನಡಿಗೆಯಲ್ಲಿಯೇ ಪ್ರಯಾಣ ಸಾಗಿತು.

* * *



# ೫. ಶೃಂಗೇರಿಯಿಂದ ಗೋಕರ್ಣದವರೆಗೆ

ಆ ದಿನಗಳಲ್ಲಿ ಪ್ರಯಾಣ ಸೌಲಭ್ಯ ಚೆನ್ನಾಗಿ ಇರುತ್ತಿರಲಿಲ್ಲ. ಈಗಿನಂತೆ ಬಸ್ಸುಗಳು ಇರುತ್ತಿರಲಿಲ್ಲ. ಸರಿಯಾದ ರಸ್ತೆಯೂ ಇರಲಿಲ್ಲ. ಈ ರಸ್ತೆ, ವಾಹನ ಸೌಕರ್ಯಗಳಲ್ಲಿ ಮಲೆನಾಡು ಪ್ರದೇಶವಂತೂ ತೀರಾ ಹಿಂದುಳಿದಿತ್ತು. ದೂರ ಸ್ಥಳಗಳಿಗೆ ಪ್ರಯಾಣ ಮಾಡಬೇಕಾದವರು ಕಾಲ್ನಡಿಗೆಯಲ್ಲೋ, ಗಾಡಿಗಳಲ್ಲೋ ರೈಲು ಬಸ್ಸು ನಿಲ್ದಾಣಗಳಿಗೆ ಬಂದು ಅಲ್ಲಿಂದ ಮುಂದೆ ತಮಗೆ ಅನುಕೂಲ ವಾದ ಮಾರ್ಗ ಹಿಡಿಯಬೇಕಾಗಿತ್ತು. ಕಾಲ್ನಡಿಗೆಯಲ್ಲಿ ಹೊರಡುವವರು ಅಲ್ಲಲ್ಲೇ ಗ್ರಾಮಗಳಲ್ಲಿ ಸ್ವಲ್ಪ ಸ್ವಲ್ಪ ತಂಗುತ್ತಾ ದಣಿವಾರಿಸಿಕೊಂಡು ತಮ್ಮ ನಿಶ್ಚಿತ ಸ್ಥಳ ಕುರಿತು ಮುಂದಿನ ಪ್ರಯಾಣ ಬೆಳೆಸುತ್ತಿದ್ದರು. ಶಾಸ್ತ್ರಿ ದಂಪತಿಗಳು ಹೆಚ್ಚು ಪ್ರಯಾಣವನ್ನು ಕಾಲ್ನಡಿಗೆಯಲ್ಲೇ ಮಾಡಿದರು. ಹಾಗೆ ಅವರು ಗ್ರಾಮಗಳಲ್ಲಿ ಅಲ್ಲಲ್ಲಿ ತಂಗುತ್ತಾ ಆಗುಂಬೆಗೆ ಬಂದರು.

ರಮ್ಯ ಪ್ರದೇಶವಾದ ಮಲೆನಾಡಿನಲ್ಲಿ ಎಲ್ಲಿ ನೋಡಿದರಲ್ಲಿ ಹಸಿರು. ಹಸಿರಿನದೇ ಸಾಮ್ರಾಜ್ಯ. ಸಹಸ್ರಶೀರ್ಷಳಾದ, ಪ್ರಕೃತಿದೇವಿಯು ಇಲ್ಲಿ ಸಹಸ್ರಾಕ್ಷಿಯಾಗಿ, ಸಹಸ್ರಬಾಹುಗಳಿಂದ ಸ್ವಾಗತಿಸುತ್ತಾಳೆ ತನ್ನ ದಿವ್ಯ ದೇಗುಲಕ್ಕೆ. ದೇವಿಯು ತನ್ನ ಸಹಸ್ರ ಮಕುಟಗಳಿಂದ ಶೋಭಿಸುತ್ತಾಳೆ. ಭಾವುಕರಾದವ ರಂತೂ ಮೈಮರೆತು ತಾವೂ ಸಹ ಆ ಸೌಂದರ್ಯದಲ್ಲಿ ಲೀನವಾಗಿಬಿಡುತ್ತಾರೆ. ಇಂತಹ ಚೆಲುವಿಕೆಯ ತಾಣವಾದ ಶೃಂಗೇರಿಯಿಂದ ಪಯಣ ಬೆಳಸಿ ಆಗುಂಬೆಗೆ ಬಂದವರು ಅಲ್ಲಿನ ಪ್ರಕೃತಿ ಶೋಭೆಯಿಂದ ಇನ್ನೂ ಹರ್ಷಪುಲಕಿತರಾಗುತ್ತಾರೆ. ಲೋಕಕಲ್ಯಾಣಕ್ಕಾಗಿ ತನ್ನನ್ನು ತಾನೇ ಅರ್ಪಿಸಿಕೊಂಡ ಸೂರ್ಯದೇವನು ಅನುಭವಪೂರ್ಣನಾಗಿ ಜ್ಞಾನಿಯೂ, ಪವಿತ್ರಾತ್ಮನೂ ಆಗಿ ವೃದ್ಧ ಕೇಸರಿಯ ಗಾಂಭೀರ್ಯದಲ್ಲಿ ಪಡುವಣ ಕಡಲಲ್ಲಿಳಿವ ಸಂಧ್ಯಾಕಾಲದ ಸೊಬಗು, ಆಧ್ಯಾತ್ಮಿಕ ರಮಣೀಯತೆ ಯಾರನ್ನು ತಾನೇ ಆಕರ್ಷಿಸದು?

ಶೃಂಗೇರಿಯಿಂದ ಬಂದ ದಂಪತಿಗಳು ಆಗುಂಬೆಯಲ್ಲಿ ಉಳಿದುಕೊಂಡು ಆ ಸೌಂದರ್ಯದರ್ಶನವನ್ನು ಮಾಡಿ ಹರ್ಷಿತರಾದರು. ಅಲ್ಲಿ ಇದ್ದಷ್ಟು ದಿನಗಳೂ ಅವರು ತಮ್ಮ ನೇಮ, ನಿಷ್ಠೆ, ಪೂಜೆ ಪಾರಾಯಣಗಳಿಂದಲೂ, ತಮ್ಮ ಸೂಳ್ನುಡಿಗಳಿಂದಲೂ ಎಲ್ಲರಿಗೂ ಮೆಚ್ಚಾದರು. ತಾವು ಉದ್ದೇಶಿಸಿದ್ದುದ ಕ್ಕಿಂತ ಹೆಚ್ಚು ದಿನಗಳು ಆಗುಂಬೆಯಲ್ಲಿ ಉಳಿದು ಜನರ ಆದರಾತಿಥ್ಯದಿಂದ ತೃಪ್ತರಾಗಿ ಅಲ್ಲಿಂದ ಮುಂದೆ ಆಗುಂಬೆಯ ಘಾಟಿ ಇಳಿದು ಉಡುಪಿಗೆ ಬಂದರು.

ಉಡುಪಿ ಕ್ಷೇತ್ರಕ್ಕೆ ಬಂದ ನಂತರ ಲಕ್ಷ್ಮಮ್ಮನವರ ಚಹರೆಯೇ ಬದಲಾಯಿಸಿತು. ಅವರ ನೇತ್ರಗಳು ದಿವ್ಯ ತೇಜಸ್ಸಿನಿಂದ ಮಿನುಗಿದವು. ಹರ್ಷ ಸಂತೋಷಗಳು ಅವರ ಮನಸ್ಸನ್ನು ಸೂರೆಗೊಂಡು ಮೈಯಲ್ಲಿ ಉತ್ಸಾಹ ತುಳುಕಾಡಿತು. ಶಾಸ್ತ್ರಿಗಳು ಇವನ್ನೆಲ್ಲಾ ಗಮನಿಸಿದ್ದರು. ಊರಿಂದ ಊರಿಗೆ ಕಾಲ್ನಡಿಗೆಯಲ್ಲಿಯೇ ಪ್ರಯಾಣ ಸಾಗಿದ್ದರೂ, ಕಷ್ಟಸಾಧ್ಯವಾಗಿದ್ದರೂ ಅದಾವುದರ ಪರಿವೆಯೇ ಇಲ್ಲದೇ ತಮ್ಮ ಪತ್ನಿಯು ಚಿಂತೆ ವ್ಯಸನಗಳನ್ನೆಲ್ಲಾ ಮರೆತು ಉತ್ಸಾಹ ಸಂತೋಷದಿಂದಿರುವುದನ್ನು ಕಂಡು ಶಾಸ್ತ್ರಿಗಳೂ ತೃಪ್ತರಾದರು, ಹರ್ಷಚಿತ್ತರಾದರು.

ಉಡುಪಿಯಲ್ಲಿ ಸಮುದ್ರಸ್ನಾನವಾಯಿತು. ಶ್ರೀಕೃಷ್ಣ ದರ್ಶನವಾಯಿತು. ಲಕ್ಷ್ಮಮ್ಮನವರ ಕಣ್ಣು, ಮನಸ್ಸು ಹೃದಯದಲ್ಲೆಲ್ಲಾ ಆ ಕೃಷ್ಣಮೂರ್ತಿಯ ದಿವ್ಯಸುಂದರ ರೂಪವೇ ತುಂಬಿತು. ಆ ಮಾತೆಯು ಆನಂದದ ಉನ್ಮತ್ತತೆಯನ್ನೂ ಸಹ ಅನುಭವಿಸಿದರು.

ವಿದ್ವಾಂಸರಾದ ಶಾಸ್ತ್ರಿಗಳು ಉಡುಪಿಯ ಮಠದ ಯತಿಗಳಿಂದ ಆಹ್ವಾನಿಸಲ್ಪಟ್ಟರು. ಶಾಸ್ತ್ರಿಗಳು ಎಲ್ಲಾ ಯತಿಗಳೊಡನೆಯೂ ಸಂಭಾಷಿಸಿ, ವೇದಾಂತ ವಿಚಾರ ವಿನಿಮಯ ನಡೆಸಿದರು. ಎಲ್ಲರಿಂದಲೂ ಗೌರವಿಸಲ್ಪಟ್ಟರು. ಯಾವ ಪಂಥದವರೇ ಆಗಲಿ, ವಿದ್ವಾಂಸರು ಪೂಜನೀಯರಲ್ಲವೇ? ದ್ವೈತ ವೇದಾಂತದ ಪೀಠದಲ್ಲಿ ಅದ್ವೈತ ವೇದಾಂತಿಗಳೊಬ್ಬರು ಗೌರವಿಸಲ್ಪಡುವುದು ಪರಸ್ಪರರಲ್ಲಿದ್ದ ಗೌರವಾದರಗಳ ಕುರುಹಲ್ಲವೇ?

ಉಡುಪಿಯಲ್ಲಿ ಸಂದರ್ಶಿಸಬೇಕಾದ ಸ್ಥಳಗಳನ್ನೆಲ್ಲಾ ಸಂದರ್ಶಿಸಿ, ನೋಡಬೇಕಾದವರನ್ನೆಲ್ಲಾ ನೋಡಿ ಪರ್ಯಾಯ ಯತಿಗಳಿಂದ ಫಲಮಂತ್ರಾಕ್ಷತೆ ಸ್ವೀಕರಿಸಿ ತಮ್ಮ ಪ್ರಯಾಣವನ್ನು ಮುಂದುವರೆಸಿದರು ಆ ದಂಪತಿಗಳು. ಈಗ ಅವರ ಪ್ರಯಾಣ ಗೋಕರ್ಣಾಭಿಮುಖವಾಗಿತ್ತು. ದಾರಿಯಲ್ಲಿ ಅಲ್ಲಲ್ಲಿ ತಂಗುತ್ತ ದೇವಮಂದಿರಗಳಲ್ಲಿಯೂ, ಪುಣ್ಯತೀರ್ಥಗಳಲ್ಲಿಯೂ ತಮ್ಮ ಯಾತ್ರೆಯ ಸಾರ್ಥಕತೆ ಕಾಣುತ್ತ ದಂಪತಿಗಳು ಗೋಕರ್ಣಕ್ಕೆ ಬಂದರು.

ಆ ವೇಳೆಗೆ ಲಕ್ಷಮ್ಮನವರ ಮನಸ್ಸು ಪೂರ್ಣ ಸಮಾಧಾನ ಸ್ಥಿತಿಗೆ ಬಂದಿತ್ತು. ಚಿಂತೆ, ವ್ಯಾಕುಲತೆ ಮುಂತಾದವು ಸ್ವಲ್ಪ ಸ್ವಲ್ಪವಾಗಿ ಕಡಿಮೆಯಾಗುತ್ತಿರಲು ಹೃದಯ ಹಗುರವಾಗಿತ್ತು. ಒಂದರ ಹಿಂದೊಂದರಂತೆ ದುಃಖ ಶೋಕ ಪರಂಪರೆಯನ್ನೇ ಅನುಭವಿಸಿದ ಆ ತಾಯಿಗೆ ತಾವು ಇಷ್ಟು ಕಷ್ಟನಷ್ಟಗಳನ್ನು, ದುಃಖವ್ಯಸನಗಳನ್ನು ಅನುಭವಿಸಿದರೂ ಇನ್ನೂ ಜೀವಿಸಿರುವುದು ಏಕೆಂದು ಯೋಚಿಸಿದಾಗ ತಮ್ಮಿಂದಾಗಬೇಕಾಗಿರುವ ಸಾರ್ಥಕ ಕಾರ್ಯ



ಯಾವುದೋ ಇರಬಹುದೆನ್ನಿಸಿತು. ಕಷ್ಟಪರಂಪರೆಯ ಬೆನ್ನಿಗೇ ಹರ್ಷ ಸಂತೋಷಗಳೂ ಬರಲೇಬೇಕು ಎಂಬ ಭಾವನೆಯೂ ಮೂಡಿತು. ಬೆಳಕು ಕತ್ತಲುಗಳು ಒಂದನ್ನೊಂದು ಅನುಸರಿಸುವಂತೆ ಸುಖದುಃಖಗಳೂ ಎಡಬಿಡದೇ ಪರಿಕ್ರಮಣ ಮಾಡುತ್ತವೆ ಎನ್ನಿಸಿತು. ತೀರ್ಥಯಾತ್ರೆ ಹೊರಟು ಅನೇಕ ಸ್ಥಳಗಳಲ್ಲಿ ತಮ್ಮ ತಮ್ಮ ಭಾವಕ್ಕನುಗುಣವಾಗಿ ನಿರ್ಮಿಸಲ್ಪಟ್ಟಿದ್ದ ವಿವಿಧ ದೇವಮಂದಿರಗಳಲ್ಲಿ ಆ ಮಾತೆ ಭಗವಂತನ ಸಾನ್ನಿಧ್ಯವನ್ನು ಕಂಡು ಪುಲಕಿತರಾಗಿದ್ದರು. ಯಾವುದೋ ಅಗೋಚರ ಶಕ್ತಿ ತಮ್ಮನ್ನು ಸ್ಥಳದಿಂದ ಸ್ಥಳಕ್ಕೆ, ಕ್ಷೇತ್ರದಿಂದ ಕ್ಷೇತ್ರಕ್ಕೆ ಒಯ್ಯುತ್ತಿರುವಂತೆ ಆಕೆಗೆ ಭಾಸವಾಯಿತು. ತಮ್ಮ ಮನದಿಚ್ಛೆಗಳೆಲ್ಲಾ ಪೂರ್ಣವಾಗಿ ನೆರವೇರಿ ತಮ್ಮ ಜೀವನ ಸಾರ್ಥಕತೆಯನ್ನು ಮುಟ್ಟುವ ಘಟ್ಟಕ್ಕೆ ಸಮೀಪವಾಗುತ್ತಿದೆಯೆಂದೂ ಭಾಸವಾಯಿತು.

ಇದಕ್ಕೆ ಸರಿಯಾಗಿ ಹಿಂದೆ ನಡೆದುಹೋದ ಇಂತಹುದೇ ಸಂದರ್ಭವೊಂದು ಆಕೆಗೆ ನೆನಪಾಯಿತು. ಹಿಂದೆ ಶಿವಗುರು ಮತ್ತು ಆರ್ಯಾಂಬಿಕೆಯವರು ತಮಗೆ ಸಂತತಿಯೇ ಇಲ್ಲದಿರುವಾಗ ಭಗವಾನ್ ವೃಷಭಾಚಲೇಶ್ವರನನ್ನು ಆರಾಧಿಸಿ ಮುಂದೆ ಜಗದ್ಗುರುವಾದ ಶ್ರೀಶಂಕರ ಭಗವತ್ಪಾದರನ್ನು ಪಡೆಯಲಿಲ್ಲವೇ? ಹಾಗೆಯೇ ಗೋಕರ್ಣ ಕ್ಷೇತ್ರದಲ್ಲಿ ಶ್ರೀಮಹಾಬಲೇಶ್ವರನ ದರ್ಶನದಿಂದ ತಮಗೂ ಪುತ್ರಭಾಗ್ಯ ದೊರಕಬಹುದೇನೋ ಎನ್ನಿಸಿತು.[೨] ಕೆಲವು ದಿನಗಳ ಹಿಂದೆ ಉಡುಪಿಯಲ್ಲಿ ದರ್ಶಿಸಿದ ಶ್ರೀ ಕೃಷ್ಣನ ದಿವ್ಯಮೂರ್ತಿಯೂ ಮನದಲ್ಲಿ ಮೂಡಿ ಕಂಗಳೆದುರು ಬಂದು ನಿಂತಂತಾಯಿತು.

ಶಾಸ್ತ್ರಿಗಳೂ ಲಕ್ಷಮ್ಮನವರೂ ಪಶ್ಚಿಮ ಸಮುದ್ರ ಸ್ನಾನ ಮಾಡಿ ಅತಿಶಯ ಭಕ್ತಿಯಿಂದ ಶ್ರೀ ಮಹಾಬಲೇಶ್ವರನನ್ನು ಆರಾಧಿಸಿದರು. ಸದಾ ಪುತ್ರ ಭಿಕ್ಷೆಯನ್ನು ಬೇಡುತ್ತಿದ್ದ ಲಕ್ಷಮ್ಮನವರಿಗೆ ಅವರ ಶ್ರದ್ಧೆ ನಂಬಿಕೆಗಳೇ ಮೂರ್ತಿವೆತ್ತಂತೆ ಶ್ರೀ ಮಹಾಬಲೇಶ್ವರನ ದಿವ್ಯ ಕರುಣಾಮೂರ್ತಿ ವರದ ಭರವಸೆಯನ್ನು ಇತ್ತಂತೆ ಭಾಸವಾಯಿತು. ಆಕೆ ಅತ್ಯಂತ ಸಂತೋಷ ಸಂಭ್ರಮದಿಂದ ಸ್ವಾಮಿಯ ಸೇವೆಮಾಡಿದರು, ಆನಂದ ಪರವಶರಾದರು. "ಭಗವಂತನು ಭಕುತರ ಬೆಂಬಳಿಯ ಬಿರುದನಲ್ಲವೇ?"

ಪ್ರಾರಂಭದಿಂದಲೂ ಪತ್ನಿಯ ಚರ್ಯೆಯನ್ನೇ ಗಮನಿಸುತ್ತಿದ್ದ ಶಾಸ್ತ್ರಿಗಳು ಗೋಕರ್ಣದಲ್ಲಿ ಆಕೆಯ ಸಂತೋಷ ಪರಾಕಾಷ್ಠೆಗೆ ತಲುಪಿದ್ದನ್ನು ಕಂಡು ಇನ್ನು ಶೃಂಗೇರಿಗೆ ಹಿಂದಿರುಗಬಹುದೇನೋ ಎಂದು ಮನಸ್ಸಿನಲ್ಲಿಯೇ

---

೨. ಲಕ್ಷ್ಮಮ್ಮನವರು ಶ್ರೀಮಹಾಬಲೇಶ್ವರನಲ್ಲಿ ತಮ್ಮ ಪ್ರಾರ್ಥನೆಯನ್ನು, ಮನಸ್ಸಿನಲ್ಲಿಯೇ ಸಲ್ಲಿಸುತ್ತಿದ್ದಾಗ ಬಿಲ್ವದಳವೊಂದು ಈಶ್ವರಲಿಂಗದಿಂದ ಹಾರಿ ಬಂದು ಆಕೆಯ ವಕ್ಷಸ್ಥಳದಲ್ಲಿ ಬಿದ್ದಿತೆಂದು ಜನಶ್ರುತಿಯಿದೆ.

ಅಂದುಕೊಂಡರು. ಅವರಿಗೆ ಎಲ್ಲೆಡೆಯಲ್ಲೂ ವರ್ಣನಾತೀತವಾದ ತೃಪ್ತಿ, ಶಾಂತಿ ದೊರಕಿತ್ತು. ಇಂದ್ರಿಯಾತೀತವಾದ ಆ ಸುಖವನ್ನು ಕಂಡುಕೊಂಡಿದ್ದರಿಂದಲೇ ಅವರು ಸ್ಥಿತಪ್ರಜ್ಞರಂತೆ ಸುಖಸುಃಖಗಳಲ್ಲಿ, ಹರ್ಷಸಂತೋಷಗಳಲ್ಲಿ, ಚಿಂತೆವ್ಯಸನಗಳಲ್ಲಿ ಸಮಾನವಾದ ದೃಷ್ಟಿಯಿಟ್ಟಿದ್ದರು. ಎಂದರೆ ದುಃಖ ಸಮಯದಲ್ಲಿ ವ್ಯಸನಪಟ್ಟರೂ ಕುಗ್ಗದೇ ಸಮಾಧಾನಕ್ಕೆ ಬರುತ್ತಿದ್ದರು. ಹಾಗೆಯೇ ಹರ್ಷದ ಸಮಯದಲ್ಲಿ – ಇವು ತೀರಾ ವಿರಳವಾಗಿದ್ದವು – ಅತಿಯಾಗಿ ಹಿಗ್ಗದೇ ಅಹಂಕಾರ ವಶವಾಗದಂತೆ ನೋಡಿಕೊಂಡಿದ್ದರು. ಆದರೆ ಈ ತೀರ್ಥಯಾತ್ರೆ ಕೈಗೊಂಡಿದ್ದು ದುಃಖದಿಂದಲೂ, ಮಕ್ಕಳ ಸಾವಿನಿಂದಲೂ ಕೊರಗಿ ಕೊರಗಿ ಜರ್ಜರಿತಳಾಗಿ ಕ್ಷೀಣಿಸಿಹೋಗಿದ್ದ ತಮ್ಮ ಪತ್ನಿಗಾಗಿ. ಆಕೆಯ ಮನಸ್ಸಿನ ಕ್ಷೋಭೆ ಸಂತಾಪಗಳು ನಾಶವಾಗಲೆಂಬ ಉದ್ದೇಶದಿಂದ. ಆ ಉದ್ದೇಶವೀಗ ಸಫಲವಾದಂತೆ ಶಾಸ್ತ್ರಿಗಳಿಗೆ ಗೋಚರಿಸಿತು. ಶಾಸ್ತ್ರಿಗಳು ಹೀಗೆ ಆಲೋಚಿಸುತ್ತಿರುವಾಗಲೇ ಲಕ್ಷ್ಮಮ್ಮನವರು ಬಂದು "ಇನ್ನು ಶೃಂಗೇರಿಗೆ ಹಿಂದಿರುಗೋಣವೇ" ಎಂದು ಉತ್ಸಾಹದಿಂದ ಕೇಳಿದರು.

ತಾವು ಮನಸ್ಸಿನಲ್ಲಿ ಅಂದುಕೊಂಡಂತೆಯೇ ಲಕ್ಷ್ಮಮ್ಮನವರೂ ಸಹ ಶೃಂಗೇರಿಗೆ ಹೊರಡೋಣವೆಂದು ಹೇಳಿದ್ದು ಶಾಸ್ತ್ರಿಗಳಲ್ಲಿ ಆಶ್ಚರ್ಯವನ್ನೂ, ಸಂತೋಷವನ್ನೂ ಉಂಟುಮಾಡಿತು. ತಾವು ಕೇಳದೆಯೇ ಆಕೆ ತಾನಾಗಿ ಹೊರಡೋಣವೆಂದು ಹೇಳಿದ್ದರಲ್ಲಿ ದೈವಪ್ರೇರಣೆ ಇರಬೇಕೆಂದು ಶಾಸ್ತ್ರಿಗಳು ಯೋಚಿಸಿದರು. ಮೊದಲಿನಿಂದಲೂ ದೈವವನ್ನೇ ನಂಬಿದ್ದ ಶಾಸ್ತ್ರಿಗಳು ತಮ್ಮ ನಡೆನುಡಿ ಆಗುಹೋಗು ಎಲ್ಲವನ್ನೂ ದೇವರೇ ರೂಪಿಸಿದ್ದಾನೆಂಬ ದೃಢಭಾವನೆ ಹೊಂದಿದ್ದರು. "ತೇನ ವಿನಾ ತೃಣಮಪಿ ನ ಚಲತಿ, ಅವನ ಆಜ್ಞೆಯಿಲ್ಲದೇ ಒಂದು ಹುಲ್ಲುಕಡ್ಡಿಯೂ ಚಲಿಸಲಾರದು" ಎಂದು ಕಾಯಾ ವಾಚಾ ಮನಸಾ ನಂಬಿದ್ದರು.

ಹೊರಡುವ ಮುನ್ನ ಮತ್ತೊಮ್ಮೆ ಶ್ರೀ ಮಹಾಬಲೇಶ್ವರನ ದರ್ಶನ ಮಾಡಿಕೊಂಡು, ಸತಿಪತಿಯರು ತುಂಬಿದ ಮನಸ್ಸಿನಿಂದ ಉತ್ಸಾಹದಿಂದ ತಮ್ಮ ಸ್ವಸ್ಥಾನಕ್ಕೆ ಪ್ರಯಾಣ ಬೆಳೆಸಿದರು. ಶೃಂಗೇರಿಯಿಂದ ಹೊರಟಾಗ ಇದ್ದ ಎಲ್ಲಾ ಚಿಂತೆಗಳೂ, ಯೋಚನೆಗಳೂ ಕಳೆದಿರಲು ಲಕ್ಷ್ಮಮ್ಮನವರು ಸುಂದರವಾದ ಕಲ್ಪನೆಗಳನ್ನು ತಮ್ಮ ಹೃದಯ ಮನಸ್ಸುಗಳ ತುಂಬಾ ತುಂಬಿಕೊಂಡು ಶೃಂಗೇರಿಯ ಶಾರದಾಂಬೆಯ ಸನ್ನಿಧಿಗೆ ಬಂದರು.

* * *



# ೬. ಮರಳಿ ಶ್ರೀಶಾರದೆಯ ಸನ್ನಿಧಿಗೆ

ಶಾಸ್ತ್ರಿಗಳು ಶೃಂಗೇರಿಗೆ ಇನ್ನು ಮರಳಿ ಬರುವುದಿಲ್ಲವೇನೋ ಎಂದು ಅನುಮಾನಿಸುತ್ತಿದ್ದ ಹಲವರು ನೆರೆಹೊರೆಯವರಿಗೆ ಆ ದಂಪತಿಗಳು ಹಿಂದಿರುಗಿ ಬಂದುದು, ಅದೂ ಹರ್ಷ ಸಂತೋಷದಿಂದ ಬಂದದ್ದು ವಿಸ್ಮಯವನ್ನೂ, ತೃಪ್ತಿ, ಸಂತೋಷಗಳನ್ನೂ ತಂದಿತು. ಪ್ರತಿಯೊಬ್ಬರೂ ಅವರನ್ನು ಕಂಡು ಯೋಗಕ್ಷೇಮ ವಿಚಾರಿಸಿ ತಮ್ಮ ಸಂತೋಷ ಸಮಾಧಾನವನ್ನು ವ್ಯಕ್ತಪಡಿಸುತ್ತಿದ್ದರು. ಅವರ ತೀರ್ಥಯಾತ್ರೆಯ ಅನುಭವವನ್ನೆಲ್ಲಾ ಕುತೂಹಲದಿಂದ ಕೇಳಿ ತಿಳಿದುಕೊಳ್ಳುತ್ತಿದ್ದರು.

ಶಾಸ್ತ್ರಿಗಳ ಮುಖ್ಯವಾಗಿ ಲಕ್ಷ್ಮಮ್ಮನವರ ಚಿಂತೆಯ ದಿನಗಳು ಕಳೆದಂತೆ ಕಂಡವು. ಶೃಂಗೇರಿಗೆ ಮರಳಿ ಶ್ರೀಗುರುವರ್ಯರ ದರ್ಶನ ಪಡೆದಾಗ ಗುರುಗಳು ಆ ದಂಪತಿಗಳಲ್ಲಿ ಅಪೂರ್ವ ತೃಪ್ತಿ, ಸಮಾಧಾನಗಳು ಮೂಡಿರುವುದನ್ನು ಕಂಡು ಸಮಾಧಾನ ಹೊಂದಿದರು. ತಮ್ಮ ಆಂತರ್ಯದಲ್ಲಿದ್ದ ಅಭೀಪ್ಸೆಯನ್ನೇ ಭಗವಂತನು ಕರುಣಿಸುವನೆಂದು ನಂಬಿದ್ದ ಶಾಸ್ತ್ರಿಗಳೂ, ಲಕ್ಷ್ಮಮ್ಮನವರೂ ಗುರುಗಳನ್ನು ಸಂದರ್ಶಿಸಿ ಕೃತಾರ್ಥರಾದರು. ಗುರುಗಳು "ಭಗವಂತನ ಅನುಗ್ರಹ ನಿಮ್ಮಲ್ಲಿ ನೆಲಸಲಿ" ಎಂದು ಆಶೀರ್ವದಿಸಿದ್ದರು.

ತೀರ್ಥಯಾತ್ರೆಯಿಂದ ಹಿಂದಿರುಗಿ ಬಂದ ಮೇಲೆ ಶಾಸ್ತ್ರಿಗಳ ಮನೆ ಕಳೆಗೂಡಲಾರಂಭಿಸಿತು. ಅವರ ಕಷ್ಟದ ದಿನಗಳೂ ಕಳೆಯಲಾರಂಭಿಸಿದವು. ತನುಮನಗಳಲ್ಲಿ ಉತ್ಸಾಹ ಲವಲವಿಕೆಗಳು ಕಾಣಿಸಿಕೊಂಡವು. ಯಾವಾಗಲೂ ವ್ಯಾಕುಲಿತರಾಗಿದ್ದು ಚಿಂತೆಯಿಂದ ಮಂಕಾಗಿದ್ದ ಆ ಲಕ್ಷ್ಮಮ್ಮನವರೆಲ್ಲಿ, ಮಹಾಲಕ್ಷ್ಮಿಯಂತೆ ನಗುನಗುತ್ತಾ ಮನೆಯಲ್ಲೆಲ್ಲಾ ಹಿಗ್ಗು ತುಂಬಿದ್ದ ಈ ಲಕ್ಷ್ಮಮ್ಮನವರೆಲ್ಲಿ?

ಕೆಲದಿನಗಳು ಕಳೆದ ಬಳಿಕ ದಿವ್ಯಸತಿ ಲಕ್ಷ್ಮಮ್ಮನವರಿಗೆ ಮತ್ತೊಮ್ಮೆ ಮಾತೃತ್ವದ ಯೋಗ ಲಭಿಸುವ ಸೂಚನೆಗಳು ಕಂಡುಬಂದವು. ಆ ದಿನಗಳಲ್ಲಿ ಆಕೆಯ ಮನಸ್ಸು ಪ್ರಫುಲ್ಲಿತವಾಗಿತ್ತು. ಅನಿರ್ವಚನೀಯವಾದ ತೃಪ್ತಿಯಿಂದ ಹೃದಯ ತುಂಬಿಬಂದಿತ್ತು. ಯಾವಾಗಲೂ ಸದ್ವಿಚಾರಗಳೇ ಮೂಡುತ್ತಿದ್ದವು. ಸಾಧುಸಂತರ ಜೀವನಚರಿತ್ರೆಗಳನ್ನು ಕೇಳುವ ಇಚ್ಛೆಯುಂಟಾಗುತ್ತಿತ್ತು. ಪೂಜೆ ಪುರಸ್ಕಾರ, ವ್ರತನೇಮಗಳಲ್ಲಿ ಸದಾ ತೊಡಗಿರುವ ಆಸೆಯುಂಟಾಗುತ್ತಿತ್ತು. ಅವರ್ಣನೀಯವಾದ ಸುಖದಲ್ಲಿ ಆಕೆಯ ತನುಮನವೆಲ್ಲವೂ ತೇಲುತ್ತಿತ್ತು.

ಶಾಸ್ತ್ರಿಗಳಿಗೆ ಭಗವದಿಚ್ಛೆಯ ಅರಿವಾಯಿತು. ತೀರ್ಥಯಾತ್ರೆಯ ನೆಪದಲ್ಲಿ ಶ್ರೀಮಹಾಬಲೇಶ್ವರನು ತಮ್ಮನ್ನು ಕರೆಸಿಕೊಂಡುದು ಪುತ್ರಾನುಗ್ರಹ ಮಾಡುವುದಕ್ಕೇ ಎಂಬ ಭಾವನೆ ಮೂಡಿತು. **"ಶ್ರೀಮಹಾಬಲೇಶ್ವರನಿಂದ ಅನುಗ್ರಹಿತವಾದ ಶಿಶುವನ್ನು ಶ್ರೀಶಾರದಾಂಬೆಗೆ ಅರ್ಪಿಸುತ್ತೇನೆ"** ಎಂಬುದಾಗಿ ಮನಸ್ಸಿನಲ್ಲಿಯೇ ಅಂದುಕೊಂಡರು. ಶಾಸ್ತ್ರಿಗಳ ಮನಸ್ಸಿನಲ್ಲಿ ಇಂತಹ ಸಂಕಲ್ಪವನ್ನು ಮೂಡಿಸಿದ ಆ ಭಗವಂತನ ಉದ್ದೇಶವೆಂಥದಿತ್ತು!

ದಂಪತಿಗಳು ಯಾವಾಗಲೂ ಹರ್ಷಸಂತೋಷಚಿತ್ತರಾಗಿದ್ದರು. ಚಿಂತೆ ವ್ಯಸನಗಳು ಅವರನ್ನು ಬಿಟ್ಟೋಡಿದ್ದವು. ಹೃದಯದಲ್ಲಿ ತೃಪ್ತಿ ಸಮಾಧಾನಗಳು ತುಂಬಿ ತುಳುಕುತ್ತಿದ್ದವು. ಕಾಯಾ ವಾಚಾ ಮನಸಾ ಅವರು ಶುದ್ಧರಾಗಿದ್ದು ತಮ್ಮ ವಂಶದಲ್ಲಿ ಮುಂದೆ ಜನಿಸಲಿರುವ ಶಿಶುವಿನ ಸ್ವಾಗತ ಸಿದ್ಧತೆಯಲ್ಲಿದ್ದರು. ಸಂಭ್ರಮ, ಸಂತೋಷದಿಂದ, ಹರ್ಷೋಲ್ಲಾಸಗಳಿಂದ ಕೌತುಕಪೂರ್ಣರಾಗಿ ಆ ಪವಿತ್ರ ದಿನಕ್ಕಾಗಿ ಕಾದಿದ್ದರು.

ಶ್ರೀನಂದನ ಸಂವತ್ಸರ ಆಶ್ವಯುಜ ಬಹುಳ ಏಕಾದಶೀ ರವಿವಾರ, ಶಾಲಿವಾಹನ ಶಕ ೧೮೮೪, ದಿನಾಂಕ ೧೬/೧೦/೧೮೯೨ ರಂದು ಸೂರ್ಯೋದಯಾನಂತರದಲ್ಲಿ ಸೌಭಾಗ್ಯವತಿ ಲಕ್ಷ್ಮಮ್ಮನವರು ಪುತ್ರರತ್ನಕ್ಕೆ ಜನ್ಮವಿತ್ತರು.[೩] ಅಂದಿನವರೆಗೆ ಚಿಂತೆ, ಶೋಕಗಳಿಗೆ, ವ್ಯಾಕುಲಕ್ಕೆ ಭಯಭೀತಿಗೆ ಕಾರಣವಾಗಿದ್ದ ಆ ಗೃಹ ಮಗುವಿನ ಜನನದಿಂದ ಸುಖಸಂತೋಷಕ್ಕೆ ಹರ್ಷೋಲ್ಲಾಸಗಳಿಗೆ ಆಗರವಾಯಿತು. ತನ್ನ ಮಾತಾಪಿತರ ವಂಶವನ್ನು ಪಾವನಗೊಳಿಸುವವನೂ, ತನ್ನ ನಡೆನುಡಿಯಿಂದ ಎಲ್ಲರಿಗೂ ಮಾರ್ಗದರ್ಶಿಯಾಗುವವನೂ, ತನ್ನ ಅಮೃತವಾಣಿಯಿಂದ ಎಲ್ಲರನ್ನೂ ಸನ್ಮಾರ್ಗಕ್ಕೆ ತರುವವನೂ, ಲೋಕ ಹಿತಚಿಂತಕನೂ, ಜ್ಞಾನಿಯೂ, ಪರಮವಿರಾಗಿಯೂ ಶ್ರೀಶಂಕರರೂಪಿಯೂ ಆದ ಪುತ್ರರತ್ನನು ಕತ್ತಲು ತುಂಬಿದ್ದ ಮಾತೃಹೃದಯದಲ್ಲಿ ಚಂದ್ರನಂತೆ ಬೆಳಗಿದನು.

ಶ್ರೀಮಹಾಬಲೇಶ್ವರನ ಅನುಗ್ರಹದಿಂದ ಜನಿಸಿದ ಆ ಪುತ್ರನನ್ನು ಶ್ರೀಶಾರದೆಯ ಸೇವೆಗೇ ಒಪ್ಪಿಸುವುದಾಗಿ ಆ ತಂದೆ ತಾಯಿಯರು ಹರಸಿಕೊಂಡರು. ಆ ಮಗುವಿನ ಲಾಲನೆ ಪಾಲನೆ ರಕ್ಷಣೆ ಎಲ್ಲವೂ ಶ್ರೀಶಾರದಾಂಬೆಯ ಹೊಣೆಯಾಯಿತಲ್ಲವೇ? ಆ ಜಗನ್ಮಾತೆಯ ಆಣತಿಯಂತೆ ತಾವು ಕೇವಲ ಮಗುವನ್ನು ನೋಡಿಕೊಳ್ಳುವವರು, ದಾದಿಯ ಕೆಲಸದಂತೆ ತಮ್ಮದು

೩ ಈ ಶಿಶುಜನನವಾದುದು ಸೌ। ಲಕ್ಷ್ಮಮ್ಮನವರ ತೌರುಮನೆಯ ದನದ ಕೊಟ್ಟಿಗೆಯಲ್ಲಿ ಎಂದು ಆ ವಂಶೀಕರು ನನಗೆ ತಿಳಿಸಿದ್ದಾರೆ. ತೌರೂರು ಹಾಸನ ಜಿಲ್ಲೆಯ ಸಕಲೇಶಪುರ.



ನಿಷ್ಕಾಮಕರ್ಮ. ಆ ಭಾವನೆಯಿಂದಲೇ ಜಗನ್ಮಾತೆ ತಮ್ಮಲ್ಲಿ ಬಿಟ್ಟ ನಿಧಿ ಎಂಬ ನಂಬಿಕೆಯಿಂದಲೇ, ಆ ನಿಧಿಯನ್ನು ಜೋಪಾನ ಪಡಿಸುವಂತೆಯೇ ಅತ್ಯಂತ ಶ್ರದ್ಧೆಯಿಂದಲೂ, ಎಚ್ಚರಿಕೆಯಿಂದಲೂ ಅವರು ಮಗುವನ್ನು ನೋಡಿಕೊಂಡರು. ಹನ್ನೊಂದನೆಯ ದಿನ ಜಾತಕರ್ಮ, ನಾಮಕರಣಾದಿಗಳನ್ನು ನೆರವೇರಿಸಿ **"ಶ್ರೀ ನರಸಿಂಹ"** ಎಂಬ ಹೆಸರಿನಿಂದ ಕರೆದರು.

ತಮಗೆ ಪುತ್ರೋತ್ಸವವಾದುದನ್ನು ಶಾಸ್ತ್ರಿಗಳು ಗುರುಗಳಲ್ಲಿ ನಿವೇದಿಸಿಕೊಂಡು ಮಗುವಿಗೆ ತಮ್ಮ ಕುಲದೇವರಾದ ಶ್ರೀನೃಸಿಂಹಸ್ವಾಮಿಯ ಹೆಸರನ್ನೇ ಇಟ್ಟಿರುವುದಾಗಿ ನಿವೇದಿಸಿಕೊಂಡರು. ಶಾಸ್ತ್ರಿಗಳ ಕಷ್ಟಪರಂಪರೆಗಳೆಲ್ಲಾ ಕಳೆದು ಅವರಿಗೆ ಸುಖ ಸಂತೋಷಗಳು ಲಭ್ಯವಾಗುತ್ತಿರುವುದನ್ನು ಅರಿತು, ತಾವೂ ಸಹ ಆ ವಿಷಯದಲ್ಲಿ ಸಂತೋಷಿತರಾಗಿ ಗುರುವರ್ಯರು ಶಾಸ್ತ್ರಿಗಳನ್ನು ಹೃತ್ಪೂರ್ವಕವಾಗಿ ಆಶೀರ್ವದಿಸಿದುದಲ್ಲದೇ ಶಿಶು ನರಸಿಂಹನನ್ನೂ ಆಶೀರ್ವದಿಸಿದರು. ಅಂದಿನಿಂದಲೇ ಪ್ರಾರಂಭವಾಯಿತು ಶ್ರೀಗುರುಕೃಪೆ ನರಸಿಂಹನ ಮೇಲೆ.

* * *

# ೭. ಬಾಲ ನರಸಿಂಹ

ಶಾಸ್ತ್ರಿಗಳು ತಮ್ಮ ಮಗನಿಗೆ ನರಸಿಂಹನೆಂದು ನಾಮಕರಣ ಮಾಡಿದ್ದರಲ್ಲಿ ದೈವಸಂಕಲ್ಪವೂ ಇತ್ತೆಂದು ತೋರುತ್ತದೆ. ಶ್ರೀನೃಸಿಂಹನ ಮುಖವು ಆತ್ಮನನ್ನೂ, ದೇಹವು ಜೀವನನ್ನೂ ಪ್ರತಿನಿಧಿಸುತ್ತದೆ. ಸಿಂಹ ಮತ್ತು ನರರೂಪವು ಪರಮಾತ್ಮ ಮತ್ತು ಜೀವರು ಒಂದೇ, ಬೇರೆಬೇರೆಯಲ್ಲ ಎಂಬ ಅಂಶವನ್ನು ದೃಢೀಕರಿಸುತ್ತದೆ. ವಿದ್ವಾಂಸರು ಶ್ರೀನೃಸಿಂಹನ ರೂಪವನ್ನು ವಿರಾಟ್ ಪುರುಷನ ಸಂಕರ್ಷಣ ರೂಪವೆಂದು ಕರೆಯುತ್ತಾರೆ. ಎಂದರೆ ತನ್ನಲ್ಲಿಯೇ ಐಕ್ಯ ಮಾಡಿಕೊಳ್ಳುವ, ಲೀನವಾಗಿಸಿಕೊಳ್ಳುವ ಶಕ್ತಿಯುಳ್ಳದ್ದೆಂದು ಅರ್ಥ. ಶ್ರೀನೃಸಿಂಹನು ಕಷ್ಟ, ಸಂಕಷ್ಟಗಳಲ್ಲಿ ಇರುವವರನ್ನು, ಭಯಭೀತಿಗಳಿಂದ ಬೆದರಿರುವವರನ್ನೂ ಉದ್ಧರಿಸಿ ಪಾರುಗಾಣಿಸಿ ರಕ್ಷಿಸುವವನೆಂದು ಹೇಳಬಹುದು.

ಮುಂದೆ ಶ್ರೀಚಂದ್ರಶೇಖರ ಭಾರತೀ ಎಂದು ಪ್ರಸಿದ್ಧರಾದ ಶ್ರೀ ನರಸಿಂಹಶಾಸ್ತ್ರಿಗಳಿಗೆ ಈ ಹೆಸರು ಅನ್ವರ್ಥವಾಗಿಯೇ ಇತ್ತು. ಜೀವ ಪರಮಾತ್ಮರ ಏಕತೆಯ ಪ್ರತೀಕವಾಗಿ ಅವರು ಬೆಳಗಿದರು. ಶ್ರೀನೃಸಿಂಹ ಸ್ವಾಮಿಯ ಆಕರ್ಷಣ ಶಕ್ತಿ ಮತ್ತು ಉದ್ಧಾರಕ ಶಕ್ತಿಯೂ ಅವರಲ್ಲಿ ಅಡಗಿತ್ತು. ತಮ್ಮಲ್ಲಿ ಬಂದವರನ್ನು ಹಸನ್ಮುಖದಿಂದ ಸ್ವಾಗತಿಸಿ ಅವರ ಕಷ್ಟಗಳನ್ನು ಪರಿಹರಿಸಲು ಮಾರ್ಗತೋರಿ, ಆಧ್ಯಾತ್ಮಿಕ ಅನುಮಾನಗಳನ್ನು ತಮ್ಮ ಸರಳವಾದ ನುಡಿಗಳಿಂದಲೇ ಪರಿಹರಿಸಿ ಸತ್ಯವನ್ನೂ ಧರ್ಮವನ್ನೂ ಆಚರಿಸುವಂತೆ ಪ್ರಚೋದಿಸುತ್ತಿದ್ದರು. ಹೀಗೆ ಅವರ ಪೂರ್ವಾಶ್ರಮದ ಹೆಸರೂ ಔಚಿತ್ಯಪೂರ್ಣವಾಗಿಯೇ ಇತ್ತು.

ದೇವರ ನಿಧಿಯಂತೆ ಮಗುವನ್ನು ಕಾಪಾಡುತ್ತಾ ಬಂದರು ಆ ದಂಪತಿಗಳು. ಕತ್ತಲ ಮನೆಗೆ ಬೆಳಕು ಹೊಕ್ಕಂತಾಯಿತು. ಮೂಕನಿಗೆ ಮಾತು ಬಂದಂತಾಯಿತು. ಬಹಳ ದಿನಗಳ ಕಷ್ಟ, ನಷ್ಟ, ದುಃಖ,ವ್ಯಸನಗಳ ನಂತರ ಒದಗಿದ್ದ ಈ ಸಂತೋಷ ಅಮೂಲ್ಯವಾದುದಲ್ಲವೇ? ಮಗುವಿನ ಅಂದಚೆಂದ, ಆಟ, ಪಾಠಗಳನ್ನು ಕಂಡು ಉಂಟಾದ ಹಿಗ್ಗಿಗೆ ಪಾರವುಂಟೇ? ಬಾಲಚಂದ್ರನಂತೆ ಬೆಳೆದ ನರಸಿಂಹ, ತಂದೆತಾಯಿಗಳಿಗೆ, ಬಂಧುಮಿತ್ರರಿಗೆ, ನೆರೆಹೊರೆಯವರಿಗೆ ಎಲ್ಲರಿಗೂ ಅಚ್ಚುಮೆಚ್ಚಾದ.

ಅನೇಕ ಮಕ್ಕಳು ಗತಿಸಿ ಕಟ್ಟಕಡೆಗೆ ಹುಟ್ಟಿದ ಮಗುವೆಂದು ಬಹಳ ಅಕ್ಕರೆಯಿಂದ ಸಾಕಿದರೂ ಮಗುವನ್ನು ಅತಿ ಮುದ್ದು ಮಾಡಲಿಲ್ಲ ಆ



ದಂಪತಿಗಳು. ಲಾಲನೆಪಾಲನೆಯಲ್ಲಿ ಅತ್ಯಂತ ವಿಶ್ವಾಸ ಪ್ರೀತಿಯಿಂದ ನೋಡಿಕೊಂಡರೂ ಸಹ ಮಗುವು ಎಲ್ಲಕ್ಕೂ ತಮ್ಮನ್ನೇ ಅವಲಂಬಿಸುವಂತೆ ಮಾಡಲಿಲ್ಲ. ಬಾಲಕನ ಎಲ್ಲಾ ಅಪೇಕ್ಷೆಗಳನ್ನು ಪೂರೈಸಿದರೂ ಅವನು ಹಠ ಹಿಡಿಯುವುದಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಸದಾ ಮಗುವಿನ ಚಲನವಲನ ಗಳಲ್ಲಿಯೇ ದೃಷ್ಟಿ ಇಟ್ಟಿದ್ದರೂ ಅದು ಸ್ವತಂತ್ರವಾಗಿಯೂ, ಸ್ವಚ್ಛಂದವಾಗಿಯೂ ಬೆಳೆಯುವ ಅವಕಾಶ ಕಲ್ಪಿಸಿದ್ದರು. ಮಠದ ಕಾರ್ಯಭಾರಿ ಶ್ರೀಕಂಠಶಾಸ್ತ್ರಿಗಳ ಮನೆಯವರಿಗೂ ಈ ಬಾಲಕ ಅಚ್ಚುಮೆಚ್ಚಾದನು.

ಸಣ್ಣ ವಯಸ್ಸಿನಲ್ಲಿಯೇ ಎಲ್ಲವನ್ನೂ ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದ ಆ ಮಗುವು ತನ್ನ ತಂದೆತಾಯಿಯಂತೆಯೇ ಪೂಜೆ ಮಾಡುವುದೂ, ಸ್ತೋತ್ರ ಹಾಡುವುದೂ ತಂದೆ ಆಹ್ನೀಕಕ್ಕೆ ಕುಳಿತಾಗ ತಾನೂ ಕಣ್ಮುಚ್ಚಿ ಪಕ್ಕದಲ್ಲಿ ಕುಳಿತುಕೊಳ್ಳುವುದು, ಅವರು ಸ್ನಾನಕ್ಕೆಂದು ನದಿಗೆ ಹೋದರೆ ತಾನೂ ನದಿಗೆ ಹೋಗುವುದು ಹೀಗೆ ತಂದೆತಾಯಿಯರ ಪ್ರತಿಕಾರ್ಯದಲ್ಲಿಯೂ ಅವರನ್ನು ಅನುಸರಿಸುತ್ತ ಬೆಳೆಯಿತು. ಶಾಸ್ತ್ರಿಗಳೂ ಅಷ್ಟೇ, ಮಗು ಬೆಳೆದಂತೆಲ್ಲಾ ಅದರ ನಡೆನುಡಿಗಳನ್ನು ಉಪಾಯವಾಗಿ ತಿದ್ದಿ ರೂಪಿಸುತ್ತಿದ್ದರು.

ಮಗು ಬೆಳೆದು ಬಾಲಕನಾದ. ಸಣ್ಣಪುಟ್ಟ ಕೆಲಸಗಳನ್ನು ತಾನೇ ಮಾಡತೊಡಗಿದ. ದೇವರ ಪೂಜೆಗೆ ಹೂ ಪತ್ರೆಗಳನ್ನು ತರುವುದು ಅವನ ನಿತ್ಯ ಕೆಲಸವಾಯಿತು. ತಂದೆ ಪೂಜೆಗೆ ಕುಳಿತಾಗ ತಾನೂ ಅವರ ಬಳಿ ಕುಳಿತು ಅವರು ಮಾಡುವ ತಂತ್ರಗಳನ್ನು ಅವಲೋಕಿಸುವುದು, ಅಂಗನ್ಯಾಸ, ಕರನ್ಯಾಸಗಳನ್ನು ತದೇಕ ದೃಷ್ಟಿಯಿಂದ ನೋಡುವುದು, ಮಂತ್ರಗಳನ್ನು ತಲ್ಲೀನನಾಗಿ ಕೇಳುವುದು ನಿತ್ಯದ ಪರಿಪಾಠವಾಯಿತು. ತಂದೆಯವರೊಡನೆ ಮಠಕ್ಕೂ ದೇವಸ್ಥಾನಕ್ಕೂ ಹೋಗುವುದು, ಗುರುದರ್ಶನ, ದೇವರದರ್ಶನ ಮಾಡಿದಾಗ ಯಾರಿಂದಲೂ ಹೇಳಿಸಿಕೊಳ್ಳದೇ ತಾನಾಗಿಯೇ ಸಾಷ್ಟಾಂಗ ಪ್ರಣಾಮ ಮಾಡುವುದು, ಸ್ತೋತ್ರಗಳನ್ನು ಹೇಳಿಕೊಂಡು ತನ್ಮಯನಾಗುವುದು ಬಾಲಕ ನರಸಿಂಹನಿಗೆ ರೂಢಿಯಾದವು.

ಐದನೆಯ ವಯಸ್ಸಿನಲ್ಲಿ ಚೌಲವೂ, ಅಕ್ಷರಾಭ್ಯಾಸವೂ ನಡೆದುವು. ಮನೆಯಲ್ಲಿಯೇ ಅಮರವನ್ನೂ, ಶಬ್ದವನ್ನೂ ಹೇಳಿಸುವುದು ಆರಂಭವಾಯಿತು. ಮೊದಲಿನಿಂದಲೂ ಸಂಸ್ಕೃತ ಶ್ಲೋಕಗಳನ್ನು ಬೇಗ ಬೇಗ ಕಲಿಯುತ್ತಿದ್ದ ಬಾಲಕನು ಅಮರವನ್ನೂ, ಶಬ್ದಗಳನ್ನೂ ಶೀಘ್ರವಾಗಿ ಕಲಿತನು. ಶಾಲೆಯಲ್ಲಿಯೂ ಅಷ್ಟೇ, ಉಪಾಧ್ಯಾಯರಿಗೆ ಸೌಮ್ಯ ಮತ್ತು ಗಂಭೀರ ಸ್ವಭಾವದ ಈ ಬಾಲಕನ ತೀಕ್ಷ್ಣಮತಿ, ವಿದ್ಯಾಭ್ಯಾಸದಲ್ಲಿ ಅವನು ತೋರುತ್ತಿದ್ದ ಆಸಕ್ತಿ, ಅವನ ಚಟುವಟಿಕೆ

ಎಲ್ಲವೂ ಅತ್ಯಂತ ಮೆಚ್ಚುಗೆಯಾಗಿದ್ದವು. ಇತರ ಬಾಲಕರಿಗಿಂತ ಮುಂದಿದ್ದ ನರಸಿಂಹನನ್ನು ಉಪಾಧ್ಯಾಯರುಗಳೆಲ್ಲ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು. ತಾವು ಪಾಠವನ್ನು ಹೇಳುವ ಮುನ್ನವೇ ಗ್ರಹಿಸುವ ಅವನ ಬುದ್ಧಿಶಕ್ತಿಯನ್ನು ಪ್ರಶಂಸಿಸುತ್ತಿದ್ದರು.

ಹೀಗೆ ಬಾಲಕ ನರಸಿಂಹನಿಗೆ ಮನೆಯಲ್ಲಿ ಸಂಸ್ಕೃತ ವಿದ್ಯಾಭ್ಯಾಸ ಪ್ರಾರಂಭವಾಗಿದ್ದುದಲ್ಲದೇ ಶಾಲೆಯಲ್ಲಿ ಕನ್ನಡ, ಇಂಗ್ಲಿಷ್ ವಿದ್ಯಾಭ್ಯಾಸ ಮುಂದುವರೆಯುತ್ತಿತ್ತು. ಬಾಲಕನು ಇಕ್ಕೆಡೆಗಳಲ್ಲಿಯೂ ಹಂತಹಂತವಾಗಿ ಪ್ರಗತಿ ಪಥವನ್ನು ಏರುತ್ತಿದ್ದನು.

ಶ್ರೀಶಾರದಾಂಬಾ ದರ್ಶನ, ಶ್ರೀಗುರು ದರ್ಶನ ಇವು ಶಾಸ್ತ್ರಿಗಳ ನಿತ್ಯ ನಿಯಮವಾಗಿತ್ತು ಅಲ್ಲವೇ? ಅದೇ ಅಭ್ಯಾಸವು ಬಾಲಕ ನರಸಿಂಹನಿಗೂ ಆಗಿತ್ತು. ತಮ್ಮ ದರ್ಶಕ್ಕಾಗಿ ಬರುವ ಆ ಬಾಲಕನಲ್ಲಿ ಯಾವುದೋ ಅಪೂರ್ವ ಶಕ್ತಿ ಇರುವುದನ್ನು ಶ್ರೀನೃಸಿಂಹ ಭಾರತೀ ಸ್ವಾಮಿಗಳವರು ಕಂಡಿದ್ದರು. ಮೊದಲೇ ಮಕ್ಕಳನ್ನು ವಿಶೇಷ ಮಮತೆಯಿಂದ ಕಾಣುತ್ತಿದ್ದ ಗುರುಗಳು, ಈ ಬಾಲಕನಲ್ಲಿ ಇನ್ನೂ ಹೆಚ್ಚಿನ ಆಸಕ್ತಿಯನ್ನು ತಳೆದರು. ಅವನು ಅಂಜಲೀಬದ್ಧನಾಗಿ ನಿಶ್ಚಲನಾಗಿ ಕಣ್ಮುಚ್ಚಿ ಶ್ರೀಶಾರದಾದೇವಿಯೆದುರು ಧ್ಯಾನಮಗ್ನನಾಗಿ ನಿಂತಾಗ ಅವನಲ್ಲಿ ಸೂಸುತ್ತಿದ್ದ ಅಲೌಕಿಕ ತೇಜಸ್ಸನ್ನು ಗುರುಗಳು ಗುರುತಿಸಿದ್ದರು. ಒಂದು ದಿನವಾದರೂ ಆ ಬಾಲಕನನ್ನು ಕಾಣದಿದ್ದರೆ ಅವರ ಮನಸ್ಸು ಸಮಾಧಾನವಾಗಿರದೆ "ಇಂದೇಕೆ ನರಸಿಂಹನು ಬರಲಿಲ್ಲ"? ಎಂದುಕೊಳ್ಳುವಂತಾಯಿತು.

ನರಸಿಂಹನ ಅಭ್ಯುದಯದಲ್ಲಿ ಮಹತ್ತರವಾದ ಆಶೋತ್ತರಗಳನ್ನು ಹೊಂದಿದ್ದ ಗುರುವರ್ಯರು ಶ್ರೀಜಗದಂಬೆಯನ್ನು ಕುರಿತು **"ಸರ್ವಜ್ಞಂ ಶ್ರೀ ನೃಸಿಂಹಂ ಕುರು ಶಿವದಯಿತೇ ಸತ್ವರಂ ಮದ್ವಿನಮ್ರಂ"**ಎಂದು ಪ್ರಾರ್ಥಿಸುತ್ತಿದ್ದರು. ತಮ್ಮ ನಂತರ ವ್ಯಾಖ್ಯಾನ ಪೀಠಕ್ಕೆ ಯೋಗ್ಯರಾದವರನ್ನು ಶ್ರೀಗುರುವರ್ಯರು ನರಸಿಂಹನಲ್ಲಿ ಕಂಡಿದ್ದರೆಂಬುದಕ್ಕೆ ಇದಕ್ಕಿಂತ ಬೇರೆ ನಿದರ್ಶನ ಬೇಕೆ?

ಎಂಟನೆಯ ವಯಸ್ಸಿನಲ್ಲಿ ಉಪನೀತನಾಗಿದ್ದ ನರಸಿಂಹನು ತನ್ನ ದೈನಂದಿನ ಕಾರ್ಯಗಳೊಡನೆ ತ್ರಿಕಾಲ ಸಂಧ್ಯಾವಂದನೆ, ಅಗ್ನಿಕಾರ್ಯಗಳನ್ನೂ ಬಿಡದೆ ನಡೆಸುತ್ತಿದ್ದನು. ಮುಂದೆ ವೇದಪಾಠಶಾಲೆಯನ್ನು ಸೇರಿದ ನರಸಿಂಹನು ಇತ್ತ ಆಂಗ್ಲ ವಿದ್ಯಾಭ್ಯಾಸವಾಗುತ್ತಿದ್ದ ಮಧ್ಯಮ ಶಾಲೆಯಲ್ಲಿಯೂ, ಸದ್ವಿದ್ಯಾ ಸಂಜೀವಿನೀ ಪಾಠಶಾಲೆಯಲ್ಲಿಯೂ ತನ್ನ ಉಪಾಧ್ಯಾಯರುಗಳಿಗೆ ಅಚ್ಚುಮೆಚ್ಚಾದನು. ಎರಡು ಶಾಲೆಗಳಲ್ಲಿಯೂ ನಡೆಯುತ್ತಿದ್ದ ಪರೀಕ್ಷೆಗಳಲ್ಲಿ



ಮೊದಲನೆಯವನಾಗಿ ತೇರ್ಗಡೆ ಹೊಂದುತ್ತಿದ್ದನು. ಬಾಲಕನ ಸೂಕ್ಷ್ಮಬುದ್ಧಿ, ಗ್ರಹಣಶಕ್ತಿ, ಏಕಾಗ್ರತೆ, ವಿದ್ಯೆಯಲ್ಲಿನ ಆಸಕ್ತಿ ಮತ್ತು ಶ್ರದ್ಧೆ, ಉಪಾಧ್ಯಾಯರುಗಳಲ್ಲಿ ಭಕ್ತಿ, ಗೌರವ ಇವೆಲ್ಲವೂ ಇತರರಿಗೆ ಆದರ್ಶವಾದುವು. ಆಂಗ್ಲಶಾಲೆಯಲ್ಲಿಯೂ ಸಂಸ್ಕೃತ ಪಾಠಶಾಲೆಯಲ್ಲಿಯೂ ಉಪಾಧ್ಯಾಯರು ತಾವು ಕಲಿಸುತ್ತಿದ್ದ ಪಾಠಪ್ರವಚನಕ್ಕೆ ಈ ಬಾಲಕನಲ್ಲಿ ಸಾರ್ಥಕತೆಯನ್ನು ಕಂಡರು.

* * *

# ೮. ಸಂಸ್ಕೃತ ಪಾಠಶಾಲೆಯಲ್ಲಿ

ಮಧ್ಯಮ ಶಾಲೆಯ ಪರೀಕ್ಷೆಯನ್ನು ಉಚ್ಚ ಶ್ರೇಣಿಯಲ್ಲಿ ತೇರ್ಗಡೆ ಹೊಂದಿದ ನರಸಿಂಹ ತನ್ನ ಉಪಾಧ್ಯಾಯರಿಗೂ, ತಾಯ್ತಂದೆಯರಿಗೂ ಹರ್ಷಸಂತೋಷವನ್ನು ತಂದನು. ಇದರೊಡನೆಯೇ ತಾಯಿ ಲಕ್ಷ್ಮಮ್ಮನವರು ತಮ್ಮ ಕನಸಿನ ಕಲ್ಪನೆಗಳನ್ನು ಕಾಣಲಾರಂಭಿಸಿದರು.

ತಮ್ಮ ಮಗ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣನಾಗಿದ್ದುದರಿಂದ ಅವನನ್ನು ಮುಂದೆ ಇಂಗ್ಲಿಷ್ ವಿದ್ಯಾಭ್ಯಾಸದಲ್ಲಿ ತೊಡಗಿಸಬೇಕೆಂದು ಅವರು ಅಭಿಪ್ರಾಯವಿಟ್ಟುಕೊಂಡಿದ್ದರು. ಆ ದಿನಗಳಲ್ಲಿ ಅಲ್ಪಸ್ವಲ್ಪ ಇಂಗ್ಲಿಷ್ ಕಲಿತವರೂ ಸಹ ಉನ್ನತ ಹುದ್ದೆಗಳಿಗೆ ಏರಬಹುದಿತ್ತು. ಅಧಿಕಾರಕ್ಕೂ, ಅದರಿಂದ ಬಂದ ಪದವಿಗೂ ಆ ದಿನಗಳಲ್ಲಿ ಬಹಳ ಗೌರವವಿತ್ತು. ಸರ್ಕಾರದ ಅಧಿಕಾರಿಯೆಂದರೆ ಅತ್ಯಂತ ನಮ್ರತೆ, ಮರ್ಯಾದೆಗಳಿಂದ ಕಾಣುತ್ತಿದ್ದ ಕಾಲವದು. ತಮ್ಮ ಮಗ ಇಂಗ್ಲಿಷ್ ವಿದ್ಯಾಭ್ಯಾಸ ಮುಂದುವರೆಸಿ, ತುಂಬಾ ಕಲಿತು ಸರ್ಕಾರದ ನೌಕರಿಗೆ ಸೇರಿ ದೊಡ್ಡ ಪದವಿಯನ್ನೂ, ಅಧಿಕಾರವನ್ನೂ ಗಳಿಸಬೇಕೆಂಬ ಅಭಿಲಾಷೆ ಲಕ್ಷ್ಮಮ್ಮನವರದ್ದು.

ಈ ವಿಷಯ ಕುರಿತು ಆಕೆ ಪತಿಯೊಡನೆ ಅನೇಕಬಾರಿ ಚರ್ಚಿಸಿದ್ದೂ ಉಂಟು. ಆಂಗ್ಲ ವಿದ್ಯಾಭ್ಯಾಸದಿಂದ ಅತ್ಯಂತ ದೊಡ್ಡ ಹುದ್ದೆಗೆ ಬಂದವರ ನಿದರ್ಶನಗಳನ್ನು ಕೊಟ್ಟದ್ದೂ ಉಂಟು. ನೆರೆಯಲ್ಲಿದ್ದ ಆಕೆಯ ಕೆಲ ಸ್ನೇಹಿತೆಯರು ಅವರ ಈ ಅಭಿಪ್ರಾಯವನ್ನು ನಾನಾವಿಧವಾಗಿ ಪ್ರೋತ್ಸಾಹಿಸಿ, ಇಷ್ಟು ಬುದ್ಧಿವಂತನಾದ ಮಗನನ್ನು ದೊಡ್ಡ ಅಧಿಕಾರಿಯನ್ನಾಗಿ ಮಾಡಲು ಆಂಗ್ಲ ವಿದ್ಯೆಯೇ ಸರಿಯೆಂದು ಇತ್ಯರ್ಥ ಮಾಡಿದ್ದೂ ಉಂಟು. ಯಾರು ಏನೇ ಹೇಳಲಿ, ಏನನ್ನೇ ಚರ್ಚಿಸಲಿ, ಶಾಸ್ತ್ರಿಗಳು ಸಮಾಧಾನವಾಗಿ ಕೇಳುವವರೇ ವಿನಾ ತಮ್ಮ ತೀರ್ಮಾನವೇನೆಂದು ಹೇಳಿದ್ದು ಮಾತ್ರ ಇಲ್ಲ.

ಅದಕ್ಕೆ ಸರಿಯಾಗಿ ಮಾಧ್ಯಮಿಕ ಶಾಲೆಯ ಉಪಾಧ್ಯಾಯರು ಮತ್ತು ಸ್ನೇಹಿತರೂ, ಬಾಲಕನ ಲೌಕಿಕ ಜೀವನದ ಪ್ರಗತಿಯಲ್ಲಿ ಹೆಚ್ಚು ಆಸಕ್ತಿಯನ್ನು ಹೊಂದಿದ್ದಂತಹ ಕೆಲವು ಜನರೂ ಶಾಸ್ತ್ರಿಗಳಲ್ಲಿ ಇದೇ ವಿಷಯ ಪ್ರಸ್ತಾಪ ಮಾಡಿದರು. ಬಾಲಕನನ್ನು ಬೆಂಗಳೂರಿಗೆ ಕಳುಹಿಸಿ ಹೈಸ್ಕೂಲು, ಕಾಲೇಜು ವಿದ್ಯಾಭ್ಯಾಸ ಕೊಡಿಸುವಂತೆ ಒತ್ತಾಯ ಮಾಡಿದರು. ಸಹಾಯ, ಸಲಕರಣೆ, ಸಂಪತ್ತಿಯ ಬಗ್ಗೆ ವಿಪುಲವಾದ ಸೂಚನೆಗಳನ್ನೂ ಕೊಟ್ಟರು.



ಶಾಸ್ತ್ರಿಗಳು ಶೀಘ್ರದಲ್ಲಿ ಅಥವಾ ಆತುರದಲ್ಲಿ ಯಾವ ನಿರ್ಧಾರಕ್ಕೂ ಬರಲಿಲ್ಲ. ಹೆಂಡತಿಯ ಬಲವಂತ, ಸ್ನೇಹಿತರ ಒತ್ತಾಯ ಇವಾವುವೂ ಅವರ ಮನಸ್ಸಿನ ಮೇಲೆ ಹೆಚ್ಚಿನ ಪರಿಣಾಮ ಬೀರಲಿಲ್ಲ. ಮೊದಲಿನಿಂದಲೂ ದೈವವನ್ನು ನೆಚ್ಚಿ ಭಗವತ್ಪ್ರೇರಣೆಯಂತೆ ನಡೆದು ಬಂದವರು ಶಾಸ್ತ್ರಿಗಳು. ಬಾಲಕನನ್ನು ಶ್ರೀಶಾರದಾಂಬೆಯ ನಿಧಿಯಂತೆ ಪೋಷಿಸಿಕೊಂಡು ಬಂದವರು. ಆ ಬಾಲಕನ ರಕ್ಷಣೆಯೂ, ಅಭ್ಯುದಯವೂ ಎಲ್ಲಾ ಜಗದಂಬಿಕೆಗೇ ಸೇರಿದ್ದು ಎಂಬ ದೃಢ ಭಾವನೆಯನ್ನು ಹೊಂದಿದ್ದರು. ಆ ದೈವವೇ ಮುಂದಿನ ದಾರಿಯನ್ನು ಸೂಚಿಸುವುದೆಂದು ನಂಬಿದ್ದರು.

ಎಂದಿನಂತೆ ತುಂಗಾತೀರದಲ್ಲಿ ಸಂಧ್ಯಾವಂದನೆಗೈದು ಶಾಸ್ತ್ರಿಗಳು ನಿಧಾನವಾಗಿ ನರಸಿಂಹವನದತ್ತ ಗುರುದರ್ಶನಕ್ಕಾಗಿ ನಡೆದರು. ಶಾಸ್ತ್ರಿಗಳನ್ನು ಕಂಡ ಗುರುಗಳು ಮಂದಹಾಸದಿಂದ ಅವರ ನಮಸ್ಕಾರಗಳನ್ನು ಸ್ವೀಕರಿಸಿದರು. ಗುರುಗಳ ಮುಗುಳ್ನಗೆ ಶಾಸ್ತ್ರಿಗಳಿಗೆ ಶುಭಶಕುನವಾಯಿತು. ಮನಸ್ಸಿನಲ್ಲಿ ತಾವು ಕೈಗೊಂಡಿದ್ದ ನಿರ್ಧಾರವೇ ಸರಿಯಾದುದೆಂಬ ಭಾವನೆ ಸ್ಫುರಿಸಿತು. ಹರ್ಷಚಿತ್ತದಿಂದ ಪ್ರಫುಲ್ಲಿತವಾದ ಶಾಸ್ತ್ರಿಗಳ ಮುಖವನ್ನು ಕಂಡ ಗುರುಗಳು "ಶಾಸ್ತ್ರಿಗಳೇ, ಮಗನ ವಿದ್ಯಾಭ್ಯಾಸ ಕುರಿತು ತೀರ್ಮಾನಕ್ಕೆ ಬಂದಂತಿದೆ ಅಲ್ಲವೇ?" ಎಂದರು. ಶಾಸ್ತ್ರಿಗಳಿಗೆ ವಿಸ್ಮಯವಾಯಿತು. ತಮ್ಮ ಮನದಲ್ಲಾದ ನಿರ್ಧಾರ ಗುರುಗಳಿಗೆಂತು ತಿಳಿಯಿತು? ಒಡನೆಯೇ ನಿವೇದಿಸಿದರು. "ಸನ್ನಿಧಾನದಲ್ಲಿ ಆ ವಿಷಯ ಅರಿಕೆ ಮಾಡಲೆಂದೇ ನಾನು ಬಂದುದು. ಆದರೆ ತಮ್ಮ ದರ್ಶನವಾದೊಡನೆಯೇ ನನ್ನ ಮನಸ್ಸು ನಿರ್ಧಾರಕ್ಕೆ ಬಂದುಬಿಟ್ಟಿತು. ತಮ್ಮ ಅನುಗ್ರಹವಿದೆಯೆಂಬ ನಂಬಿಕೆ ಮೂಡಿ ಸಂತೋಷವಾಯಿತು." ಎಂದರು. "ಹೌದು, ನಿಮ್ಮ ನರಸಿಂಹನಿಗೆ ಆಂಗ್ಲ ವಿದ್ಯಾಭ್ಯಾಸ ಬೇಡ. ಅವನ ಮಾರ್ಗ ಬೇರೆ. ಆಂಗ್ಲ ವಿದ್ಯೆ ಕೊಡಿಸಿದಲ್ಲಿ ಅವನು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಅಧಿಕಾರ, ಪದವಿ ಗಳಿಸಬಹುದು. ಆದರೆ ಅವನಿಗೆ ಕೊಡಿಸಬೇಕಾದುದು ಧಾರ್ಮಿಕ ಶಿಕ್ಷಣ. ಆತನ ಪುರೋಭಿವೃದ್ಧಿ ಕೀರ್ತಿ, ಯಶಸ್ಸು ಎಲ್ಲವೂ ಈ ಮಾರ್ಗದಲ್ಲಿದೆ. ಅವನಿಗೆ ವೈದಿಕ ವಿದ್ಯೆಯನ್ನೇ ಕೊಡಿಸಿ" ಎಂದು ಆಶೀರ್ವದಿಸುತ್ತ ಗುರುಗಳು ಆಣತಿಯಿತ್ತರು.

ಶಾಸ್ತ್ರಿಗಳು ನಮ್ರತೆಯಿಂದ ತಲೆಬಾಗಿ "ತಮ್ಮ ಅಪ್ಪಣೆಯನ್ನು ಶಿರಸಾ ವಹಿಸುತ್ತೇನೆ. ಬಾಲಕನು ಸದ್ವಿದ್ಯಾ ಸಂಜೀವಿನೀ ಪಾಠಶಾಲೆಯಲ್ಲಿಯೇ ವ್ಯಾಸಂಗವನ್ನು ಮುಂದುವರೆಸಲು ಇದರಿಂದ ಪೂರ್ಣ ಅವಕಾಶವು ದೊರಕುತ್ತದೆ. ಅವನು ತನ್ನೆಲ್ಲಾ ಶಕ್ತಿಯನ್ನೂ ವೇದವಿದ್ಯಾಭ್ಯಾಸಕ್ಕೇ

ವಿನಿಯೋಗಿಸಬಹುದು" ಎಂದರು. ಶಾಸ್ತ್ರಿಗಳು 'ತಮ್ಮ ಅಪ್ಪಣೆಯನ್ನೇ ಶಿರಸಾವಹಿಸುತ್ತೇನೆ' ಎಂದಾಗ "ಅದು ನಮ್ಮ ಅಪ್ಪಣೆಯಲ್ಲ, ಜಗದಂಬೆಯ ಅಪ್ಪಣೆ" ಎಂದು ನುಡಿದು ಗುರುವರ್ಯರು ಶಾಸ್ತ್ರಿಗಳನ್ನು ಕಳುಹಿಸಿಕೊಟ್ಟರು.

ಉತ್ಸಾಹದಿಂದ ಮನೆಗೆ ಬಂದ ಶಾಸ್ತ್ರಿಗಳನ್ನು ಕಂಡು ಲಕ್ಷ್ಮಮ್ಮನವರು ನರಸಿಂಹನ ಮುಂದಿನ ವಿದ್ಯಾಭ್ಯಾಸದ ಬಗ್ಗೆ ನಿರ್ಧಾರ ಮಾಡಿಕೊಂಡು ಬಂದಿದ್ದಾರೆ. ಅದಕ್ಕೇ ಇಷ್ಟು ಹರ್ಷ ಎಂದುಕೊಂಡರು. ಆದರೆ ಪತಿಯ ನಿರ್ಧಾರವನ್ನು ಕೇಳಿ ಆಕೆ ಸ್ವಲ್ಪಮಟ್ಟಿಗೆ ಮುಖ ಚಿಕ್ಕದು ಮಾಡಿಕೊಂಡರು. ಆಕೆಯ ಮನಸ್ಸು ಸ್ವಲ್ಪ ಕುಗ್ಗಿತು. ಮಗ ದೊಡ್ಡ ಅಧಿಕಾರಿಯಾಗಬೇಕೆಂದು ಆಸೆಯಿಟ್ಟುಕೊಂಡಿದ್ದ ಆಕೆಗೆ ಪತಿಯ ತೀರ್ಮಾನದಿಂದ ಸ್ವಲ್ಪ ನಿರಾಸೆಯೇ ಆಯಿತು. ಗುರುಗಳೂ ಹಾಗೆಯೇ ನುಡಿದರೆಂಬುದನ್ನು ಕೇಳಿ, "ನಮ್ಮ ಯೋಗಕ್ಷೇಮವನ್ನು ಹೊತ್ತ ಭಗವಂತನ ಇಚ್ಛೆಯು ಹೇಗಿದೆಯೋ ಹಾಗೆಯೇ ಆಗಲಿ. ನಮಗೆ ಯಾವುದು ಶ್ರೇಯಸ್ಸೋ ಗುರುಗಳು ಅದನ್ನೇ ಸೂಚಿಸಿದ್ದಾರೆ. ಅವರ ಉಪದೇಶದಂತೆ ನಡೆಯುವುದೇ ಒಳ್ಳೆಯದು" ಎಂದು ತಾವೂ ನುಡಿದರು. ಸ್ವಲ್ಪ ದಿನಗಳವರೆಗೆ ಮನೆ ಮಾಡಿಕೊಂಡಿದ್ದ ಖಿನ್ನತೆ ಕ್ರಮೇಣ ದೂರವಾಗಿ ಪ್ರತಿಭಾಶಾಲಿಯಾದ ತಮ್ಮ ಮಗ ಯಾವ ಪಥದಲ್ಲಿ ಹೆಜ್ಜೆಯಿಟ್ಟರೂ ಮುಂದುವರೆಯುತ್ತಾನೆಂಬ ವಿಶ್ವಾಸದಿಂದ ಮನಸ್ಸಿಗೆ ನೆಮ್ಮದಿ ತಂದುಕೊಂಡರು ಆ ತಾಯಿ.

ಗುರುಹಿರಿಯರ ಅಭಿಪ್ರಾಯದಂತೆ ಬಾಲಕನು ಪಾಠಶಾಲೆಯನ್ನು ಸೇರಿದನು. ಸದ್ವಿದ್ಯಾ ಸಂಜೀವಿನೀ ಪಾಠಶಾಲೆಯ ಪೂರ್ಣಕಾಲದ ವಿದ್ಯಾರ್ಥಿಯಗಿ ತನ್ನ ಸಂಸ್ಕೃತ ವಿದ್ಯಾಭ್ಯಾಸದಲ್ಲಿ ಯಶಸ್ಸನ್ನು ಪಡೆಯುತ್ತಾ ಬಂದನು. ವಿತ್ತಾರ್ಥಿಯಾಗದೇ ನಿಜವಾದ ವಿದ್ಯಾರ್ಥಿಯಾದನು. ಎಲ್ಲರಿಗೂ ಆದರ್ಶ ವ್ಯಕ್ತಿಯಾದನು.

* * *



# ೯. ಅರಳುವ ಮುಗುಳು

ಗೀರ್ವಾಣ ವಿದ್ಯೆಯಲ್ಲಿ ಹೆಚ್ಚು ಹೆಚ್ಚು ಆಸಕ್ತಿಯಿಂದ ಅಭ್ಯಾಸ ನಡೆಸುತ್ತಾ ನರಸಿಂಹನು ಒಂದೊಂದೇ ಮೆಟ್ಟಿಲಾಗಿ ಮೇಲೇರುತ್ತಾ ಬಂದನು. ಶ್ರದ್ಧೆ, ಉತ್ಸಾಹಗಳಿಂದ ಅಧ್ಯಯನ ಮಾಡುತ್ತಾ ಅತಿ ಕ್ಷಿಪ್ರಕಾಲದಲ್ಲಿಯೇ, ಕಾವ್ಯ ನಾಟಕಾಲಂಕಾರಗಳಲ್ಲಿ ತನ್ನ ಅಭ್ಯಾಸವನ್ನು ಪೂರೈಸಿದನು. ವಿದ್ಯೆಯಿಂದ ಆತನ ಬುದ್ಧಿ ವಿಚಾರಶೀಲವಾದಂತೆಯೇ ಹೃದಯವು ಆಳವೂ ವಿಸ್ತಾರವೂ ಆಯಿತು. ಗೀರ್ವಾಣ ವಿದ್ಯೆಯಲ್ಲಿನ ಆಸಕ್ತಿ ಸ್ವಾಭಾವಿಕವಾಗಿ ಈಗ ಆಧ್ಯಾತ್ಮ ವಿದ್ಯೆಯತ್ತ ಸಾಗಿತು. ಅದರ ಪ್ರಭಾವದಿಂದ ಬಾಲಕನು ಹೆಚ್ಚು ಹೆಚ್ಚು ಮೌನಿಯೂ, ಆಲೋಚನಾಪರನೂ ಆಗುತ್ತ ಬಂದನು. ಬಾಲ್ಯದಿಂದಲೂ ಪಾರಮಾರ್ಥಿಕ ವಿಷಯಗಳತ್ತ ಹರಿಯುತ್ತಿದ್ದ ಮನಸ್ಸು ಈಗ ಜ್ಞಾನಸಾಗರದತ್ತ ಧಾವಿಸುತ್ತಿತ್ತು.

ಗೃಹಕೃತ್ಯಕ್ಕೆ ಬೇಕಾಗುವ ಪದಾರ್ಥಗಳನ್ನು ತರಲು ಪೇಟೆಗೆಂದು ಹೊರಟ ಬಾಲಕ ಮನಸ್ಸಿನಲ್ಲಿಯೇ ವೇದಾಂತ ವಿಷಯಗಳನ್ನು ಮೆಲುಕು ಹಾಕುತ್ತಲೋ, ಸ್ತೋತ್ರಗಳನ್ನು ಹೇಳಿಕೊಳ್ಳುತ್ತಲೋ ನಡೆದು ನಡೆದು, ಪೇಟೆಯನ್ನೂ, ಊರಿನ ಗಡಿಯನ್ನೂ ದಾಟಿ ಕಾನನದತ್ತ ಬರುತ್ತಿದ್ದುದೂ ಉಂಟು. ಎಷ್ಟೋ ಸಮಯದ ಬಳಿಕ ಬಾಹ್ಯ ಪ್ರಜ್ಞೆ ಬಂದು ತಾನು ಮನೆಯಿಂದ ಹೊರಟುದು ಪೇಟೆಗೆ ಆದರೆ ಬಂದುದು ವಿಪಿನಕ್ಕೆ ಎಂದು ನೆನಪಾಗುತ್ತಿತ್ತು. ಆ ವಯಸ್ಸಿನಲ್ಲಿಯೇ ಆ ಮಟ್ಟದ ತಲ್ಲೀನತೆ!

ನರಸಿಂಹನಲ್ಲಿ ವಿದ್ಯೆಯೊಡನೆ ವಿನಯವೂ, ವಿನಯದೊಡನೆ ಶೀಲವೂ, ಶೀಲದೊಡನೆ ಸಾತ್ವಿಕತೆಯೂ ಬೆಳೆಯುತ್ತ ಬಂದವು. ಗುರುಹಿರಿಯರಲ್ಲಿ ಗೌರವಾದರ, ಬಂಧುಮಿತ್ರರಲ್ಲಿ ಪ್ರೀತಿ ವಿಶ್ವಾಸ, ದೀನದಲಿತರಲ್ಲಿ ಕರುಣೆ, ಅನುಕಂಪ ಮತ್ತು ಸರ್ವತ್ರ ಸಮದೃಷ್ಟಿಯೂ ಬೆಳೆದು ಬಂದವು.

ನರಸಿಂಹನು ಪಾಠಶಾಲೆಯಲ್ಲಿ ಇನ್ನೂ ಆರಂಭದ ವಿದ್ಯಾರ್ಥಿಯಾಗಿದ್ದ ಸಂದರ್ಭದಲ್ಲಿ ಒಮ್ಮೆ ಸಂಚಾರಕ್ಕೆ ಹೊರಟ ಶ್ರೀನೃಸಿಂಹ ಭಾರತೀ ಸ್ವಾಮಿಗಳು ತಮ್ಮ ಆಶ್ರಯದಲ್ಲಿದ್ದ ಪಂಡಿತರಿಗೆಲ್ಲಾ ಸಮಸ್ಯೆಯೊಂದನ್ನು ಕೊಟ್ಟು ತಾವು ಸಂಚಾರದಿಂದ ಹಿಂದಿರುಗುವುದರಲ್ಲಿ ಉತ್ತರ ಸಿದ್ಧಪಡಿಸಬೇಕೆಂದು ಆದೇಶಿಸಿದ್ದರು. ಆ ಸಮಯದಲ್ಲಿ ಅಲ್ಲಿಯೇ ಇದ್ದ ಬಾಲಕ ನರಸಿಂಹನು ಆ ಸಮಸ್ಯೆಯನ್ನು ಕೇಳಿದ್ದನು. ಕೆಲದಿನಗಳ ಬಳಿಕ ಗುರುಗಳು ಮಾರ್ಗಮಧ್ಯದ

ಹಳ್ಳಿಯೊಂದರಲ್ಲಿ ನೆಲಸಿದ್ದಾಗ ಬಾಲಕ ನರಸಿಂಹನು ಆ ಸಮಸ್ಯೆಯನ್ನು ಬಿಡಿಸಿ, ಗುರುಗಳಲ್ಲಿ ತನ್ನ ಉತ್ತರವನ್ನು ನಿವೇದಿಸಿಕೊಳ್ಳಲು ಅವರು ತಂಗಿದ್ದ ಗ್ರಾಮಕ್ಕೇ ಬಂದನು. ಗುರುಗಳಿಗೆ ಸಾಷ್ಟಾಂಗವೆರಗಿ ತಾನು ಸಮಸ್ಯೆಯನ್ನು ಬಿಡಿಸಿರುವುದಾಗಿ ಬಿನ್ನವಿಸಿ, ತಾನು ಸಿದ್ಧಪಡಿಸಿದ ಉತ್ತರವನ್ನು ವಿವರಿಸಿದನು. ಹಿರಿಯ ಪಂಡಿತರೇ ಬಿಡಿಸಲಾಗದಿದ್ದ ಆ ಸಮಸ್ಯೆಯನ್ನು ಈ ಬಾಲಕನು ಅತ್ಯಂತ ಸರಳವಾಗಿ ಬಿಡಿಸಿ ವಿವರಿಸಿದ್ದನ್ನು ಕೇಳಿದ ಸಭಿಕರೆಲ್ಲರೂ ಆಶ್ಚರ್ಯ ಗೊಂಡರು. ಗುರುಗಳಂತೂ ಈ ಮೇಧಾವೀ ಬಾಲಕನನ್ನು ಬಹುವಾಗಿ ಮೆಚ್ಚಿ ಕೊಂಡಾಡಿದರು. ಅದೊಂದು ಶ್ಲೋಕ, ಗುರುಗಳು ನಾಲ್ಕನೆಯ ಪಂಕ್ತಿಯನ್ನು ರಚಿಸಿದ್ದರು, ನರಸಿಂಹನು ಉಳಿದ ಮೂರು ಪಂಕ್ತಿಗಳನ್ನು ರಚಿಸಿ ಅದನ್ನು ಪೂರ್ಣಮಾಡಿದ್ದನು. ಗುರುಗಳಿತ್ತ ಶ್ಲೋಕವನ್ನು ಪೂರ್ಣ ಮಾಡಿದವನು ನರಸಿಂಹನೊಬ್ಬನೇ!

ಆ ಶ್ಲೋಕ ಇಂತಿದೆ.

**ಕ್ಷೋಣೀಭೃದ್ವ ರಸಾನುವರ್ತಿ ವಟವೃಕ್ಷಾಧಃ ಪ್ರದೇಶಸ್ಥಿತಾ**
**ಮುದ್ರಾಪುಸ್ತಕಮೌನಯುಕ್ತಮಯುತಾ ನಾಸಾಗ್ರದೃಷ್ಟಿಸ್ಸದಾ ।**
**ಪಾರಾಶರ್ಯ ಸುತಾದಿಮಾನ್ ಮುನಿವರಾನ್ ಸಂಬೋಧಯಂತೀ ಪರಾ**
**ಮುದ್ರಾಕಾಚನ ಮುಕ್ತಿದಾನ ನಿಪುಣಾ ನಿದ್ರಾತಿ ಜಾಗರ್ತಿ ವಾ ॥**

ತರ್ಕಶಾಸ್ತ್ರದ ಪರೀಕ್ಷೆಯ ಸಂದರ್ಭ. ಪ್ರಶ್ನೆಪತ್ರಿಕೆ ಸ್ವಲ್ಪ ಕಠಿಣವಾಗಿಯೇ ಇತ್ತು. ವಿದ್ಯಾರ್ಥಿಗಳೆಲ್ಲರೂ ಉತ್ತರ ಬರೆಯುವುದರಲ್ಲಿ ತಲ್ಲೀನರಾಗಿದ್ದರು. ನರಸಿಂಹನೂ ಗಂಭೀರ ಗಮನದಿಂದ ಉತ್ತರ ಬರೆಯುತ್ತಿದ್ದನು. ಆ ಪತ್ರಿಕೆಯಲ್ಲಿದ್ದ ಒಂದು ಪ್ರಶ್ನೆ ಪಠ್ಯವಿಷಯಕ್ಕೆ ಹೊರತಾಗಿದ್ದು, ಮುಂದಿನ ತರಗತಿಯ ಪಠ್ಯವಿಷಯಕ್ಕೆ ಸೇರಿದುದಾಗಿತ್ತು. ಅಕಸ್ಮಾತ್ತಾಗಿ ಅದು ಈ ಪ್ರಶ್ನೆಪತ್ರಿಕೆಯಲ್ಲಿ ಬಂದುಬಿಟ್ಟಿತ್ತು. ಅದು ಪರೀಕ್ಷೆಯ ಮೇಲ್ವಿಚಾರಕರಾಗಿದ್ದ ಆರ್ಡಿಕುಪ್ಪಂ ಸುಬ್ರಹ್ಮಣ್ಯಶಾಸ್ತ್ರಿಗಳ ಗಮನಕ್ಕೆ ಬಂತು. ಅವರು ಒಂದು ಕ್ಷಣ ಯೋಚಿಸಿದರು. ಅವರಿಗೆ ಉತ್ತರ ತೋಚಲಿಲ್ಲ. ಪುಸ್ತಕ ಭಂಡಾರಕ್ಕೆ ಹೋಗಿ ಪ್ರಶ್ನೆಯ ಉತ್ತರವನ್ನು ಪುಸ್ತಕದಲ್ಲಿ ಹುಡುಕಿ ತೆಗೆದು ಓದಿಕೊಂಡರು. ಅನಂತರ ಪರೀಕ್ಷೆ ನಡೆಯುತ್ತಿದ್ದ ಸ್ಥಳಕ್ಕೆ ಬಂದರು. ನಿಧಾನವಾಗಿ ನರಸಿಂಹನ ಸಮೀಪಕ್ಕೆ ಹೋಗಿ ಆ ಪ್ರಶ್ನೆಯತ್ತ ಅವನ ಗಮನವನ್ನು ಸೆಳೆದು ಗೋಪ್ಯವಾಗಿ ಉತ್ತರವನ್ನು ತಿಳಿಸಿದರು.

ಪರೀಕ್ಷೆ ಮುಗಿಯಿತು. ವಿದ್ಯಾರ್ಥಿಗಳು ತಮ್ಮ ಉತ್ತರ ಪತ್ರಿಕೆಗಳನ್ನು ಶಾಸ್ತ್ರಿಗಳಿಗೆ ಕೊಟ್ಟು ಒಬ್ಬೊಬ್ಬರಾಗಿ ಹೊರಟರು. ಶಾಸ್ತ್ರಿಗಳು ವಿದ್ಯಾರ್ಥಿಗಳೆಲ್ಲರೂ ಹೊರಟು ಹೋದರೆಂಬುದನ್ನು ಖಚಿತಪಡಿಸಿಕೊಂಡು, ನರಸಿಂಹನ ಉತ್ತರ ಪತ್ರಿಕೆಯನ್ನು ತೆಗೆದುನೋಡಿದರೆ ಅವರಿಗೆ ವಿಸ್ಮಯವೂ, ನಿರಾಸೆಯೂ ಆಯಿತು. ಎಲ್ಲರಿಗಿಂತಲೂ ಬುದ್ಧಿವಂತನಾಗಿದ್ದ ನರಸಿಂಹನು ಆ ಪ್ರಶ್ನೆಗೆ ತಾವು ಹೇಳಿಕೊಟ್ಟಿದ್ದಂತಹ ಉತ್ತರವನ್ನು ಬರದೇ ಇರಲಿಲ್ಲ. ತಮ್ಮ ಪ್ರಿಯಶಿಷ್ಯನಾದ ನರಸಿಂಹನು ತುಂಬಾ ಪ್ರತಿಭೆಯುಳ್ಳವನೆಂಬ ಹೆಸರನ್ನು ಪಡೆಯಬೇಕೆಂಬುದು ಅವರ ಅಭಿಲಾಷೆಯಾಗಿತ್ತು. ಆದರೆ ನರಸಿಂಹನು ಅವರ ಸೂಚನೆಯನ್ನು ಅಂಗೀಕರಿಸದೇ ಅವರನ್ನು ನಿರಾಸೆಗೊಳಿಸಿದ್ದನು.

ಸಂಜೆ ಮನೆಗೆ ಬಂದ ಶಾಸ್ತ್ರಿಗಳು ಮಗ್ಗುಲ ಮನೆಯಲ್ಲಿಯೇ ಇದ್ದ ನರಸಿಂಹನನ್ನು ಕರೆದರು. ಬಾಲಕ ಬಂದು ವಿನಯದಿಂದ ತಲೆಬಾಗಿ ನಿಂತನು. "ಏನಯ್ಯಾ ನರಸಿಂಹ, ಆ ಪ್ರಶ್ನೆಗೆ ಉತ್ತರವನ್ನು ಹೇಳಿಕೊಟ್ಟರೂ ಬರೆಯಲಿಲ್ಲ?" ಎಂದು ಕೇಳಿದರು. ನರಸಿಂಹನು ನಮ್ರನಾಗಿ "ಗುರುಗಳೇ, ಆ ಪ್ರಶ್ನೆಗೆ ಉತ್ತರವೇನೆಂದು ನನಗೆ ತಿಳಿದಿರಲಿಲ್ಲ. ಆ ಭಾಗವನ್ನು ನಾನು ಓದಿಕೊಂಡಿರ ಲಿಲ್ಲ" ಎಂದನು. ಶಾಸ್ತ್ರಿಗಳು "ನಾನೇ ಹೇಳಿಕೊಟ್ಟರೂ ನೀನು ಬರೆಯಲಿಲ್ಲ ವಲ್ಲಾ, ಏಕೆ?" ಎಂದು ಪುನಃ ಕೇಳಿದರು. ವಿನಯದಿಂದ ನರಸಿಂಹನು "ಗುರುಗಳೇ, ಅದು ನನ್ನ ಉತ್ತರವಾಗುವುದಿಲ್ಲ, ಅಲ್ಲವೇ? ತಮ್ಮಿಂದ ಹೇಳಿಸಿ ಕೊಂಡು ಬರೆದಲ್ಲಿ, ನಾನು ಓದದೇ ಬರೆದ ಉತ್ತರ ನನ್ನ ಉತ್ತರವಾಗುವುದಿಲ್ಲ ವಲ್ಲ" ಎಂದನು. ನರಸಿಂಹನ ಸತ್ಯನಿಷ್ಠೆ, ಪ್ರಾಮಾಣಿಕತೆ ಇವುಗಳು ಶಾಸ್ತ್ರಿಗಳನ್ನು ಅಚ್ಚರಿಗೊಳಿಸಿದವು. ಬಾಲಕನನ್ನು ಅವರು ಮನಸಾ ಕೊಂಡಾಡಿದರು.

ಶೃಂಗೇರಿಯ ಪಾಠಶಾಲಾ ವಸತಿಗೃಹದಲ್ಲಿ ಎಲ್ಲ ವಿದ್ಯಾರ್ಥಿಗಳೂ ಇರಲು ಸಾಕಾದಷ್ಟು ಸ್ಥಳಾವಕಾಶವಿರಲಿಲ್ಲ. ಆದ್ದರಿಂದ ಶೃಂಗೇರಿಯ ಇತರ ದೇವಾಲಯಗಳ ಕೈಸಾಲೆಯಲ್ಲಿ, ಅವುಗಳಿಗೆ ಸೇರಿದ ಕೊಠಡಿಗಳಲ್ಲಿ ವಿದ್ಯಾರ್ಥಿ ಗಳು ವಾಸವಿರುತ್ತಿದ್ದರು. ಹೀಗೆ ಶ್ರೀವೇಂಕಟೇಶ್ವರ ದೇವಾಲಯದಲ್ಲಿಯೂ ಹಲವು ಜನ ವಿದ್ಯಾರ್ಥಿಗಳಿದ್ದರು. ಈ ದೇವಾಲಯವು ಮಠದ ಬೀದಿಯಲ್ಲಿ ಸ್ವಲ್ಪ ದೂರದಲ್ಲಿದ್ದುದರಿಂದ ಶ್ರೀ ಸುಬ್ರಹ್ಮಣ್ಯಶಾಸ್ತ್ರಿಗಳು ಅಲ್ಲಿನ ಮೇಲ್ವಿಚಾರಕರಾಗಿ ನೇಮಿಸಲ್ಪಟ್ಟಿದ್ದರು.

ಅಲ್ಲಿದ್ದ ಕೆಲ ವಿದ್ಯಾರ್ಥಿಗಳು ಬೇಸರ ನೀಗಲು ಯಾವಾಗಲಾದರೊಮ್ಮೆ ಇಸ್ಪೀಟು ಆಟವನ್ನು ಆಡುತ್ತಿದ್ದುದುಂಟು. ಈ ವಿಚಾರ ಹೇಗೋ ಸುಬ್ರಹ್ಮಣ್ಯ ಶಾಸ್ತ್ರಿಗಳಿಗೆ ಗೊತ್ತಾಯಿತು. ಅವರು ಎಷ್ಟು ವಿಧದಲ್ಲಿ ಪ್ರಯತ್ನ ಪಟ್ಟರೂ ಹುಡುಗರು ತುಂಬಾ ಮುಂಜಾಗ್ರತೆ ವಹಿಸಿದ್ದುದರಿಂದ ಅವರ ಸೂಕ್ಷ್ಮ ತನಿಖೆಗೆ ಸಿಕ್ಕಲಿಲ್ಲ. ಆಗಾಗ ನರಸಿಂಹನೂ ಆ ವಿದ್ಯಾರ್ಥಿಗಳೊಡನೆಯೇ ಇರುತ್ತಿದ್ದು,

ಅಲ್ಲಿಯೇ ವ್ಯಾಸಂಗ ಮಾಡುತ್ತಿದ್ದನು. ನರಸಿಂಹನು ಸಾಧುವೂ, ಸಭ್ಯನೂ ಆಗಿದ್ದುದರಿಂದ ಆ ವಿದ್ಯಾರ್ಥಿಗಳಿಗೆ ಅವನು ತಮ್ಮ ಮೇಲೆ ಚಾಡಿ ಹೇಳುವುದಿಲ್ಲ ವೆಂದು ಧೈರ್ಯ. ಅವನು ಆಗಾಗ ಅವರಿಗೆ ಬುದ್ಧಿ ಹೇಳುತ್ತಿದ್ದರೂ ಅವರು ಅವನನ್ನು ಗೋಗರೆದು ಕಾಡಿ ಬೇಡಿ ಸುಮ್ಮನಾಗಿಸುತ್ತಿದ್ದರು.

ಒಮ್ಮೆ ಆ ವಿದ್ಯಾರ್ಥಿಗಳ ಆಟ ಸಾಗಿತ್ತು. ಇದನ್ನು ಕಂಡ ಬೇರೊಬ್ಬ ವಿದ್ಯಾರ್ಥಿ ಕೂಡಲೇ ಹೋಗಿ ಶಾಸ್ತ್ರಿಗಳಿಗೆ ತಿಳಿಸಿದ. ಇದ್ದಕ್ಕಿದ್ದಂತೆಯೇ ಶಾಸ್ತ್ರಿಗಳು ತನಿಖೆಗೆ ಬಂದುಬಿಟ್ಟರು. ಓದುತ್ತ ಕುಳಿತಿದ್ದ ನರಸಿಂಹ, ಏಕೋ ತಲೆಯೆತ್ತಿ ನೋಡಿದರೆ, ಶಾಸ್ತ್ರಿಗಳ ಸವಾರಿ ಬರುತ್ತಿರುವುದು ಕಂಡುಬಿಟ್ಟಿತು. ತಕ್ಷಣವೇ ನರಸಿಂಹನಿಂದ ಎಚ್ಚರಿಕೆ ಬರಲು, ವಿದ್ಯಾರ್ಥಿಗಳು ಜಾಗ್ರತರಾಗಿ ಗಂಭೀರವಾದ ಅಧ್ಯಯನದಲ್ಲಿ ತೊಡಗಿರುವಂತೆ ನಟಿಸಿದರು. ಶಾಸ್ತ್ರಿಗಳು ಎಲ್ಲಾ ಕೊಠಡಿಗಳಿಗೂ ಹೋಗಿ ಪರಿಶೀಲಿಸಿ, "ಏನಯ್ಯಾ ನರಸಿಂಹ, ನಿನ್ನ ಸಹಪಾಠಿಗಳು ಇಸ್ಪೀಟನ್ನೇನಾದರೂ ಆಡುವುದುಂಟೋ?" ಎಂದು ಕೇಳಿದರು. ಕೂಡಲೇ ನರಸಿಂಹನು "ಇಲ್ಲ ಗುರುಗಳೇ, ಅಂತಹುದೇನನ್ನೂ ಅವರು ಅರಿಯರು" ಎಂದು ಬಿಟ್ಟನು! ಶಾಸ್ತ್ರಿಗಳು ತೃಪ್ತರಾಗಿ ಹಿಂದಿರುಗಿದರು. ಹೆದರಿ ಕಂಗಾಲಾಗಿದ್ದ ವಿದ್ಯಾರ್ಥಿಗಳಂತೂ ನರಸಿಂಹನನ್ನು ಮನಸಾ ವಂದಿಸಿ, ಇನ್ನು ಇಂತಹ ಹವ್ಯಾಸಕ್ಕೆ ಬೀಳಬಾರದೆಂದು ನಿರ್ಧರಿಸಿದರು.

ನರಸಿಂಹನಿಗೆ ಸುಳ್ಳು ಹೇಳಿಬಿಟ್ಟೆನಲ್ಲಾ ಎಂದು ಮನಸ್ಸಿನಲ್ಲಿಯೇ ಕೊರಗು. ತಾನು ಸುಳ್ಳು ಹೇಳಿದುದಕ್ಕೆ ಅವನಿಗೆ ತುಂಬಾ ಪಶ್ಚಾತ್ತಾಪವಾಯಿತು. ತಾನು ವಾಸ್ತವ ಸಂಗತಿಯನ್ನು ಹೇಳಿದ್ದರೆ, ವಿದ್ಯಾರ್ಥಿಗಳಿಗೆ ಶಿಕ್ಷೆಯಾಗುತ್ತಿತ್ತು. ಬಹುಶಃ ಅವರನ್ನು ಪಾಠಶಾಲೆಯಿಂದ ಹೊರಹಾಕುತ್ತಿದ್ದರು. ಅದನ್ನು ತಪ್ಪಿಸಲು ಸುಳ್ಳು ಹೇಳಬೇಕಾಯಿತು. ಎಷ್ಟು ಸಮಾಧಾನ ತಂದುಕೊಳ್ಳಲು ಯತ್ನಿಸಿದರೂ ಮನಸ್ಸಿಗೆ ಶಾಂತಿ ದೊರಕಲಿಲ್ಲ.

ಮಾರನೆಯ ದಿನ ಬೆಳಿಗ್ಗೆ ನರಸಿಂಹನು ಶಾಸ್ತ್ರಿಗಳ ಮನೆಗೆ ಹೋಗಿ ಖಿನ್ನನಾಗಿ ನಿಂತನು. ಈ ಖಿನ್ನತೆಯ ಕಾರಣ ಶಾಸ್ತ್ರಿಗಳಿಗೆ ಅರ್ಥವಾಗಲಿಲ್ಲ. ಕಾರಣ ಕೇಳಿದರು. "ಗುರುಗಳೇ, ತಮಗೆ ನೆನ್ನೆಯ ದಿನ ನಾನು ಸುಳ್ಳು ಹೇಳಿಬಿಟ್ಟಿದ್ದೇನೆ. ನನ್ನ ಅಪರಾಧ ಮನಸ್ಸನ್ನು ಮುಳ್ಳಿನಂತೆ ಚುಚ್ಚುತ್ತಿದೆ. ನನ್ನನ್ನು ಕ್ಷಮಿಸಬೇಕೆಂದು ಕೋರಲು ಬಂದಿದ್ದೇನೆ" ಎಂದು ನುಡಿದು ಸಾಷ್ಟಾಂಗ ಪ್ರಣಾಮ ಮಾಡಿದನು. ಶಾಸ್ತ್ರಿಗಳು ವಿಷಯವೇನೆಂದು ಕೇಳಲು, ವಾಸ್ತವಾಂಶವನ್ನು ತಿಳಿಸಿ ವಿದ್ಯಾರ್ಥಿಗಳನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ನರಸಿಂಹನ ವಿವೇಚನೆ, ಅನುಕಂಪ, ಪರೋಪಕಾರ ದೃಷ್ಟಿಯನ್ನು ಕಂಡು ಶಾಸ್ತ್ರಿಗಳು ಅವಾಕ್ಕಾದರು.



ಸಹಪಾಠಿಗಳಲ್ಲಿಯೂ ನರಸಿಂಹನ ವರ್ಚಸ್ಸು ಪ್ರಭಾವ ಬೀರಿತ್ತು. ಅವರ ದೌರ್ಬಲ್ಯಗಳನ್ನು ಕಂಡು ನರಸಿಂಹನು ಆಗಾಗ ಅವರನ್ನು ಸೂಕ್ಷ್ಮವಾಗಿ ಎಚ್ಚರಿಸುತ್ತಿದ್ದನು. ನರಸಿಂಹನಲ್ಲಿ ವಿದ್ಯಾರ್ಥಿಗಳಿಗೆ ಅಪಾರ ವಿಶ್ವಾಸ, ನಂಬಿಕೆ. ಪಾಠಗಳಲ್ಲಿ ತಮಗೆ ಕಂಡುಬಂದ ಸಂದೇಹ, ಅನುಮಾನಗಳನ್ನು ಪರಿಹರಿಸಿ ಕೊಳ್ಳಲು ಅವನನ್ನೇ ಆಶ್ರಯಿಸುತ್ತಿದ್ದರು. ಒಮ್ಮೊಮ್ಮೆ ಉಪಾಧ್ಯಾಯರೂ ಸಹ ತರಗತಿಗೆ ಪಾಠ ಹೇಳುವಂತೆ ನರಸಿಂಹನಿಗೆ ಹೇಳುತ್ತಿದ್ದರು. ಪಾಠವನ್ನು ಓದಿದೊಡನೆಯೇ ಅಥವಾ ಕೇಳಿದೊಡನೆಯೇ ಗ್ರಹಿಸುವ ನರಸಿಂಹನಿಗೆ ತನ್ನ ತರಗತಿಗೆ ಪಾಠ ಹೇಳುವುದರಲ್ಲಾಗಲೀ, ತನ್ನ ಸಹಪಾಠಿಗಳಿಗೆ ಕಠಿಣವಾದ ಪಾಠಗಳನ್ನು ಸುಲಭವಾಗಿ ವಿವರಿಸುವುದರಲ್ಲಾಗಲೀ ಯಾವ ಕಷ್ಟವೂ ತೋರುತ್ತಿರಲಿಲ್ಲ. ತಾನು ಎಲ್ಲರಿಗಿಂತ ಬುದ್ಧಿವಂತನೆಂದಾಗಲೀ, ಉಪಾಧ್ಯಾಯರುಗಳು ತನ್ನಲ್ಲಿ ಅಪಾರ ವಿಶ್ವಾಸ ಹೊಂದಿದ್ದಾರೆಂದಾಗಲೀ ಆತನು ಎಂದೂ ಅಹಂಕಾರ ಪಟ್ಟವನಲ್ಲ. ಬದಲಿಗೆ ತನ್ನ ಪಾಲಿಗೆ ಬಂದ ಇಂತಹ ಕೆಲಸಗಳನ್ನು ಅತ್ಯಂತ ವಿನಯ, ನಮ್ರತೆಗಳಿಂದ ಒಪ್ಪಿಕೊಳ್ಳುತ್ತಿದ್ದನು.

ಹೀಗೆ ನರಸಿಂಹನು ತನ್ನ ವಿದ್ಯಾಗುರುಗಳ ವಿಶ್ವಾಸ, ಸಹಪಾಠಿಗಳ ಗೌರವಗಳಿಗೆ ಪಾತ್ರನಾಗಿ ಎಲ್ಲರನ್ನೂ ಆಕರ್ಷಿಸುವ ಆಯಸ್ಕಾಂತವಾಗಿದ್ದನು. ಜಗದ್ಗುರು ಶ್ರೀ ನೃಸಿಂಹಭಾರತೀ ಮಹಾಸ್ವಾಮಿಗಳವರಿಗಂತೂ ಈ ವಿದ್ಯಾರ್ಥಿಯಲ್ಲಿ ಅತೀವವಾದ ವಿಶ್ವಾಸವಿತ್ತು. ಈತನ ಭವಿಷ್ಯದಲ್ಲಿ ತುಂಬಾ ಭರವಸೆಯಿತ್ತು. ಹಾಗಾಗಿ ಅವರು ಆಗಾಗ ನರಸಿಂಹನ ಪ್ರಗತಿಯನ್ನು ಕುರಿತು ವಿಚಾರಿಸುತ್ತಲಿದ್ದರು.

ಶ್ರೀನೃಸಿಂಹ ಭಾರತೀ ಸ್ವಾಮಿಗಳು ಒಮ್ಮೊಮ್ಮೆ ಅನಿರೀಕ್ಷಿತವಾಗಿ ಪಾಠಶಾಲೆಗೆ ಬರುತ್ತಿದ್ದುದೂ ಉಂಟು. ಯಾವ ಮುನ್ಸೂಚನೆಯೂ ಇಲ್ಲದೇ ತರಗತಿಗಳಿಗೆ ಬರುತ್ತಿದ್ದ ಗುರುಗಳನ್ನು ಕಂಡು ಉಪಾಧ್ಯಾಯರೂ, ವಿದ್ಯಾರ್ಥಿಗಳೂ ತಬ್ಬಿಬ್ಬಾಗುತ್ತಿದ್ದರು. ಸದಾ ಮಂದಸ್ಮಿತರಾಗಿರುತ್ತಿದ್ದ ಗುರುಗಳು ಪ್ರಶ್ನೆ ಕೇಳುವುದರ ಮೂಲಕ ವಿದ್ಯಾರ್ಥಿಗಳನ್ನು ಪರೀಕ್ಷಿಸುತ್ತಿದ್ದರು. ಇಂತಹ ಸಂದರ್ಭಗಳಲ್ಲಿ ಪ್ರಶ್ನೆಗೆ ಉತ್ತರ ಗೊತ್ತಿದ್ದರೂ ಗಾಬರಿಯಿಂದ ತಪ್ಪು ಉತ್ತರಗಳನ್ನು ಹೇಳುವ ವಿದ್ಯಾರ್ಥಿಗಳೇ ಹೆಚ್ಚು! ಆದರೆ ನರಸಿಂಹನು ಮಾತ್ರ ಎಂದೂ ತಪ್ಪು ಉತ್ತರವನ್ನು ಹೇಳಿದವನೇ ಅಲ್ಲ. ಉಪಾಧ್ಯಾಯರ ನಿರೀಕ್ಷೆಗೆ ತಕ್ಕಂತೆ ಸರಿ ಉತ್ತರವನ್ನೇ ಹೇಳಿ ಅವರ ಮೆಚ್ಚುಗೆಗೂ, ಶ್ರೀಗುರುವರ್ಯರ ಕೃಪಾಶೀರ್ವಾದಗಳಿಗೂ ಪಾತ್ರನಾಗುತ್ತಿದ್ದನು.

ವಿದ್ಯಾಭ್ಯಾಸದಲ್ಲಿ ನರಸಿಂಹನ ಪ್ರಗತಿಯನ್ನು ಕುರಿತು ಉಪಾಧ್ಯಾಯರಿಂದ ವರದಿಯನ್ನು ತರಿಸಿಕೊಳ್ಳುತ್ತಿದ್ದ ಶ್ರೀನೃಸಿಂಹಭಾರತಿಗಳವರು, ಪರೀಕ್ಷೆಗಳಲ್ಲಿ ವಿದಾರ್ಥಿಗಳು ಬರೆದ ಉತ್ತರ ಪತ್ರಿಕೆಗಳನ್ನು ತಾವೇ ಸ್ವತಃ ಪರಿಶೀಲಿಸುತ್ತಿದ್ದರು. ನರಸಿಂಹನಲ್ಲಿ ಅವರಿಟ್ಟಿದ್ದ ನಿರೀಕ್ಷೆಗೆ ತಕ್ಕಂತೆ ಅವನ ಉತ್ತರ ಪತ್ರಿಕೆಗಳು ಅವರಿಗೆ ತೃಪ್ತಿಯನ್ನೂ, ಪರಮ ಸಂತೋಷವನ್ನೂ ನೀಡುತ್ತಿದ್ದವು. ಗುರುಗಳು ಆ ಬಾಲಕನನ್ನು ತರ್ಕಶಾಸ್ತ್ರ ವ್ಯಾಸಂಗ ಮಾಡಲು ನಿಯೋಜಿಸಿದ್ದರು. ಆತನ ಬುದ್ಧಿಮತ್ತೆಯ ಪ್ರತೀಕವಾಗಿದ್ದ ಉತ್ತರ ಪತ್ರಿಕೆಗಳು ಆತನ ಮೇಧಾವಿತನವನ್ನೂ, ಶಾಸ್ತ್ರವಿಷಯಗಳಲ್ಲಿ ಆತನಿಗಿದ್ದ ವಿಶೇಷ ಜ್ಞಾನವನ್ನೂ ವ್ಯಕ್ತಪಡಿಸುತ್ತಿದ್ದವು. "ಸರ್ವಜ್ಞಂ ಶ್ರೀನೃಸಿಂಹಂ ಕುರು ಶಿವದಯಿತೇ" ಎಂದು ಜಗನ್ಮಾತೆಯನ್ನು ಪ್ರಾರ್ಥಿಸುತ್ತಿದ್ದ ಗುರುಗಳು ನರಸಿಂಹನನ್ನು ಸರ್ವಜ್ಞತ್ವದತ್ತ ತಾವೇ ಕೈಹಿಡಿದು ನಡೆಸುತ್ತಿದ್ದರು. ತಮ್ಮ ಪ್ರಾರ್ಥನೆಯು ಫಲಿಸುತ್ತಿದ್ದುದನ್ನು ಕಂಡು ಹರ್ಷದಿಂದಲೂ ಆನಂದದಿಂದಲೂ ಪುಲಕಿತರಾಗುತ್ತಿದ್ದರು.

* * *



# ೧೦. ಶೃಂಗೇರಿಯಿಂದ ಬೆಂಗಳೂರಿಗೆ

ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರು ತಮ್ಮ ದಕ್ಷಿಣ ದೇಶದ ಸಂಚಾರದಿಂದ ಹಿಂದಿರುಗುತ್ತಾ ಬೆಂಗಳೂರಿನಲ್ಲಿ ಸ್ವಲ್ಪ ಕಾಲ ತಂಗಿದ್ದರಷ್ಟೆ. ಅಲ್ಲಿ ಕ್ರಿಸ್ತಶಕ ೧೯೦೭ರಲ್ಲಿ ಶ್ರೀ ಶಂಕರ ಮಠವು ಸ್ಥಾಪಿಸಲ್ಪಟ್ಟಿತು. ಅದೇ ಮಠದಲ್ಲಿ ವೇದಾಂತ ಶಾಸ್ತ್ರದ ಪ್ರೌಢ ವಿದ್ಯಾಭ್ಯಾಸಕ್ಕಾಗಿ ಒಂದು ಮಹಾಪಾಠಶಾಲೆಯನ್ನು ಸ್ಥಾಪಿಸುವ ಸಂಕಲ್ಪವನ್ನು ಶ್ರೀಗುರುವರ್ಯರು ಮಾಡಿದ್ದರು. ಗೀರ್ವಾಣ ಪ್ರೌಢ ವಿದ್ಯಾಭಿವರ್ಧಿನೀ ಪಾಠಶಾಲಾ ಎಂಬ ಅಭಿದಾನದಲ್ಲಿ ಆ ಮಹಾಪಾಠಶಾಲೆಯು ಕ್ರಿ.ಶ ೧೯೧೧ರಲ್ಲಿ ಆರಂಭವಾಯಿತು. ಪಾಠಶಾಲೆಯಲ್ಲಿ ಐವತ್ತು ಮಂದಿ ಪ್ರೌಢ ವಿದ್ಯಾರ್ಥಿಗಳಿಗೆ ಅನುಕೂಲವಾದ ವಾಸಸ್ಥಳಗಳನ್ನೂ, ಅಶನವಸನಾದಿ ಅವಶ್ಯಕತೆಗಳನ್ನೂ ಪೂರೈಸಿ, ಪೂರ್ವ ಮತ್ತು ಉತ್ತರ ಮೀಮಾಂಸಾ ಶಾಸ್ತ್ರಗಳು, ಧರ್ಮಶಾಸ್ತ್ರಗಳು, ವೇದಭಾಷ್ಯಾದಿ ಪ್ರೌಢವಿದ್ಯೆಯನ್ನು ಪ್ರಾಚೀನ ಪದ್ಧತಿಯಂತೆ ಅಭ್ಯಾಸ ಮಾಡಿಸುವ ಏರ್ಪಾಡು ಇತ್ತು. ಅಷ್ಟೇ ಅಲ್ಲದೆ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಜೀವನಮಾರ್ಗವನ್ನು ಕಲ್ಪಿಸಿಕೊಡುವ ಏರ್ಪಾಡೂ ಮಾಡಲ್ಪಟ್ಟಿತ್ತು. ಅದ್ವೈತ, ಪೂರ್ವಮೀಮಾಂಸಾ ಶಾಸ್ತ್ರಗಳಲ್ಲಿ ಪಾರಂಗತರಾದ ವಿದ್ವಾಂಸರುಗಳು ಅಲ್ಲಿ ಉಪಾಧ್ಯಾಯರಾಗಿ ನೇಮಿಸಲ್ಪಟ್ಟಿದ್ದರು. ವಿದ್ಯಾರ್ಥಿಗಳಿಗೂ, ಉಪಾಧ್ಯಾಯರುಗಳಿಗೂ ವಾಸಕ್ಕೆ ಅನುಕೂಲವಾಗುವಂತೆ ದಿವಾನ್ ವಿ.ಪಿ.ಮಾಧವರಾಯರು ಶಂಕರಮಠದ ಬಳಿಯಲ್ಲಿಯೇ ಮನೆಗಳನ್ನು ಕಟ್ಟಿಸಿಕೊಟ್ಟಿದ್ದರು. ಮಠದ ವರಮಾನದಲ್ಲಿ ಸ್ವಲ್ಪಾಂಶವನ್ನು ಪಾಠಶಾಲೆಯ ಖರ್ಚುವೆಚ್ಚಕ್ಕಾಗಿ ತೆಗೆದಿರಿಸಲಾಗಿತ್ತು. ಆ ಪಾಠಶಾಲೆಗೆ ಆರಂಭ ದೆಸೆಯಲ್ಲಿ ಎಂಟು ವಿದ್ಯಾರ್ಥಿಗಳು ವ್ಯಾಸಂಗಕ್ಕೆ ಬಂದಿದ್ದರು.

ಶ್ರೀ ಜಗದ್ಗುರುಗಳು ತರ್ಕಶಾಸ್ತ್ರಾಧ್ಯಯನವನ್ನು ಪೂರೈಸಿದ ನರಸಿಂಹಶಾಸ್ತ್ರಿಗಳಿಗೆ ಪೂರ್ವ ಮತ್ತು ಉತ್ತರ ಮೀಮಾಂಸಾ ಶಾಸ್ತ್ರಾಧ್ಯಯನಕ್ಕೆ ಅವಕಾಶ ಕಲ್ಪಿಸುವ ಯೋಚನೆಯನ್ನು ಮಾಡಿದ್ದರು. ಅದಕ್ಕಾಗಿ ಅವರನ್ನು ಬೆಂಗಳೂರಿಗೆ ಕಳುಹಿಸುವ ಆಲೋಚನೆ ಮಾಡಿ ತಮ್ಮ ಆಪ್ತ ಕಾರ್ಯಭಾರಿಯಾಗಿದ್ದ ಶ್ರೀಕಂಠಶಾಸ್ತ್ರಿಗಳನ್ನು ಕರೆದು ನರಸಿಂಹಶಾಸ್ತ್ರಿಗಳ ಬೆಂಗಳೂರು ವಿದ್ಯಾಭ್ಯಾಸಕ್ಕೆ ಎಲ್ಲಾ ಅನುಕೂಲಗಳನ್ನೂ ಕಲ್ಪಿಸಬೇಕೆಂದು ಸೂಚನೆಯಿತ್ತರು.

ಶ್ರೀಕಂಠಶಾಸ್ತ್ರಿಗಳಿಂದ ಗೋಪಾಲಶಾಸ್ತ್ರಿಗಳಿಗೆ ಕರೆಬಂತು. ಶ್ರೀಗುರುಗಳ ಇಚ್ಛೆಯನ್ನು ಗೋಪಾಲಶಾಸ್ತ್ರಿಗಳು ಶ್ರೀಕಂಠಶಾಸ್ತ್ರಿಗಳಿಂದ ಅರಿತರು. ತಮ್ಮ ಬಾಲಕನಲ್ಲಿ ಮೊದಲಿನಿಂದಲೂ ಅಭಿಮಾನ, ಆಸಕ್ತಿಗಳನ್ನಿಟ್ಟಿದ್ದ ಗುರುಗಳ ಈ ಹೊಸ ಆದೇಶದಿಂದ ಗೋಪಾಲಶಾಸ್ತ್ರಿಗಳಿಗೆ ಅತ್ಯಂತ ಸಂತೋಷವಾದರೂ, ಸ್ವಲ್ಪ ಚಿಂತೆಯೂ ಆಯಿತು. ನರಸಿಂಹಶಾಸ್ತ್ರಿಗಳನ್ನು ಬೆಂಗಳೂರಿಗೆ ಕಳುಹಿಸುವ ವಿಚಾರದಲ್ಲಿ ಶ್ರೀಕಂಠಶಾಸ್ತ್ರಿಗಳು ತಮ್ಮ ಅನುಕೂಲಾಭಿಪ್ರಾಯವನ್ನೂ ಸಹ ಸೂಚಿಸಿದರು ಮತ್ತು ಗುರುಗಳ ಇಚ್ಛೆಯನ್ನು ನೆರವೇರಿಸುವುದು ಎಲ್ಲರಿಗೂ ಶ್ರೇಯಸ್ಕರವೆಂತಲೂ, ಪವಿತ್ರವಾದ ಗುರ್ವಾಜ್ಞೆಯನ್ನು ಶಿರಸಾವಹಿಸುವುದರಿಂದ ಅವರಿಗೆ ಸಂತೋಷವಾಗುವುದಲ್ಲದೇ ಶಾಸ್ತ್ರಿಗಳಿಗೂ, ಅವರ ಬಾಲಕನಿಗೂ ಕಲ್ಯಾಣಕರವೆಂತಲೂ ಹಿತನುಡಿದರು. ಗೋಪಾಲಶಾಸ್ತ್ರಿಗಳು ಏನನ್ನೂ ಹೇಳದೇ "ಶ್ರೀಗುರುಗಳ ಇಚ್ಛೆಯಿದ್ದಂತಾಗಲಿ" ಎಂದಷ್ಟೇ ನುಡಿದು ಮನೆಗೆ ತೆರಳಿದರು.

ಈ ಹಿಂದೆಯೂ ಇದೇ ರೀತಿಯಾಗಿತ್ತು. ಆಗ ಮಾಧ್ಯಮಿಕ ಶಾಲೆಯಲ್ಲಿ ಇಂಗ್ಲಿಷ್, ಕನ್ನಡ ವ್ಯಾಸಂಗ ಮುಗಿಸಿದ್ದ ನರಸಿಂಹನು ಸಂಸ್ಕೃತ ಪಾಠಶಾಲೆಗೆ ಸೇರಬೇಕೆಂದು ಗುರುಗಳು ಸೂಚಿಸಿದ್ದರು. ಆಗ ಶಾಸ್ತ್ರಿಗಳ ಮನದಲ್ಲಿಯೂ ಅದೇ ನಿರ್ಧಾರವಿತ್ತು. ಈಗ ತರ್ಕವ್ಯಾಸಂಗ ಪೂರೈಸಿದ ಮಗನನ್ನು ಬೆಂಗಳೂರಿನ ಪಾಠಶಾಲೆಗೆ ಕಳುಹುವಂತೆ ಗುರ್ವಾಜ್ಞೆಯಾಗಿತ್ತು. ಇದೂ ಸಹ ಪೂರ್ವಸುಕೃತವೇ. ಬಾಲಕನ ಅದೃಷ್ಟವೇ ಅಲ್ಲವೆ? ಆದರೆ ಶಾಸ್ತ್ರಿಗಳ ಮನಸ್ಸು ಒಮ್ಮೆಯೇ ನಿರ್ಧಾರಕ್ಕೆ ಬರದೆ ಏಕೋ ತವಕಗೊಂಡಿತು. ಹಾಗಾಗಿ ಶ್ರೀಕಂಠಶಾಸ್ತ್ರಿಗಳಿಗೆ ತಮ್ಮ ನಿರ್ಧಾರವನ್ನು ತಿಳಿಸದೆಯೇ ಮನೆಗೆ ಹೊರಟು ಹೋಗಿದ್ದರು.

ಲಕ್ಷಮ್ಮನವರಿಗೂ ಈ ವಿಷಯ ತಿಳಿಯಿತು. ಗುರ್ವಾಜ್ಞೆ ತಮ್ಮ ಅಭ್ಯುದಯಕ್ಕೇ ಆದರೂ ಒಂದು ಯೋಚನೆಗೆ ಕಾರಣವಾಗಿತ್ತು. ಅನೇಕ ಮಕ್ಕಳನ್ನು ಕಳೆದುಕೊಂಡ ಆ ದಂಪತಿಗೆ ಇದ್ದ ಏಕಮಾತ್ರ ಪುತ್ರನೆಂದರೆ ನರಸಿಂಹ. ಅವನು ಸ್ವಲ್ಪಹೊತ್ತು ಆಚೀಚೆ ಹೋದರೂ ಅವರ ಮನಸ್ಸೆಲ್ಲಾ ಅವನಿದ್ದಲ್ಲೇ ಧಾವಿಸುತ್ತಿತ್ತು. ಅವನಿದ್ದರೆ ಏನೋ ಬೆಳಕು, ಇಲ್ಲದಿದ್ದರೆ ಇಲ್ಲ. ಈಗ ಆ ಬಾಲಕನೊಬ್ಬನನ್ನೇ ಬೆಂಗಳೂರಿಗೆ ಕಳುಹಿಸುವುದು ಹೇಗೆ? ಅವನನ್ನು ನೂರಾರು ಮೈಲಿ ದೂರದಲ್ಲಿ ಬಿಟ್ಟಿರಲು ಅವರಿಬ್ಬರಿಗೂ ಮನಸ್ಸೇ ಬರಲಿಲ್ಲ. ವಾತ್ಸಲ್ಯಪೂರ್ಣರಾದ ಆ ತಾಯಿತಂದೆಯರು ಮಗನೆಲ್ಲಿದ್ದರೆ ತಾವಲ್ಲಿರಬೇಕು, ತಾವೆಲ್ಲಿದ್ದರೆ ಮಗನಲ್ಲಿರಬೇಕು ಎಂದು ಬಯಸುತ್ತಿದ್ದರು. ಇಲ್ಲಿಯವರೆಗೂ ಅವರ ಕಣ್ಮುಂದೆಯೇ ಬೆಳೆದ ಬಾಲಕ ಈಗ ಅವರಿಂದ ದೂರ ಸರಿಯಬೇಕೆಂದರೆ



ಅವರೆಂತು ತಾನೇ ಒಪ್ಪಿಯಾರು? ದಂಪತಿಗಳು ಮನೆಯಲ್ಲಿ ಈ ಮಾತುಕತೆಗಳಲ್ಲಿಯೇ ತೊಡಗಿರುವಾಗ ಮತ್ತೊಮ್ಮೆ ಶಾಸ್ತ್ರಿಗಳಿಗೆ ಕರೆ ಬಂದಿತು. ಆದರೆ ಈ ಬಾರಿ ಶ್ರೀಕಂಠಶಾಸ್ತ್ರಿಗಳಿಂದಲ್ಲ, ಗುರುದೇವರಿಂದಲೇ ಕರೆ ಬಂದಿತ್ತು.

ಮಿಶ್ರಭಾವನೆಗಳಿಂದ ತುಂಬಿತುಳುಕುತ್ತಿದ್ದ ಮನಸ್ಸನ್ನು ಹತೋಟಿಗೆ ತಂದುಕೊಂಡು ಮಠದ ಓಲೆಕಾರನೊಂದಿಗೆ ಶಾಸ್ತ್ರಿಗಳು ಗುರುದರ್ಶನಕ್ಕಾಗಿ ಹೊರಟರು.

ಸಾಷ್ಟಾಂಗ ಪ್ರಣಾಮವೆರಗಿದ ಶಾಸ್ತ್ರಿಗಳನ್ನು ಗುರುಗಳು ಆಶೀರ್ವದಿಸಿದರು. ಸಂಕೋಚದಿಂದ ಮುದುಡಿಕೊಂಡು ನಿಂತೇ ಇದ್ದ ಶಾಸ್ತ್ರಿಗಳಿಗೆ ಗುರುಗಳು ಕುಳಿತುಕೊಳ್ಳುವಂತೆ ಸೂಚಿಸಿದರು. ಶ್ರೀಮುಖದಿಂದ ಪ್ರವಹಿಸುವ ವಾಣಿಯನ್ನಾಲಿಸಲು ಶಾಸ್ತ್ರಿಗಳು ನಮ್ರರಾಗಿ ತಲೆಬಾಗಿ ಕುಳಿತರು. ಯೋಗಕ್ಷೇಮ ವಿಚಾರಣಾನಂತರ, ನರಸಿಂಹನ ವಿದ್ಯಾಪ್ರಗತಿಯನ್ನು ಮೆಚ್ಚಿ ನಾಲ್ಕು ಮಾತುಗಳಾಡಿದ ಬಳಿಕ, ಗುರುಗಳು "ಶಾಸ್ತ್ರಿಗಳೇ, ನರಸಿಂಹನು ತರ್ಕಶಾಸ್ತ್ರಾಭ್ಯಾಸವನ್ನು ಪೂರೈಸಿದ್ದಾನೆ. ಮುಂದಿನ ವಿದ್ಯಾಭ್ಯಾಸದ ಬಗ್ಗೆ ಏನು ಆಲೋಚನೆ ಮಾಡಿದ್ದೀರಿ?" ಎಂದು ಕೇಳಿದರು. ಒಂದು ಗಳಿಗೆ ಶಾಸ್ತ್ರಿಗಳಿಗೆ ಏನು ಹೇಳಬೇಕೆಂಬುದೇ ತಿಳಿಯಲಿಲ್ಲ. ತಾವು ಮನೆಯಲ್ಲಿ ಪತ್ನಿಯೊಡನೆ ಚರ್ಚಿಸುತ್ತಿದ್ದ ವಿಷಯಕ್ಕೆ ಇದು ಪೀಠಿಕೆಯೆಂದು ಅವರಿಗೆ ಅರ್ಥವಾಯಿತು. ನಮ್ರವಾಗಿ ನುಡಿದರು, "ಮುಂದಿನ ವಿದ್ಯಾಭ್ಯಾಸ ಕುರಿತು ಇಲ್ಲಿಯವರೆಗೂ ಆಲೋಚನೆಯನ್ನೇ ಮಾಡಿರಲಿಲ್ಲ. ಆದರೆ ಸ್ವಲ್ಪಕಾಲದ ಮೊದಲು ಶ್ರೀಕಂಠಶಾಸ್ತ್ರಿಗಳು ಬೆಂಗಳೂರಿನ ಮಹಾಪಾಠಶಾಲೆಗೆ ಮಗನನ್ನು ಕಳುಹಿಸಬೇಕೆಂಬ ತಮ್ಮ ಆಣತಿಯನ್ನು ತಿಳಿಸಿದರು."

"ಹೌದು, ಅದೇ ನಮ್ಮ ಅಭಿಲಾಷೆ. ನರಸಿಂಹನ ಪ್ರಗತಿ, ಕೀರ್ತಿ, ಶ್ರೇಯಸ್ಸು ಎಲ್ಲವನ್ನೂ ಆಲೋಚಿಸಿಯೇ ನಾವು ಆ ನಿರ್ಧಾರಕ್ಕೆ ಬಂದಿದ್ದೇವೆ. ಆದರೆ ತಂದೆತಾಯಿಯರ ಒಪ್ಪಿಗೆಯಿಲ್ಲದೇ ನಾವೇನನ್ನೂ ಮಾಡಲು ಸಾಧ್ಯವಿಲ್ಲವಲ್ಲಾ" ಹಸನ್ಮುಖದಿಂದ ನುಡಿದರು ಗುರುವರ್ಯರು.

"ತಮ್ಮ ಮಹದಾಜ್ಞೆಯನ್ನು ಪರಿಪಾಲಿಸುವುದೇ ನಮಗೂ, ನರಸಿಂಹನಿಗೂ ಶ್ರೇಯಸ್ಕರವೆಂದು ನಂಬಿದವರು ನಾವು. ಆದರೆ ಒಂದೇ ಒಂದು ಯೋಚನೆಯಿಂದ ನಾವು ಚಿಂತೆಗೀಡಾಗಿದ್ದೇವೆ. ನಮ್ಮದು ಏಕಪುತ್ರ ವಿಚಾರ. ಬಾಲಕನು ನಮ್ಮ ಕಣ್ಮುಂದಿನಿಂದ ದೂರ ಹೋದರೆ ಹೇಗೋ ಏನೋ ಎಂಬ ಭೀತಿಮಿಶ್ರವಾದ ಯೋಚನೆ ನಮ್ಮ ಚಿಂತೆಗೆ ಕಾರಣವಾಗಿದೆ" ಎಂದು ಕಳಕಳಿಯಿಂದ ನುಡಿದರು ಶಾಸ್ತ್ರಿಗಳು.

"ಅದನ್ನು ಕುರಿತು ಆಲೋಚಿಸುವ ಅಗತ್ಯವೇ ಇಲ್ಲವಲ್ಲಾ. ನರಸಿಂಹನಿದ್ದಲ್ಲಿ ನೀವೂ, ನೀವಿದ್ದಲ್ಲಿ ನರಸಿಂಹನೂ ಇರಬೇಕೆಂದು ತಾನೇ ನಿಮ್ಮ ಬಿನ್ನಹ? ನರಸಿಂಹನನ್ನು ಬೆಂಗಳೂರಿನ ಪಾಠಶಾಲೆಗೆ ಸೇರಿಸುವುದನ್ನು ನಿರ್ಧರಿಸಿದ ಬಳಿಕ, ನೀವೂ ಬೆಂಗಳೂರಿನಲ್ಲಿರುವ ವಿಷಯವೂ ನಿರ್ಧರಿಸಲ್ಪಟ್ಟಂತೆಯೇ ಅಲ್ಲವೇ? ಇಲ್ಲಿ ನಿಮ್ಮ ಪ್ರೀತ್ಯಾದರಗಳಲ್ಲಿ ಬೆಳೆದ ಬಾಲಕ ಅಲ್ಲಿಯೂ ಸಹ ನಿಮ್ಮ ಪ್ರೀತ್ಯಾದರಗಳಲ್ಲಿಯೇ ಬೆಳೆಯಲಿ. ಅದಕ್ಕೆ ಯೋಚನೆಯೇಕೆ?" ಗುರುವರ್ಯರ ಈ ನುಡಿಗಳಿಂದ ಶಾಸ್ತ್ರಿಗಳು ಪುಲಕಿತರಾದರು. ಗುರುಗಳು ತಮ್ಮಲ್ಲಿಟ್ಟಿರುವ ಪ್ರೀತಿ, ವಾತ್ಸಲ್ಯಗಳಿಗೆ ಮೂಕರಾಗಿ ಭಕ್ತಿಸಂತೋಷಗಳಿಂದ ಮೈಮರೆತರು. ಕಂಗಳು ಆನಂದಬಾಷ್ಪ ಸುರಿಸಿದವು. "ಧನ್ಯೋಽಸ್ಮಿ" ಎಂದು ನುಡಿದು ಗುರುಗಳಿಗೆ ಸಾಷ್ಟಾಂಗವೆರಗಿ ಮನೆಗೆ ಹಿಂದಿರುಗಿದರು.

ಇತ್ತ ಮನೆಯಲ್ಲಿ ಕೌತುಕದಿಂದ ಕಾಯುತ್ತಿದ್ದ ಲಕ್ಷಮ್ಮನವರು ಹರ್ಷಚಿತ್ತರಾಗಿ ಮನೆಗೆ ಬಂದ ಪತಿಯನ್ನು ಕಂಡು ಉಲ್ಲಸಿತರಾದರು. ಶ್ರೀಗುರುದೇವರ ಆಜ್ಞೆಯನ್ನು ಕೇಳಿ ಆಕೆಯ ಉತ್ಸಾಹಕ್ಕೆ ಎಣೆಯಿಲ್ಲದಾಯ್ತು. ಲಗುಬಗೆಯಿಂದ ಪ್ರಯಾಣಕ್ಕೆ ಸರ್ವಸಿದ್ಧತೆಗಳನ್ನೂ ನಡೆಸಿದರು. ಅವರು ಮೊದಲೇ ಬೆಂಗಳೂರಿನಲ್ಲಿರಬೇಕೆಂದು ಆಶಿಸಿದ್ದರಲ್ಲವೇ? ಈಗ ತಾನಾಗಿಯೇ ಆ ಅವಕಾಶವು ಬಂದಿದ್ದಿತು. ಸಿದ್ಧತೆಗಳು ನಡೆದು ಬಂಧುಬಳಗದಿಂದಲೂ, ಮಿತ್ರರಿಂದಲೂ ನಗರವಾಸಕ್ಕೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ತಿಳಿದುಕೊಂಡದ್ದೂ ಆಯಿತು. ಕ್ಷಣಕ್ಷಣಕ್ಕೂ ಗುರುಗಳ ಅಪಾರ ಅಭಿಮಾನ, ಬಾಲಕನ ಅಭ್ಯುದಯದಲ್ಲಿ ಅವರು ತಳೆದಿರುವ ಆಸಕ್ತಿ, ಇವುಗಳನ್ನು ನೆನೆಯುತ್ತ ದಂಪತಿಗಳು ಮನಸ್ಸಿನಲ್ಲಿಯೂ, ಕಾರ್ಯದಲ್ಲಿಯೂ, ಮಾತಿನಲ್ಲಿಯೂ ಸಹ ಧನ್ಯತೆಯನ್ನು ವ್ಯಕ್ತಪಡಿಸಿದರು.

ಒಂದು ಶುಭದಿನ ಹೆಚ್ಚಿನ ವಿದ್ಯಾಭ್ಯಾಸ ನಿಮಿತ್ತ ಜಗದಂಬೆ ಶಾರದೆಯ ಅನುಗ್ರಹ, ಶ್ರೀಗುರುಗಳ ಆಶೀರ್ವಾದವನ್ನು ಶಿರಸ್ಸಿನಲ್ಲಿ ಧರಿಸಿ ನರಸಿಂಹಶಾಸ್ತ್ರಿಗಳು ತಮ್ಮ ತಾಯಿತಂದೆಯೊಡನೆ ಬೆಂಗಳೂರಿಗೆ ಪ್ರಯಾಣ ಬೆಳೆಸಿದರು.

* * *



# ೧೧. ಶಂಕರಮಠದ ಮಹಾಪಾಠಶಾಲೆಯಲ್ಲಿ

ಬೆಂಗಳೂರಿನ ನಗರ ಜೀವನಕ್ಕೆ ಹೊಂದಿಕೊಳ್ಳುವುದು ಶಾಸ್ತ್ರಿಗಳಿಗೆ ಕಷ್ಟವಾಯಿತು. ಚಿರಪರಿಚಿತವಾದ ಸಸ್ಯಶ್ಯಾಮಲಶೋಭಿತವಾದ, ಪ್ರಾಚೀನ ಸಂಸ್ಕೃತಿಗಾಗರವಾದ ಆ ಶೃಂಗೇರಿಯೆಲ್ಲಿ? ಆಧುನಿಕ ವಾತಾವರಣದ ಯಂತ್ರ ನಾಗರಿಕತೆಯ ಬೆಂಗಳೂರೆಲ್ಲಿ? ಶ್ರೀಶಾರದಾ ಸನ್ನಿಧಿ, ಶ್ರೀಗುರುಸನ್ನಿಧಿಗಳಿಂದ ತೃಪ್ತಿ ಶಾಂತಿಯನ್ನು ಕೊಡುತ್ತಿದ್ದ ಕ್ಷೇತ್ರವೆಲ್ಲಿ? ನೋಡಿದಲ್ಲೆಲ್ಲಾ ಗಿಜಿಗಿಜಿಯೆಂದು ಜನಸಮ್ಮರ್ದದಿಂದ ತುಂಬಿತುಳುಕುತ್ತಿದ್ದ ಈ ಗೊಂದಲದ ಗೂಡೆಲ್ಲಿ? ಸದಾ ತುಂಬಿ ತುಳುಕುತ್ತಾ ಬಳುಕಿ ಹರಿಯುವ ಪಾವನ ತುಂಗೆಯ ಸಮೃದ್ಧಿಯೆಲ್ಲಿ? ಹನಿ ನೀರಿಗೂ ನಲ್ಲಿಗೆ ಕೈಯೊಡ್ಡಬೇಕಾದ ಈ ಬೆಂಗಳೂರೆಲ್ಲಿ? ಶೃಂಗೇರಿಯಲ್ಲಿ ನಿತ್ಯಜೀವನದ ಜಂಜಡಗಳನ್ನೆಲ್ಲಾ ಧೈರ್ಯವಾಗಿ ಎದುರಿಸಿ ಮನಸ್ಸನ್ನು ಸಮಾಧಾನ ಶಾಂತಸ್ಥಿತಿಗೆ ತರಬಹುದಿತ್ತು. ಇಲ್ಲಿ ಮನಸ್ಸು ಇನ್ನೂ ಹೆಚ್ಚಿನ ಗಡಿಬಿಡಿ, ಚಿಂತೆ, ಉದ್ವೇಗ, ಯೋಚನೆಗಳಿಂದ ಪ್ರಕ್ಷುಬ್ಧವಾಗುತ್ತಿತ್ತು. ಕೋಟೆಯೊಳಗಿನಿಂದ ಎಂತಹ ಕಷ್ಟಗಳನ್ನಾದರೂ, ಶತ್ರುಭೀತಿಯನ್ನಾದರೂ ಎದುರಿಸಬಹುದು. ಆದರೆ ಕೋಟೆಯ ಹೊರಗೆ ಬಂದಾಗ ಎಷ್ಟು ರಕ್ಷಕದಳವಿದ್ದರೂ ಸಾಲದು. ಹಾಗೆಯೇ ಆಯಿತು ಶಾಸ್ತ್ರಿಗಳಿಗೆ, ಪೌರ್ವಾತ್ಯ ನಾಗರಿಕತೆಯ ಪ್ರತೀಕವಾಗಿದ್ದ ಶೃಂಗೇರಿಯಿಂದ ಪಾಶ್ಚಾತ್ಯ ನಾಗರಿಕತೆಯ ಮಾದರಿಯಲ್ಲಿ ಬೆಳೆಯುತ್ತಿದ್ದ ಬೆಂಗಳೂರಿಗೆ ಬಂದಾಗ.

ಎಷ್ಟು ದಿನ ತಾನೇ ಹೀಗೆ ಹೊಂದಿಕೊಳ್ಳದೇ ಇರಲು ಸಾಧ್ಯವಾಗುತ್ತದೆ? ಕ್ರಮೇಣ ಮನಸ್ಸು ಬೆಂಗಳೂರಿನ ಪರಿಸ್ಥಿತಿಗೆ ಹೊಂದಿಕೊಳ್ಳುತ್ತಾ ಬಂತು. ಅಲ್ಲಿಯೂ ಸಹ ಅವರಿಗೆ ಇಷ್ಟಮಿತ್ರರು ದೊರಕಿದರು. ಇದ್ದುದರಲ್ಲಿಯೇ ಅನುಕೂಲಗಳನ್ನು ಕಲ್ಪಿಸಿಕೊಂಡು ಶಂಕರಮಠ ಮುಂತಾದ ಸ್ಥಳಗಳಲ್ಲಿ ಕಾಲವನ್ನು ಕಳೆಯುತ್ತಿದ್ದರು. ಲಕ್ಷಮ್ಮನವರಿಗೂ ಬೆಂಗಳೂರಿಗೆ ಹೊಂದಿಕೊಳ್ಳಲು ಕೆಲ ಸಮಯ ಬೇಕಾಯಿತು. ಆದರೆ ಅವರಿಗೆ ನರಸಿಂಹನೇ ಸರ್ವಸ್ವವಾಗಿದ್ದುದರಿಂದ ಇತರ ಯಾವ ಯೋಚನೆಗಳೂ ಬರಲೇ ಇಲ್ಲ. ಅವರು ಮಗನ ಲಾಲನೆ ಪಾಲನೆಗಳಲ್ಲೇ ಮುಳುಗಿದ್ದರು. ಅವನ ವಿದ್ಯಾಭ್ಯಾಸ, ಆರೈಕೆ ಇವೇ ಅವರ ಪ್ರಪಂಚವಾಗಿತ್ತು.

ಶೃಂಗೇರಿಯಲ್ಲಿ ನಡೆಯುತ್ತಿದ್ದಂತೆಯೇ ಇಲ್ಲಿಯೂ ಸಹ ಪೇಟೆಗೆಂದು ಹೊರಟ ನರಸಿಂಹನು ಮೂಕಪಂಚಶತಿಯನ್ನೋ, ಆನಂದಸಾಗರ

ಸ್ತವವನ್ನೋ ಹೇಳಿಕೊಳ್ಳುತ್ತಾ ಬಲುದೂರ ನಡೆದುಕೊಂಡು ಹೋಗಿ ಬಿಡುತ್ತಿದ್ದನು. ಹೀಗೆ ಮೈಮರೆತು ಸಾಗುವಾಗ ಬಸ್ಸುಗಾಡಿಗಳಿಗೆ ಸಿಕ್ಕಿಕೊಳ್ಳುವ ಸಂದರ್ಭಗಳು ಹೆಚ್ಚಾಗಿದ್ದುದರಿಂದ ಮಗನ ಯೋಗಕ್ಷೇಮವನ್ನೇ ಸರ್ವದಾ ಚಿಂತಿಸುತ್ತಿದ್ದ ಲಕ್ಷಮ್ಮನವರು ಮಗನನ್ನು ಪೇಟೆಗೆ ಕಳುಹಿಸುತ್ತಲೇ ಇರಲಿಲ್ಲ. ಅದಕ್ಕೇ ಬೇರೆಯ ವ್ಯವಸ್ಥೆ ಮಾಡಿಕೊಂಡಿದ್ದರು. ಮಗನ ಯೋಗಕ್ಷೇಮವೇ ಅವರಿಗೆ ಸರ್ವಸ್ವವಾಗಿದ್ದಿತು.

ಬೆಂಗಳೂರಿಗೆ ಬಂದ ನಂತರ ನರಸಿಂಹನಿಗೂ ಸ್ವಲ್ಪಕಾಲ ತಂದೆಯ ಅನುಭವವೇ ಆಯಿತು. ಸದಾ ಜನಸಮ್ಮರ್ದದಿಂದ ದೂರವಿರಲು ಬಯಸುತ್ತಿದ್ದವನಿಗೆ ಈಗ ಜನಸಮ್ಮರ್ದದ ಮಧ್ಯದಲ್ಲಿಯೇ ಇರಬೇಕಾದ ಸಂದರ್ಭವೊದಗಿತು. ತನಗೆ ಚಿರಪರಿಚಿತವಾಗಿದ್ದ ಶ್ರೀಶಾರದಾ ಸಾನ್ನಿಧ್ಯ, ಶ್ರೀಗುರುಸಾನ್ನಿಧ್ಯ, ದೇವಾಲಯಗಳು, ವಿಪಿನದ ಏಕಾಂತ ಸ್ಥಳಗಳು ಬೆಂಗಳೂರು ನಗರದಲ್ಲೆಲ್ಲಿ ದೊರೆಯಬೇಕು? ಆದರೆ ಅವನು ನಗರಜೀವನದ ಎಲ್ಲ ಅಸೌಕರ್ಯಗಳನ್ನೂ ನಿವಾರಿಸಿಕೊಂಡು ತನ್ನ ವಿದ್ಯಾಭ್ಯಾಸದಲ್ಲಿ ನಿರತನಾದನು. ಬೆಂಗಳೂರಿನಂತಹ ಆಧುನಿಕತೆಯ ವಾತಾವರಣದ ನಗರದಲ್ಲಿದ್ದೂ ಸಹ ನಾಗರಿಕತೆಯ ಯಾವ ಪ್ರಲೋಭನೆಗಳಿಗೂ ವಶನಾಗದೇ ತನ್ನ ಗುರಿಯತ್ತ ನಡೆದನು. ಸದಾಚಾರ ಸಂಪನ್ನರೂ, ಶಾಸ್ತ್ರಗಳಲ್ಲಿ ಪಾರಂಗತರೂ ಆಗಿದ್ದ ಉಪಾಧ್ಯಾಯರ ಮಾರ್ಗದರ್ಶನದಲ್ಲಿ ಅಹರ್ನಿಶಿ ತನ್ನ ಅಧ್ಯಯನವನ್ನು ನಡೆಸುತ್ತಾ ಬಂದನು, ಜ್ಞಾನಪಿಪಾಸೆಯನ್ನು ತಣಿಸುವುದರಲ್ಲಿಯೇ ಮಗ್ನನಾದನು.

ಪಾಠಶಾಲೆಯಲ್ಲಿ ತರಗತಿಗಳು ಮುಕ್ತಾಯವಾದ ಬಳಿಕ ಆ ಆವರಣ ದಲ್ಲಿಯೇ ಇದ್ದ ಯಾವುದಾದರೂ ಮರದ ನೆರಳು, ಬಳಿಕ ಮನೆ ಇವು ನರಸಿಂಹನ ವ್ಯಾಸಂಗ ಸ್ಥಳಗಳಾಗಿದ್ದವು. ಮನೆಯಲ್ಲಿಯೂ ಓದು, ಪಾಠಶಾಲೆ ಯಲ್ಲಿಯೂ ಓದು, ಎಲ್ಲಿ ಹೋದರೂ ಅಧ್ಯಯನದ ವಿಷಯವನ್ನು ಕುರಿತೇ ಆಲೋಚನೆ. ಶೃಂಗೇರಿಯಲ್ಲಿದ್ದಂತೆ ಇಲ್ಲಿಯೂ ಮಿತ್ರರಿದ್ದರು. ಅವರೂ ಸಹ ಸಂದೇಹ, ಸಂಶಯಗಳನ್ನು ಕುರಿತು ನರಸಿಂಹನಲ್ಲಿ ಚರ್ಚಿಸಿ ತಮ್ಮ ಅನುಮಾನಗಳನ್ನು ಪರಿಹರಿಸಿಕೊಳ್ಳುತ್ತಿದ್ದರು. ಇಲ್ಲಿಯೂ ಸಹ ಜ್ಞಾನಬೋಧಕ ರಾಗಿದ್ದ ಉಪಾಧ್ಯಾಯರಿಗೂ, ಸತೀರ್ಥ್ಯರಿಗೂ ನರಸಿಂಹನು ಅಚ್ಚುಮೆಚ್ಚಾದನು. ಮಹಾಮಹೋಪಾಧ್ಯಾಯ ವೈದ್ಯನಾಥ ಶಾಸ್ತ್ರಿಗಳು ಪೂರ್ವಮೀಮಾಂಸಾ ಶಾಸ್ತ್ರಕ್ಕೂ, ಮಹಾಮಹೋಪಾಧ್ಯಾಯ ವೆಳ್ಳೂರು ಸುಬ್ರಹ್ಮಣ್ಯ ಶಾಸ್ತ್ರಿಗಳು – ಇವರು ಶ್ರೀ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರಲ್ಲಿ ವ್ಯಾಸಂಗ



ಮಾಡಿದ್ದವರು – ಉತ್ತರ ಮೀಮಾಂಸಾ ಶಾಸ್ತ್ರಕ್ಕೂ ಪ್ರಾಧ್ಯಾಪಕರಾಗಿದ್ದರು. ಇವರುಗಳ ನೇತೃತ್ವದಲ್ಲಿ ನರಸಿಂಹಶಾಸ್ತ್ರಿಯ ಅಧ್ಯಯನ ಮುಂದುವರೆಯುತ್ತ ಬಂದಿತು. ತರಗತಿಯಲ್ಲಿ ಎಲ್ಲರಿಗಿಂತಲೂ ಕಿರಿಯವನಾಗಿದ್ದ ಈ ವಿದ್ಯಾರ್ಥಿಯು ಅಪೂರ್ವ ಪ್ರತಿಭಾವಂತನಾಗಿದ್ದನು. ಅತ್ಯಂತ ವೇಗವಾಗಿ ಕಠಿಣವಾದ ಪಾಠಗಳನ್ನೂ ಕಲಿಯುತ್ತಿದ್ದ ಆತನ ಮೇಧಾಶಕ್ತಿ ಉಪಾಧ್ಯಾಯರಿಗೆ ಆಶ್ಚರ್ಯ ವನ್ನುಂಟುಮಾಡುತ್ತಿತ್ತು. ಹಾಕಿಕೊಂಡಿದ್ದ ಕಾಲಮಿತಿಗಿಂತ ಮೊದಲೇ ಪಾಠಪ್ರವಚನಗಳು ಮುಗಿದು ನರಸಿಂಹನಿಗೆ ಪೂರ್ವಮೀಮಾಂಸಾ ಶಾಸ್ತ್ರವು ಬಲುಬೇಗ ಹೃದ್ಗತವಾಯಿತು. ಈ ವಿದ್ಯಾರ್ಥಿಯ ಉನ್ನತಿಯ ವಿಷಯದಲ್ಲಿ ಶ್ರೀ ಸುಬ್ರಹ್ಮಣ್ಯಶಾಸ್ತ್ರಿಗಳ ಅಭಿಮಾನಕ್ಕೆ ಎಲ್ಲೆಯೇ ಇರಲಿಲ್ಲ. ಅವನ ಮೇಧಾಶಕ್ತಿ, ಆಳವಾದ ಪಾಂಡಿತ್ಯ, ಕಲಿಯುವುದರಲ್ಲಿನ ಶ್ರದ್ಧಾಸಕ್ತಿಗಳು, ನಡೆನುಡಿಗಳನ್ನು ಮನಸಾ ಮೆಚ್ಚಿಕೊಂಡಿದ್ದರು ಅವರು. ಮುಂದೆ ನರಸಿಂಹಶಾಸ್ತ್ರಿಯು ದಕ್ಷಿಣಾಮ್ನಾಯ ಪೀಠಕ್ಕೆ ನಿಯೋಜಿತನಾದಾಗ ಅವರಿಗಾದ ಆನಂದ ಅಷ್ಟಿಷ್ಟಲ್ಲ. ಅವರು ಆ ಪೀಠಕ್ಕೆ ನರಸಿಂಹಶಾಸ್ತ್ರಿಯೇ ಯೋಗ್ಯ ವಟುವೆಂದೂ, ಅವರ ತಪಶ್ಶಕ್ತಿಯಿಂದ ಆ ಪೀಠದ ಕೀರ್ತಿಗೌರವಗಳು ಹೆಚ್ಚುವುವೆಂದೂ ಆತ್ಮೀಯತೆ ಯಿಂದ ನುಡಿದಿದ್ದರು. ವಿದ್ಯಾಗುರುಗಳ ಆಶೀರ್ವಾದ, ಜಗದ್ಗುರುಗಳ ಅನುಗ್ರಹ ದೊರಕುತ್ತಿದ್ದಂತೆಯೇ ಶ್ರೀಶಾರದೆಯೂ ಒಲಿದಳು. " ಸರ್ವಜ್ಞಂ ಶ್ರೀನೃಸಿಂಹಂ ಕುರು ಶಿವದಯಿತೇ" ಎಂದು ಜಗದ್ಗುರುವರ್ಯರು ಜಗದಂಬೆಯನ್ನು ಪ್ರಾರ್ಥಿಸಿದ್ದು ವ್ಯರ್ಥವಾಗುವುದುಂಟೇ?

ಶ್ರೀ ಗುರುವರ್ಯರಿಗೆ ಆಗಾಗ ನರಸಿಂಹನ ಯೋಗಕ್ಷೇಮ, ವಿದ್ಯಾಪ್ರಗತಿ ಇವುಗಳ ವಿಷಯವಾಗಿ ವರದಿ ಹೋಗುತ್ತಿತ್ತು. ತಮ್ಮ ಶಿಷ್ಯನ ಅಭ್ಯುದಯವನ್ನು ಕೇಳಿ ಶ್ರೀಗುರುವರ್ಯರು ತೃಪ್ತಿ ಸಮಾಧಾನಗಳನ್ನು ಹೊಂದುತ್ತಿದ್ದರು. ಹರ್ಷ ಸಂತೋಷಗಳನ್ನು ವ್ಯಕ್ತ ಪಡಿಸುತ್ತಿದ್ದರು.

* * *

# ೧೨. ಶಿಷ್ಯ ಪರಿಗ್ರಹಣದ ನಿರ್ಧಾರ

ಕ್ರಿಸ್ತಶಕ ೧೯೧೧ ರಲ್ಲಿ ತಮ್ಮ ದಕ್ಷಿಣ ದೇಶದ ಸಂಚಾರದಿಂದ ಹಿಂದಿರುಗಿದ್ದ ಶ್ರೀನೃಸಿಂಹ ಭಾರತೀ ಸ್ವಾಮಿಗಳವರ ದೇಹಾರೋಗ್ಯವು ಅಷ್ಟು ತೃಪ್ತಿಕರವಾಗಿರಲಿಲ್ಲ. ಸಂಚಾರಾಂತ್ಯದಲ್ಲಿ ನಂದಿಬೆಟ್ಟಕ್ಕೆ ಆಗಮಿಸಿದ ಗುರುಗಳು ಅಲ್ಲಿನ ಅಮೃತ ಸರೋವರದಲ್ಲಿ ಸ್ನಾನಗೈದರು. ನೀರಿನಲ್ಲಿಯೇ ಬಹಳ ಸಮಯವಿದ್ದು ಹೊರಬಂದ ಗುರುಗಳಿಗೆ ಶೀತದಿಂದ ಹೃದಯ ಶೂಲೆ ಆರಂಭವಾಯಿತು. ನಾಲ್ಕು ವರ್ಷಗಳ ಕಾಲ ಉಷ್ಣ ದೇಶಗಳ ಸಂಚಾರಮಾಡಿ, ಬಳಿಕ ಅತ್ಯಂತ ಶೀತಲವಾದ ಅಮೃತ ಸರೋವರದ ಜಲದಲ್ಲಿ ಸ್ನಾನ ಮಾಡಲಾಗಿ ದೇಹ ಪ್ರಕೃತಿಗೆ ವಿರೋಧವಾಯಿತು. ಆಗಾಗ ಆಲಸ್ಯ ವುಂಟಾಗುತ್ತಿತ್ತು. ದೇಹದಲ್ಲೆಲ್ಲಾ ಬಹಳ ಯಾತನೆಯುಂಟಾಗುತ್ತಿತ್ತು. ಆದರೆ ಗುರುಗಳು ಇದಾವುದನ್ನೂ ತೋರ್ಪಡಿಸಿಕೊಳ್ಳುತ್ತಿರಲಿಲ್ಲ. ಔಷಧಿ, ಪಥ್ಯವನ್ನೂ ಸಹ ಸ್ವೀಕರಿಸುತ್ತಿರಲಿಲ್ಲ. ಹತ್ತಿರದಲ್ಲಿರುತ್ತಿದ್ದ ಆಪ್ತವರ್ಗದವರು ಅವರ ದೇಹ ಯಾತನೆ ಪಡುವುದನ್ನು ನೋಡಿ ಅನುಕಂಪ ಪಡಬಹುದಿತ್ತೇ ವಿನಾ ಏನನ್ನೂ ಮಾಡಲಾಗುತ್ತಿರಲಿಲ್ಲ. ಇಷ್ಟಾದರೂ ಗುರುಗಳು ಸ್ನಾನಾದಿ ಕರ್ಮಗಳನ್ನೂ, ಪೂಜಾದಿ ಅನುಷ್ಠಾನಗಳನ್ನೂ ಬಿಡಲಿಲ್ಲ. ಕ್ಲುಪ್ತಕಾಲದಲ್ಲಿ ಪ್ರತಿಕಾರ್ಯವನ್ನೂ ನಿಯಮಬದ್ಧವಾಗಿ ನಡೆಸಿಕೊಂಡು ಹೋಗುತ್ತಿದ್ದರು.

ವರ್ಷ ೧೯೧೨ರ ಹೊತ್ತಿಗೆ ವ್ಯಾಧಿಯು ಪ್ರಬಲವಾಯಿತು. ಶೈತ್ಯದೋಷದಿಂದ ಗುರುಗಳು ಕೃಶರಾಗುತ್ತ ಬಂದರು. ಜೀರ್ಣವಾಗುತ್ತ ಬಂದ ಶರೀರವನ್ನು ಕಳಚಿಹಾಕಿ ಸ್ವತಂತ್ರರಾಗಬೇಕೆಂದು ಅವರಿಗೆ ಪದೇ ಪದೇ ಪ್ರೇರಣೆಯಾಗುತ್ತಿತ್ತು. ಇದಕ್ಕೆ ಪೂರ್ವಭಾವಿಯಾಗಿ ಗುರುಗಳು ಸ್ವತಃ ತಾವೇ ಪಾಠ ಹೇಳುತ್ತಿದ್ದುದನ್ನು ನಿಲ್ಲಿಸಿದರು. ಶಿಷ್ಯರಿಗೆ ಪಾಠ ಹೇಳುವುದರಲ್ಲಿ ಯಾವಾಗಲೂ ಉತ್ಸಾಹಿಗಳಾಗಿದ್ದ ಗುರುಗಳು ಪಾಠ ಹೇಳುವುದನ್ನು ನಿಲ್ಲಿಸಿದುದು ಶಿಷ್ಯರಿಗೆಲ್ಲಾ ಚಿಂತೆಯುಂಟು ಮಾಡಿತ್ತು. ಸಮೀಪವರ್ತಿಗಳಿಗೆ ಆತಂಕ ಮೂಡಿತ್ತು. ಗುರುಗಳು ಹೆಚ್ಚು ಹೆಚ್ಚು ಅಂತರ್ಮುಖಿಗಳಾಗುತ್ತಾ ಬಂದರು. ಗುರುಗಳು ಬೇಗನೆ ಗುಣಮುಖರಾಗಲೆಂದು ಶಿಷ್ಯರೆಲ್ಲಾ ದೇವರಲ್ಲಿ ಮೊರೆಯಿಡುತ್ತಿದ್ದರೂ ಮನಸ್ಸಿನಲ್ಲಿ ಅವರಿಗೂ ಆತಂಕವಾಗಿ, ಹರ್ಷ ಸಂತೋಷಗಳು ಕಡಿಮೆಯಾಗುತ್ತಾ ಬಂದವು.



ಗುರುದೇವರು ಉದ್ದೇಶಿಸಿದ್ದ ಕಾರ್ಯಗಳೆಲ್ಲವೂ ಜಯಪ್ರದವಾಗಿ ನಡೆದಿದ್ದವು. ತಮ್ಮೆಲ್ಲ ಕೆಲಸಗಳೂ ಪೂರೈಸಿದ ಬಳಿಕ ತಾವೇಕೆ ದೇಹಬಂಧನದಲ್ಲಿರಬೇಕು? ಶೃಂಗೇರಿಯಲ್ಲಿಯೂ, ಬೆಂಗಳೂರಿನಲ್ಲಿಯೂ ಸಂಸ್ಕೃತ ಪಾಠಶಾಲೆಗಳ ಆರಂಭ, ದೇಶಾದ್ಯಂತ ಪ್ರತಿವರ್ಷವೂ ಶ್ರೀಶಂಕರ ಜಯಂತ್ಯುತ್ಸವದ ಆಯೋಜನೆ, ಕಾಲಟೀ ಕ್ಷೇತ್ರದ ಪರಿಷ್ಕರಣೆ, ಅಲ್ಲಿ ಶ್ರೀಶಾರದಾ ಮತ್ತು ಆಚಾರ್ಯ ಶಂಕರರ ದೇವಾಲಯಗಳ ಸ್ಥಾಪನೆ, ಶ್ರೀಶಂಕರರ ಗ್ರಂಥಗಳ ಸಂಪಾದನೆ, ಸಂಶೋಧನೆ, ಪುನರ್ಮುದ್ರಣ ಹೀಗೆ ತಾವು ಸಂಕಲ್ಪಿಸಿದ್ದ ಕಾರ್ಯಗಳೆಲ್ಲವೂ ತೃಪ್ತಿಕರವಾಗಿ, ಯಶಸ್ವಿಯಾಗಿ ನೆರವೇರಿದ್ದವು.

ಸಂಚಾರದಿಂದ ಹಿಂದಿರುಗಿದಾಗಲೇ ಶ್ರೀಶಾರದಾ ಸನ್ನಿಧಿಯಲ್ಲಿ ಅಂಜಲೀ ಬದ್ಧರಾಗಿ "ಇತಃ ಪರಂ ಕಿಂ ಕರಣೀಯಮಸ್ತಿ?" ಎಂದು ಜಗದಂಬೆಯನ್ನು ಪ್ರಾರ್ಥಿಸಿದ್ದರು. ತಮ್ಮ ಕೆಲಸಗಳೆಲ್ಲವೂ ಮುಗಿದು ಇನ್ನು ಮಾಡುವುದೇನಿದೆ? ಶಿಷ್ಯ ಪರಿಗ್ರಹಣ ತಾನೇ? ಹೌದು ಉಳಿದಿದ್ದುದು ಅದೊಂದೇ ಕೆಲಸ. ಅದನ್ನೂ ಸಹ ಅವರು ಬಹಳ ಹಿಂದೆಯೇ ಮಾಡಿಬಿಟ್ಟಿದ್ದರು. ಮನಃಪೂರ್ವಕವಾಗಿಯೂ, ಹೃತ್ಪೂರ್ವಕವಾಗಿಯೂ, ಆತ್ಮಪೂರ್ವಕವಾಗಿಯೂ ತಮ್ಮ ಉತ್ತರಾಧಿಕಾರಿಯನ್ನು ನಿಯಮಿಸಿಬಿಟ್ಟಿದ್ದರು. ಉಳಿದಿದ್ದೆಂದರೆ ತಮ್ಮ ನಿರ್ಧಾರವನ್ನು ಪ್ರಕಟಪಡಿಸಿ ಶಿಷ್ಯ ಪರಿಗ್ರಹಣ ಕಾರ್ಯವನ್ನು ಲೋಕಕ್ಕೆ ತಿಳಿಯುವಂತೆ ಮಾಡುವುದು. ತಮ್ಮ ಆಂತರ್ಯವನ್ನು ಹೊರಗೆಡಹಲು ಸೂಕ್ತ ಕಾಲ ಬೇಕಲ್ಲವೇ? ಅದಕ್ಕಾಗಿಯೇ ಕಾಯುತ್ತಿದ್ದ ಗುರುಗಳು ತಮ್ಮ ನಿರ್ಧಾರವನ್ನು ಪ್ರಕಟಪಡಿಸಲು ಇದೇ ಸೂಕ್ತ ಸಮಯವೆಂದು ತಮ್ಮ ಆಪ್ತ ಕಾರ್ಯಭಾರಿಯಾಗಿದ್ದ ಶ್ರೀಕಂಠಶಾಸ್ತ್ರಿಗಳಿಗೆ ಕರೆಕಳುಹಿಸಿದರು.

ಗುರುಗಳಿಗೆ ಅತ್ಯಂತ ಆಪ್ತರೂ, ಗುರುಸೇವೆಯಲ್ಲಿ ನಿಷ್ಠರೂ ಮತ್ತು ಗುರುವರ್ಯರ ಯೋಗಕ್ಷೇಮದಲ್ಲಿ ಸದಾ ನಿರತರೂ ಆಗಿದ್ದ ಶ್ರೀಕಂಠಶಾಸ್ತ್ರಿಗಳಿಗೆ ಗುರುಗಳ ಅನಾರೋಗ್ಯದಿಂದ ಬಹಳ ಯೋಚನೆಯಾಗಿತ್ತು. ಎಷ್ಟು ಪ್ರಾರ್ಥಿಸಿದರೂ ಔಷಧಿ ಪಥ್ಯಗಳನ್ನು ಸ್ವೀಕರಿಸಲು ಗುರುಗಳು ಒಪ್ಪದಿದ್ದುದರಿಂದ ಶಾಸ್ತ್ರಿಗಳು ಖಿನ್ನರಾಗಿದ್ದರು. ಇದಲ್ಲದೇ ಪೀಠಕ್ಕೆ ಯೋಗ್ಯರಾದ ಉತ್ತರಾಧಿಕಾರಿಯ ನೇಮಕ ವಿಷಯವಾಗಿಯೂ ಶಾಸ್ತ್ರಿಗಳಿಗೆ ಪ್ರಬಲವಾದ ಯೋಚನೆಯಿತ್ತು.

ನಮಸ್ಕರಿಸಿ ನಮ್ರರಾಗಿ ನಿಂತ ಶಾಸ್ತ್ರಿಗಳಿಗೆ ಕುಳಿತುಕೊಳ್ಳುವಂತೆ ಸೂಚಿಸಿದ ಗುರುಗಳು ತಮ್ಮ ಪ್ರಯಾಣ ಸನ್ನಿಹಿತವಾಗಿರುವುದರಿಂದ ಶಿಷ್ಯ ಪರಿಗ್ರಹಣ ಮಾಡಿ ಅವರಿಗೆ ಸಂಪೂರ್ಣ ಭಾರವನ್ನು ವಹಿಸಿ, ತಾವು ಆ ಸಂಬಂಧದಿಂದ

ನಿವೃತ್ತರಾಗಬೇಕೆಂಬ ಅಭಿಪ್ರಾಯವಿದೆಯೆಂದೂ, ಇನ್ನು ಹೆಚ್ಚು ದಿನ ದೇಹಧಾರಣೆ ಮಾಡಲು ಸಾಧ್ಯವಿಲ್ಲವೆಂದೂ ತಿಳಿಸಿದರು. ಶಾಸ್ತ್ರಿಗಳು ಮೌನವಾಗಿ ದುಃಖಿತರಾಗಿ ಕುಳಿತಿರಲು ಗುರುಗಳು ತಮ್ಮ ಮಾತನ್ನು ಮುಂದುವರೆಸಿ, ತಮ್ಮ ಸ್ಥಾನಕ್ಕೆ ಬರಲು ಶ್ರೀನರಸಿಂಹಶಾಸ್ತ್ರಿಗಳೇ ಅರ್ಹರೆಂದು ತಾವು ಮನದಲ್ಲಿ ಹಲವಾರು ವರ್ಷಗಳಿಂದಲೇ ತೀರ್ಮಾನಿಸಿ ಕೊಂಡಿರುವುದಾಗಿಯೂ, ಅವರಿಗೇ ಸಂನ್ಯಾಸ ದೀಕ್ಷೆ ನೀಡಿ ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಲು ನಿಷ್ಕರ್ಷಿಸಿಕೊಂಡಿರುವುದಾಗಿ ನುಡಿದರು. ಗುರುಗಳ ಅನಾರೋಗ್ಯದಿಂದ ಮೊದಲೇ ಚಿಂತಿತರಾಗಿದ್ದ ಶಾಸ್ತ್ರಿಗಳು ಈಗ ಇನ್ನೂ ಭೀತರಾದರು. ತಮ್ಮ ಅಂತ್ಯ ಸಮೀಪವಾಯಿತೆಂದು ಗುರುಗಳೇ ನುಡಿಯುತ್ತಿರುವಾಗ ಅದನ್ನು ನಂಬದಿರುವುದು ಹೇಗೆ ಸಾಧ್ಯ?

ಗುರುಗಳ ಇಚ್ಛೆಯಂತೆ ಉತ್ತರಾಧಿಕಾರಿಯ ವಿಚಾರವಾಗಿ ಗುರುಗಳ ನಿರ್ಧಾರವನ್ನು ಮೈಸೂರಿನ ಮಹಾರಾಜರೂ, ಗುರುಭಕ್ತರೂ, ಗುರುಗಳಿಗೆ ಆಪ್ತತಮರೂ ಆಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಶ್ರುತಪಡಿಸಿ, ಬೆಂಗಳೂರಿನಿಂದ ಶ್ರೀನರಸಿಂಹಶಾಸ್ತ್ರಿಯವರನ್ನು ಕರೆತರಲು ಕುಣಿಗಲ್ ರಾಮಶಾಸ್ತ್ರಿಗಳು ಹೊರಟರು. ಆಗ ಬೆಂಗಳೂರಿನಲ್ಲಿಯೇ ವಸತಿ ಮಾಡಿದ್ದ ಮಹಾರಾಜರು ಗುರುಗಳ ದೇಹಸ್ಥಿತಿಯನ್ನು ತಿಳಿದು ಬಹಳ ವ್ಯಸನಗೊಂಡು, ಅವರ ಆಜ್ಞೆಯನ್ನು ಶಿರಸಾವಹಿಸಿ ನಡೆಸಿಕೊಡಲು ಸಿದ್ಧರಾಗಿರುವುದಾಗಿ ವರ್ತಮಾನ ಕಳುಹಿಸಿದರು.[೪]

ಅಷ್ಟರಲ್ಲಿ ಗುರುವರ್ಯರ ಆರೋಗ್ಯ ಇನ್ನೂ ಕೆಡುತ್ತಾ ಬಂತು. ಕೆಮ್ಮು ಹೆಚ್ಚುತ್ತಾ ಬಂದು, ಮಾತನಾಡಲು ಪ್ರತಿಬಂಧಕವಾಗುತ್ತಿತ್ತು. ಈ ನಡುವೆ ರಾಜ್ಯದ ಮುಖ್ಯ ವೈದ್ಯಾಧಿಕಾರಿಗಳು ಬಂದು ಗುರುಗಳ ದೇಹಾರೋಗ್ಯವನ್ನು ಪರೀಕ್ಷಿಸಿ, ದೇಹಾಂತ್ಯಕಾಲವು ಸಮೀಪವಾಗಿಯೇ ಇರಬಹುದೆಂದು ಸೂಚಿಸಿ, ಶಿಷ್ಯವರ್ಗದವರಿಗೆ ಭೀತಿಯನ್ನುಂಟುಮಾಡಿದ್ದರು. ಇದಕ್ಕೆ ಸರಿಯಾಗಿ ಫಾಲ್ಗುಣ ಬಹುಳ ತ್ರಯೋದಶೀ ರಾತ್ರಿ ಹತ್ತು ಘಂಟೆಗೆ ಪ್ರಾರಂಭವಾದ ಕೆಮ್ಮು ಒಂದು ಘಂಟೆಯವರೆಗೂ ಇದ್ದು, ಮೂರು ಘಂಟೆಗಳ ಕಾಲ ಸತತವಾಗಿ ತೊಂದರೆಯನ್ನು ಕೊಟ್ಟಿತ್ತು. ಬೆಂಗಳೂರಿನಿಂದ ನರಸಿಂಹಶಾಸ್ತ್ರಿಗಳು

೪ ಶಿಷ್ಯ ಪರಿಗ್ರಹಣದ ವಿಷಯವಾಗಿ ಗುರುವರ್ಯರು ಮಹಾರಾಜರಿಗೆ ಮೊದಲೇ ಪತ್ರ ಬರೆದಿದ್ದು ಅದರಲ್ಲಿ ಶ್ರೀನರಸಿಂಹಶಾಸ್ತ್ರಿಯವರೇ ತಮ್ಮ ಉತ್ತರಾಧಿಕಾರಿಯೆಂದು ತಿಳಿಸಿದ್ದರು. ಈ ವಿಷಯ ಶ್ರೀಕಂಠಶಾಸ್ತ್ರಿಗಳಿಗೆ ಅನಂತರ ತಿಳಿಯಿತು.



ಬರುವುದರೊಳಗೇ ಗುರುಗಳು ಮುಕ್ತರಾಗಬಹುದೆಂಬ ಶಂಕೆ ಎಲ್ಲರಲ್ಲಿಯೂ ಮೂಡಿತು. ಈ ಮಧ್ಯೆ ಕುಣಿಗಲ್ ರಾಮಶಾಸ್ತ್ರಿಗಳಿಗೂ ತ್ವರೆಯಾಗಿ ಬರುವಂತೆ ಪತ್ರವೊಂದನ್ನು ಕಳುಹಿಸಲಾಗಿತ್ತು. ರಾಮಶಾಸ್ತ್ರಿಗಳು ನರಸಿಂಹಶಾಸ್ತ್ರಿಗಳನ್ನು ಕರೆತರುವುದು ಎಷ್ಟು ಶೀಘ್ರವೆಂದರೂ, ಮೂರು ದಿವಸಗಳಾದರೂ ಬೇಕಾಗುವುದೆಂದೂ, ಅಷ್ಟರಲ್ಲಿ ಶಿಷ್ಯ ಪರಿಗ್ರಹಣ ಮಾಡಬೇಕಾದ ಸಂದರ್ಭ ಬಂದಲ್ಲಿ ಸಮೀಪವರ್ತಿಗಳಲ್ಲಿ ಅರ್ಹರಾಗಿರುವವರು ಯಾರಾದರೊಬ್ಬರನ್ನು ನಿರ್ದೇಶಿಸಿರುವುದು ಅನುಕೂಲವೆಂದು ಶ್ರೀಕಂಠಶಾಸ್ತ್ರಿಗಳು ಸೂಚಿಸಿದರು. ಗುರುಗಳಿಗೆ ಅದು ಇಷ್ಟವಿರದಿದ್ದರೂ ಒತ್ತಾಯ ಹೆಚ್ಚಾದಾಗ, ಶಾಸ್ತ್ರಿಗಳನ್ನು ಕುರಿತು,

"ಅರ್ಹರಾರು?" ಎಂದು ಕೇಳಿದರು.

ಶಾಸ್ತ್ರಿಗಳು ಒಬ್ಬರ ಹೆಸರನ್ನು ಸೂಚಿಸಲು

"ಮಂದಮತಿ ಅವನು, ಅಕ್ಷರಸ್ಥನಾಗಲಾರ" ಎಂದು ನುಡಿದರು ಗುರುಗಳು.

ಇನ್ನೊಂದು ಹೆಸರನ್ನು ಶಾಸ್ತ್ರಿಗಳು ಸೂಚಿಸಿದಾಗ, ಪರಿಶುದ್ಧವಾದ ಆಚಾರ್ಯರ ಸ್ಥಾನದಲ್ಲಿ ಅವನನ್ನು ನಿಯುಮಿಸುವುದಕ್ಕಿಂತಲೂ, ಆ ಸ್ಥಾನವನ್ನು ಶೂನ್ಯವಾಗಿ ಬಿಡುವುದೇ ಲೇಸೆಂಬ ಉತ್ತರ ಬಂದಿತು. ಶಾಸ್ತ್ರಿಗಳು ಮೂರನೆಯ ಹೆಸರನ್ನು ಹೇಳಿದಾಗ ಯಾವ ಅಭಿಪ್ರಾಯವನ್ನೂ ವ್ಯಕ್ತ ಪಡಿಸದೇ, "ಪೂರ್ವ ನಿರ್ದಿಷ್ಟನಾದ ನರಸಿಂಹಶಾಸ್ತ್ರಿಯನ್ನು ರಾಮಶಾಸ್ತ್ರಿಯು ಕರೆತರುವನಷ್ಟೆ? ಅವರು ಬರಲಿ" ಎಂದು ನುಡಿದು ತಮಗೆ ಆನಂದದಾಯಕವಾಗಿದ್ದ ಸದಾಶಿವ ಬ್ರಹ್ಮೇಂದ್ರರ ಆತ್ಮ ವಿದ್ಯಾವಿಲಾಸವೆಂಬ ಗ್ರಂಥವನ್ನು ಪಠಿಸುವಂತೆ ಶಾಸ್ತ್ರಿಗಳಿಗೆ ಆಜ್ಞೆಯಿತ್ತರು ಗುರುಗಳು.

ಈ ಸಂದರ್ಭದಿಂದಲೂ ಮತ್ತು ಇತರ ವಿದ್ಯಮಾನಗಳಿಂದಲೂ ಶ್ರೀ ನರಸಿಂಹ ಶಾಸ್ತ್ರಿಗಳಲ್ಲದೆ ಬೇರೆಯವರನ್ನು ಶೃಂಗಗಿರಿ ಪೀಠದ ಆಚಾರ್ಯರನ್ನಾಗಿ ಮಾಡುವುದರಲ್ಲಿ ಗುರುದೇವರ ಸಂಕಲ್ಪವೂ ಇಲ್ಲ, ಈಶ್ವರೇಚ್ಛೆಯೂ ಇಲ್ಲ ವೆಂದು ಶಾಸ್ತ್ರಿಗಳಿಗೆ ಮನವರಿಕೆಯಾಗಿ ಅವರು ಆ ವಿಚಾರದಿಂದ ವಿರಮಿಸಿ ದರು.

ಮೊದಲಿನಿಂದಲೂ ಗುರುಗಳ ಕೃಪೆಗೂ, ಅನುಗ್ರಹಕ್ಕೂ ಪಾತ್ರರಾಗಿದ್ದ ನರಸಿಂಹಶಾಸ್ತ್ರಿಯವರನ್ನು ಗುರುಗಳು ತಮ್ಮ ಶಿಷ್ಯರನ್ನಾಗಿ ಸ್ವೀಕರಿಸುತ್ತಾರೆಂದು ಕೆಲವರು ನಂಬಿರಲಿಲ್ಲ. ಸೂಕ್ಷ್ಮಗ್ರಾಹಿಯೂ, ಮೇಧಾವಿಯೂ, ಚುರುಕು ಬುದ್ಧಿಯುಳ್ಳವನೂ ಆದ ಬಾಲಕ ವಿದ್ಯಾಭ್ಯಾಸದಲ್ಲಿ ಅತ್ಯಂತ ಕುಶಲ ನಾಗಿದ್ದುದರಿಂದ ಗುರುಗಳಿಗೆ ಆತನಲ್ಲಿ ವಿಶೇಷ ವಿಶ್ವಾಸವೆಂದು ತಿಳಿದಿದ್ದರೇ

ವಿನಾ ಆತನನ್ನೇ ಉತ್ತರಾಧಿಕಾರಿಯಾಗಿ ನಿಯಮಿಸುವ ಅಭಿಪ್ರಾಯ ಹೊಂದಿದ್ದಾರೆಂದು ಭಾವಿಸಿರಲಿಲ್ಲ.

ಹೀಗೆ ಮೊದಲಿನಿಂದಲೂ ಗುರುದೈವಾನುಗ್ರಹಕ್ಕೆ ಪಾತ್ರರಾಗಿದ್ದ ಶ್ರೀ ನರಸಿಂಹಶಾಸ್ತ್ರಿಗಳು ಶ್ರೀಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರಿಂದ ದಕ್ಷಿಣಾಮ್ನಾಯ ಪೀಠಕ್ಕೆ ಆಚಾರ್ಯರಾಗಿ ನಿಯಮಿಸಲ್ಪಡುವ ಮಹಾಪುಣ್ಯವನ್ನು ಪಡೆದಿದ್ದರು. ಈ ವರ್ತಮಾನವು ಹೂವಿನ ಕಂಪಿನಂತೆ, ಘಂಟಾನಾದದಂತೆ ಎಲ್ಲ ಕಡೆಯೂ ಹರಡಿತು.

* * *



# ೧೩. ನರಸಿಂಹಶಾಸ್ತ್ರಿಗಳ ದೃಢ ನಿಶ್ಚಯ

ಶೃಂಗೇರಿಯಿಂದ ಕಳುಹಿಸಲ್ಪಟ್ಟ ಓಲೆಕಾರರು ನೇರವಾಗಿ ಶ್ರೀ ರಾಮಶಾಸ್ತ್ರಿಗಳಲ್ಲಿ ಬಂದು, ಶ್ರೀಕಂಠಶಾಸ್ತ್ರಿಗಳಿಂದ ತಂದಿದ್ದ ಪತ್ರವನ್ನೊಪ್ಪಿಸಿ, ಶೃಂಗೇರಿಯ ವಿದ್ಯಮಾನಗಳನ್ನು ವಿವರಿಸಿದರು. ಗುರುದೇವರ ದೇಹಾರೋಗ್ಯವು ದಿನೇ ದಿನೇ ಕ್ಷಯಿಸುತ್ತಿರುವುದನ್ನು ಕೇಳಿದ ಶಾಸ್ತ್ರಿಗಳಿಗೆ ಅತ್ಯಂತ ದುಃಖವಾಯಿತು. ಅವರ ತನು ಕಂಪಿಸಿತು, ಕಣ್ಣುಗಳು ನೀರ್ದುಂಬಿದವು. ಆದರೆ ಅದು ಚಿಂತಿಸುತ್ತಾ, ದುಃಖಿಸುತ್ತಾ ಕೂರುವ ಸಮಯವಾಗಿರಲಿಲ್ಲ. ಶಾಸ್ತ್ರಿಗಳು ಸಮಾಧಾನ ತಂದುಕೊಂಡು ಕೂಡಲೇ ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ನಡೆಸಿಕೊಡಲು ಕರ್ತವ್ಯಸನ್ನದ್ಧರಾದರು.

ರಾಮಶಾಸ್ತ್ರಿಗಳು ಕೂಡಲೇ ಗೋಪಾಲಶಾಸ್ತ್ರಿಗಳಲ್ಲಿಗೆ ಬಂದರು. ಅನಿರೀಕ್ಷಿತವಾಗಿ ಬಂದ ರಾಮಶಾಸ್ತ್ರಿಗಳನ್ನು ಕಂಡ ಗೋಪಾಲಶಾಸ್ತ್ರಿಗಳಿಗೆ ಅಚ್ಚರಿಯಾಯಿತು. ಎಂದೂ ತಮ್ಮ ಮನೆಗೆ ಬಾರದಿರುವವರು ಇಂದು ತಾವಾಗಿಯೇ ಬಂದುದೂ, ಗಾಂಭೀರ್ಯದಿಂದಲೂ, ಶೀವಿಯಿಂದಲೂ, ವಿದ್ಯಾವೈಭವದಿಂದಲೂ ಶೋಭಿಸುತ್ತಿದ್ದ ಅವರ ಮುಖವು ಇಂದು ಕಳೆಗುಂದಿರುವುದೂ, ಗೋಪಾಲಶಾಸ್ತ್ರಿಗಳಿಗೆ ವಿಸ್ಮಯವನ್ನುಂಟುಮಾಡಿತು. ಗೋಪಾಲಶಾಸ್ತ್ರಿಗಳ ಯೋಗಕ್ಷೇಮವನ್ನು ವಿಚಾರಿಸಿದ ರಾಮಶಾಸ್ತ್ರಿಗಳು, ಗುರುಗಳು ಅಸ್ವಸ್ಥರಾಗಿರುವ ವಿಷಯನ್ನು ತಿಳಿಸಿ, ಅದಕ್ಕಾಗಿ ಕೂಡಲೇ, ಗೋಪಾಲಶಾಸ್ತ್ರಿಗಳೂ, ಲಕ್ಷ್ಮಮ್ಮನವರೂ ನರಸಿಂಹಶಾಸ್ತ್ರಿಗಳೊಡನೆ ಪ್ರಯಾಣ ಹೊರಟು ಕೂಡಲೇ ಶೃಂಗೇರಿಗೆ ಬರಬೇಕೆಂದು ತಿಳಿಸಿದರು. ಅವರೆಲ್ಲರೂ ಬರುವಂತೆ ಗುರುಗಳು ಇಚ್ಛಿಸಿದ್ದಾರೆಂಬುದನ್ನು ಸ್ಪಷ್ಟಪಡಿಸಿ, ನರಸಿಂಹಶಾಸ್ತ್ರಿಗಳನ್ನು ಕೂಡಲೇ ತಮ್ಮೊಡನೆಯೇ ಕಳುಹಿಸಬೇಕೆಂದು ತಿಳಿಸಿದರು. ಗುರುಗಳ ಅನಾರೋಗ್ಯದ ವಿಷಯವನ್ನು ಕೇಳಿ, ಗೋಪಾಲಶಾಸ್ತ್ರಿಗಳಿಗೆ ಕಸಿವಿಸಿಯಾಯಿತು. ಮಾತೇ ಹೊರಡಲಿಲ್ಲ. ತಾವೆಲ್ಲರೂ ಶೃಂಗೇರಿಗೆ ಹೊರಡಬೇಕೆಂದು ರಾಮಶಾಸ್ತ್ರಿಗಳು ಹೇಳಿದುದೂ ಸಹ ಅವರಿಗೆ ಕೇಳಿಸಲೇ ಇಲ್ಲ. ಮೌನವಾಗಿ ತಲೆತಗ್ಗಿಸಿ ನೆಲವನ್ನೇ ದಿಟ್ಟಿಸುತ್ತಿದ್ದ ಗೋಪಾಲಶಾಸ್ತ್ರಿಗಳ ಮನವೆಲ್ಲಾ ಶೃಂಗೇರಿಯಲ್ಲೇ, ಶ್ರೀಗುರುವರ್ಯರ ಸನ್ನಿಧಿಯಲ್ಲೇ ಇತ್ತು.

ಸ್ವಲ್ಪಕಾಲದ ಬಳಿಕ ಗೋಪಾಲಶಾಸ್ತ್ರಿಗಳಿಗೆ ಎಚ್ಚರವಾಯಿತು. ರಾಮಶಾಸ್ತ್ರಿಗಳು ಮಾತನ್ನು ಮುಂದುವರೆಸುತ್ತಾ, "ಶಾಸ್ತ್ರಿಗಳೇ, ತಮಗೆ ಸಂದೇಹವಿರಬೇಕು.

ತಮ್ಮನ್ನೂ, ತಮ್ಮ ಪತ್ನಿಯವರನ್ನೂ ಮತ್ತು ಪುತ್ರರಾದ ಶ್ರೀನರಸಿಂಹಶಾಸ್ತ್ರಿಗಳನ್ನೂ ಏಕೆ ಶೃಂಗೇರಿಗೆ ಬರಮಾಡಿಕೊಳ್ಳುತ್ತಿದ್ದಾರೆಂದು. ತಾವು ಅತ್ಯಂತ ಪುಣ್ಯಶಾಲಿಗಳು. ಶ್ರೀನೃಸಿಂಹಭಾರತೀ ಸ್ವಾಮಿಗಳವರಿಂದ ಆಶ್ರಮದೀಕ್ಷೆಯನ್ನು ಪಡೆದು ದಕ್ಷಿಣಾಮ್ನಾಯ ಪೀಠಕ್ಕೆ ಆಚಾರ್ಯರಾಗುವ ಮಹಾಪುರುಷನ ಮಾತಾಪಿತರಾದ ತಾವು ಧನ್ಯರು. ಲಕ್ಷ್ಮಮ್ಮನವರು ಧನ್ಯಮಾತೆ. ಶ್ರೀ ನರಸಿಂಹಶಾಸ್ತ್ರಿಗಳು ಈ ಮಹದುದ್ದೇಶಕ್ಕಾಗಿಯೇ ಜನ್ಮವೆತ್ತವರು" ಎಂದರು. ರಾಮಶಾಸ್ತ್ರಿಗಳ ಈ ಮಾತನ್ನು ಕೇಳಿದ ಗೋಪಾಲಶಾಸ್ತ್ರಿಗಳು ಕ್ಷಣಕಾಲ ಸ್ತಂಭೀಭೂತರಾದರು. ತಮ್ಮ ಏಕಮಾತ್ರ ಪುತ್ರ ಸರ್ವಸಂಗಪರಿತ್ಯಾಗಿಯಾಗಿ ಸಂನ್ಯಾಸಿಯಾಗುವುದೇ? ಅಯ್ಯೋ! ಗುರ್ವಾಜ್ಞೆಯೇ ಎಂದು ಲಕ್ಷ್ಮಮ್ಮನವರು ಬಿಕ್ಕಿದರು. ಇದ್ದೊಬ್ಬ ಮಗನೂ ಸಂನ್ಯಾಸಿಯಾದರೆ ತಮ್ಮ ಗತಿ? ತಮ್ಮ ಆಸೆ ಆಕಾಂಕ್ಷೆಗಳೆಲ್ಲ ಒಡೆದು ಛಿದ್ರವಾದುವಲ್ಲ. ಹದಿಮೂರು[೫೫] ಮಕ್ಕಳನ್ನು ಕಳೆದುಕೊಂಡು ಕೊನೆಗೆ ಹುಟ್ಟಿದ ನರಸಿಂಹನಲ್ಲಿಯೇ ತಮ್ಮೆಲ್ಲಾ ಆಸೆ ಭರವಸೆಗಳನ್ನು ಕೇಂದ್ರೀಕರಿಸಿದ್ದ ಆ ತಾಯಿಗೆ ನಿರಾಸೆ ಬಂದು ಅಪ್ಪಳಿಸಿದಂತಾಯಿತು.

ಗೋಪಾಲಶಾಸ್ತ್ರಿಗಳು ಅತ್ಯಂತ ಕಷ್ಟದಿಂದ ತಮ್ಮ ದುಃಖವನ್ನು ತಡೆದುಕೊಂಡರು. ಈ ಮಗನು ಜೀವದಿಂದುಳಿದರೆ ಶ್ರೀಶಾರದಾದೇವಿಯ ಸೇವೆಗೆ ಅವನನ್ನು ನೀಡಲು ಹಿಂದೆಯೇ ಅವರು ಮನಸಾ ಸಂಕಲ್ಪಿಸಿದ್ದರಲ್ಲವೇ? ಶ್ರೀಶಾರದೆಯೇ ಈಗ ಗುರುಗಳ ರೂಪದಲ್ಲಿ ಅವನನ್ನು ಕೊಡುವಂತೆ ಕೇಳುತ್ತಿದ್ದಾಳೆ. ಇಷ್ಟು ದಿನವೂ ಅವನನ್ನು ದೇವಿಯ ನಿಧಿಯಾಗಿ ರಕ್ಷಿಸಿದ್ದಾಯಿತು. ಈಗ ಆಕೆ ತನ್ನ ವಸ್ತುವನ್ನು ತನಗೆ ಮರಳಿಕೊಡುವಂತೆ ಅಪೇಕ್ಷಿಸುತ್ತಿರುವಾಗ ಕೊಡದಿರಲು ತಮಗಾವ ಹಕ್ಕಿದೆ? ದಾದಿಯಂತೆ ಮಗುವನ್ನು ಲಾಲಿಸಿ ಪಾಲಿಸಿದ್ದಾಯಿತು. ಈಗ ಅವನನ್ನು ತಾಯ ವಶಕ್ಕೆ ತಾನೇ ಕೊಡಬೇಕು? ದಾದಿ ಪರರ ಮಗುವನ್ನು ತನ್ನದೆಂದೆನ್ನಲಾದೀತೆ? ಹೀಗೆ ಶಾಸ್ತ್ರಿಗಳು ಸಮಾಧಾನ ತಂದುಕೊಂಡರು.

ಇತ್ತ ಲಕ್ಷ್ಮಮ್ಮನವರಾದರೋ ದುಃಖ ಉದ್ವೇಗದಲ್ಲಿ ಮುಳುಗಿದ್ದರು. ಗೋಪಾಲಶಾಸ್ತ್ರಿಗಳು ಎಷ್ಟು ವಿಧವಾಗಿ ಹೇಳಿದರೂ ಆ ತಾಯಿ ತಮ್ಮ ಮಗನನ್ನು ಬಿಟ್ಟುಕೊಡಲು ಒಪ್ಪಲಿಲ್ಲ. ಅವರಿಗೆ ತಮ್ಮ ಎಲ್ಲಾ ಮಕ್ಕಳ ಸಾವು ಕಣ್ಮುಂದೆ ಕಟ್ಟಿತು. ಈ ಮಗನು ಹುಟ್ಟಿದಂದಿನಿಂದ ಅವನ ಲಾಲನೆ ಪಾಲನೆಗಳಲ್ಲಿ ತಮ್ಮ ಹಿಂದಿನ ದುಃಖ ದೌರ್ಭಾಗ್ಯಗಳನ್ನು ಮರೆಯುತ್ತಿದ್ದರು.

೫೫ ಶ್ರೀನರಸಿಂಹಶಾಸ್ತ್ರಿಗಳ ನಂತರ ಒಂದು ಹೆಣ್ಣುಮಗು ಜನಿಸಿ ಅದೂ ಇತರ ಮಕ್ಕಳಂತೆಯೇ ಶೈಶವದಲ್ಲಿಯೇ ತೀರಿಕೊಂಡಿತು



ಈಗ ಅವನನ್ನೂ ಸಹ ದೇವರು ಕರೆದುಕೊಳ್ಳುವುದರಲ್ಲಿದ್ದಾನೆ. ಆದಿಶಂಕರರು ಸಂನ್ಯಾಸ ಸ್ವೀಕರಿಸುವ ಮುನ್ನ ಆ ತಾಯಿ ಆರ್ಯಾಂಬಿಕೆ ದುಃಖಪಟ್ಟಂತೆಯೇ ಇಲ್ಲಿ ಲಕ್ಷ್ಮಮ್ಮನವರೂ ಬಹಳ ದುಃಖಪಡುತ್ತಿದ್ದರು. ಹೆತ್ತ ಕರುಳಿನ ನೋವು ಅನುಭವಿಸಿದವರಿಗೇ ಗೊತ್ತು. ಶಾಸ್ತ್ರಿಗಳೂ, ರಾಮಶಾಸ್ತ್ರಿಗಳೂ ಎಷ್ಟೆಷ್ಟೋ ಪರಿಯಲ್ಲಿ ಸಮಾಧಾನ ಹೇಳಿದರೂ, ಯಾವುದೂ ಪ್ರಯೋಜನಕ್ಕೆ ಬರಲಿಲ್ಲ. ಮೊದಲಿನಿಂದಲೂ ಗುರುಗಳು ಆ ಬಾಲಕನಲ್ಲಿ ತಳೆದಿದ್ದ ವಿಶೇಷವಾದ ಆಸಕ್ತಿ, ಅಭಿಮಾನ, ಪ್ರೀತ್ಯಾದರಗಳು ಈ ಕಾರಣಕ್ಕಾಗಿಯೇ ಎಂದು ಬಿಡಿಸಿ ಹೇಳಿದರೂ ಸಹ ಆ ತಾಯ ಒಪ್ಪಿಗೆ ದೊರೆಯಲಿಲ್ಲ.

ಆಗ ನರಸಿಂಹಶಾಸ್ತ್ರಿಗಳೇ ಮುಂದೆ ಬಂದರು. ಹಿಂದೆ ಶ್ರೀಶಂಕರರು ಸಹ ಸಂನ್ಯಾಸ ಸ್ವೀಕರಿಸಲು ತಾವಾಗಿಯೇ ತಮ್ಮ ಮಾತೆಯ ಅಪ್ಪಣೆ ಬೇಡಲಿಲ್ಲವೇ? ಇಂದು ನರಸಿಂಹಶಾಸ್ತ್ರಿಗಳು ತಮ್ಮ ತಾಯಿಯವರಲ್ಲಿ ಸಂನ್ಯಾಸಾಶ್ರಮ ಸ್ವೀಕಾರಕ್ಕೆ ಅಪ್ಪಣೆ ಕೊಡಿರೆಂದು ಅತ್ಯಂತ ದೈನ್ಯದಿಂದ ಬಿನ್ನವಿಸಿದರು. ತಾವು ಎಷ್ಟು ಮಾತ್ರಕ್ಕೂ ಗೃಹಸ್ಥನಾಗುವುದಿಲ್ಲವೆಂದು ಸ್ಪಷ್ಟವಾಗಿ ನುಡಿದರು. "ತಾಯೇ, ಹದಿಮೂರು ಮಂದಿ ಮಕ್ಕಳನ್ನು ಅತ್ಯಂತ ದುಃಖದಿಂದ ಮೃತ್ಯುವಿಗೆ ಒಪ್ಪಿಸಿದ್ದೀರಿ. ಒಬ್ಬನನ್ನಾದರೂ ಸಂತೋಷವಾಗಿ ಗುರುವರ್ಯರಿಗೆ ಒಪ್ಪಿಸಬಾರದೇ?" ಎಂದು ವಿನಯದಿಂದ ತಾಯನ್ನು ಕೇಳುತ್ತ, ಸಂನ್ಯಾಸ ಸ್ವೀಕಾರಕ್ಕೆ ಅಪ್ಪಣೆ ಕೊಡಬೇಕೆಂದು ಪ್ರಾರ್ಥಿಸಿಕೊಂಡರು. ಈಗ ಅಪ್ಪಣೆ ನೀಡದಿದ್ದಲ್ಲಿ ಮುಂದೆ ತಾವಾಗಿಯೇ ಸಂನ್ಯಾಸ ಸ್ವೀಕರಿಸಿ, ಎತ್ತಲಾದರೂ ದೂರ ಕಣ್ಮರೆಯಾಗಿಬಿಡುವುದಾಗಿಯೂ ತಿಳಿಸಿದರು. ಆಗ ಮುಖಾವಲೋಕನಕ್ಕೆ ಸಹ ಅವಕಾಶವಿರುವುದಿಲ್ಲವೆಂದೂ, ಈಗ ಅನುಮತಿ ಕೊಟ್ಟಲ್ಲಿ ತಾವು ಶೃಂಗೇರಿಯಲ್ಲಿ ಹೆಚ್ಚು ಕಾಲ ಉಳಿಯಬಹುದಾದ್ದರಿಂದ ಆಗಾಗ ನೋಡುವುದಕ್ಕಾದರೂ ಅವಕಾಶವಿರುತ್ತದೆಂದು ಸ್ಪಷ್ಟಪಡಿಸಿದರು.

ಇಷ್ಟು ದಿಟ್ಟತನದಿಂದ ಮಗನೆಂದೂ ಮಾತನಾಡಿರಲಿಲ್ಲ. ಅವನ ಮಾತನ್ನು ಕೇಳಿ ತಂದೆಗೂ, ತಾಯಿಗೂ ಆಶ್ಚರ್ಯವಾಯಿತು. ಎಂದೂ ತಲೆಯೆತ್ತಿ ಮಾತನಾಡದವನು, ತಾಯ್ತಂದೆಯರ ಮಾತಿಗೆ ಪ್ರತಿ ಹೇಳದವನು, ಈ ದಿನ ನಿರ್ಧಾರದಿಂದ ತಾನು ಸಂನ್ಯಾಸಿಯಾಗುವೆನೆಂದು ಹೇಳುತ್ತಿದ್ದಾನೆ. ತಂದೆ ಮಗನ ಮುಖವನ್ನೊಮ್ಮೆ ನೋಡಿದರು. ಅಪೂರ್ವವಾದ ತೇಜಸ್ಸು ಒಸರುತ್ತಿದ್ದ ಆ ಲಲಾಟದಲ್ಲಿ, ಮಿಂಚುತ್ತಿದ್ದ ಆ ನೇತ್ರಯುಗ್ಮಗಳಲ್ಲಿ ಯಾವುದೋ ಮಹಾಶಕ್ತಿಯು ಪ್ರಕಾಶವಾದಂತೆ ಅವರಿಗೆ ಭಾಸವಾಯಿತು. ಶಾಸ್ತ್ರಿಗಳು ಅತ್ಯಂತ

ದೃಢಮನಸ್ಕರಾಗಿ, ಮೃದುವಾಣಿಯಲ್ಲಿ ಪತ್ನಿಗೆ ನುಡಿದರು, "ಲಕ್ಷ್ಮೀ, ನರಸಿಂಹನಿಗೆ ಮನಃಪೂರ್ವಕವಾಗಿ ನಿನ್ನ ಅಪ್ಪಣೆ ನೀಡು". ಆ ವಾಣಿಯಲ್ಲಿ ಒಂದು ವಿಧವಾದ ಆಜ್ಞೆಯಿತ್ತು. ವಿಶ್ವಾಸವೂ ಇತ್ತು.

ಆ ತಾಯಿ ಯೋಚಿಸಿದರು. ಮೊದಲಿನಿಂದಲೂ ಮಗನಿಗೆ ಪಾರಮಾರ್ಥಿಕ ವಿಷಯದಲ್ಲಿಯೇ ಆಸಕ್ತಿ. ಹೇಗೂ ತಾನು ಗೃಹಸ್ಥನಾಗುವುದಿಲ್ಲವೆಂದು ನಿರ್ಧರಿಸಿಬಿಟ್ಟಿದ್ದಾನೆ. ಈಗ ಸಂನ್ಯಾಸಕ್ಕೆ ಅಪ್ಪಣೆ ಕೊಡದಿದ್ದಲ್ಲಿ ಅವನು ಎಲ್ಲಿಯಾದರೂ ಹೊರಟುಹೋಗುವುದು ನಿಶ್ಚಯ. ಸಂನ್ಯಾಸಕ್ಕೆ ಅಪ್ಪಣೆ ಕೊಟ್ಟಲ್ಲಿ ಆತ ಶೃಂಗೇರಿಯಲ್ಲೇ ಹೆಚ್ಚು ಕಾಲ ಉಳಿಯುವುದರಿಂದ ಆಗಾಗ ನೋಡುತ್ತಿರಬಹುದು. ಮಾತೃಹೃದಯದ ಆಸೆಯನ್ನು ಸ್ವಲ್ಪವಾದರೂ ತಣಿಸಬಹುದು. ಅವನು ಬಿಡಿ ಸಂನ್ಯಾಸಿಯಾಗಿ ದೂರ ಹೋಗುವುದಕ್ಕಿಂತ ಇದು ವಾಸಿಯಲ್ಲವೇ. ಹೀಗೆ ಆಲೋಚನೆ ಮಾಡಿದ ಲಕ್ಷ್ಮಮ್ಮನವರು ಕಣ್ತುಂಬಿ ಬರುತ್ತಿರಲು, ಕಂಪಿಸುವ ಧ್ವನಿಯಲ್ಲಿ ಅನುಜ್ಞೆಯಿತ್ತರು. ತಾಯಿ ಆರ್ಯಾಂಬೆ ಯಂತೆ ಲಕ್ಷ್ಮಮ್ಮನವರೂ ಸಹ ತಮ್ಮ ಪುತ್ರನನ್ನು ಒಂದು ಮಹದುದ್ದೇಶಕ್ಕಾಗಿ ತ್ಯಾಗ ಮಾಡಿದರು. ಅಪ್ಪಣೆ ಕೊಟ್ಟ ತಾಯಿಗೂ, ತಂದೆಯವರಿಗೂ ನರಸಿಂಹಶಾಸ್ತ್ರಿಗಳು ಸಾಷ್ಟಾಂಗ ನಮಸ್ಕಾರ ಮಾಡಿದರು. ಅವರ ಋಣಾನುಬಂಧವು ಅಂದಿಗೆ ಮುಕ್ತಾಯವಾಯಿತು.

ಮನೆಯಲ್ಲಿ ಮಾತಾಪಿತರ ಅಪ್ಪಣೆಯನ್ನು ದೊರಕಿಸಿಕೊಂಡ ನರಸಿಂಹಶಾಸ್ತ್ರಿಯವರನ್ನು ಕುಣಿಗಲ್ ರಾಮಶಾಸ್ತ್ರಿಗಳು, ಬೆಂಗಳೂರಿನಲ್ಲಿಯೇ ವಾಸ್ತವ್ಯ ಮಾಡಿದ್ದ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರಲ್ಲಿಗೆ ಕರೆದುಕೊಂಡು ಬಂದರು. **ಪ್ರಭುಗಳು ಶ್ರೀನರಸಿಂಹಶಾಸ್ತ್ರಿಗಳನ್ನು ಗೌರವಾದರ ದಿಂದ ಸ್ವಾಗತಿಸಿ, ತಮಗೆ ಮೊದಲೇ ಬಂದಿದ್ದ ಶ್ರೀಜಗದ್ಗುರುಗಳ ಪತ್ರವನ್ನು ಅವರಿಗೆ ತೋರಿಸಿದರು**. ಶ್ರೀಜಗದ್ಗುರುಗಳ ಅಪ್ಪಣೆಯಂತೆ ಸಂನ್ಯಾಸ ಸ್ವೀಕರಿಸಲು ಶ್ರೀ ನರಸಿಂಹಶಾಸ್ತ್ರಿಗಳಿಗೆ ಸಮ್ಮತವೇ ಎಂದು ಕೇಳಿದರು. ತಾವು ಸಂನ್ಯಾಸ ಸ್ವೀಕರಿಸಲು ಮೊದಲೇ ತೀರ್ಮಾನಿಸಿಕೊಂಡಿರುವುದಾಗಿ ತಿಳಿಸಿದ ನರಸಿಂಹಶಾಸ್ತ್ರಿಗಳು ಮಠದ ಆಡಳಿತ ವಿಷಯದಿಂದ ತಮಗೆ ಬಿಡುಗಡೆ ದೊರೆತದ್ದಾದರೆ ಸಾಕೆಂದು ನುಡಿದರು. ಈ ಮಾತಿನಿಂದ ಹರ್ಷಿತರಾದ ಮಹಾರಾಜರು, ನರಸಿಂಹಶಾಸ್ತ್ರಿಗಳು ಸಾಧಾರಣರಲ್ಲ ವೆಂಬುದನ್ನು ಅರಿತುಕೊಂಡರು. ನಮ್ರತೆಯಿಂದ ನಮಸ್ಕರಿಸಿ ಅವರನ್ನು ಬೀಳ್ಕೊಟ್ಟರು.



ಶ್ರೀಗುರುಗಳ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸಲು ಆ ದಿನವೇ ನರಸಿಂಹಶಾಸ್ತ್ರಿಗಳು, ಕುಣಿಗಲ್ ರಾಮಶಾಸ್ತ್ರಿಗಳೊಡನೆ ಶೃಂಗೇರಿಗೆ ಪ್ರಯಾಣ ಬೆಳೆಸಿದರು. ತಮ್ಮ ಒಬ್ಬನೇ ಪುತ್ರನಾದ ನರಸಿಂಹಶಾಸ್ತ್ರಿಯು ಲೌಕಿಕವಾದ ಎಲ್ಲ ಬಂಧನಗಳನ್ನೂ ಕಳಚಿ ಸಂನ್ಯಸ್ತನಾಗಿ ವ್ಯಾಖ್ಯಾನ ಪೀಠಾರೋಹಣ ಮಾಡುವುದನ್ನು ನೋಡುವ ಸಲುವಾಗಿ ಮರುದಿನ ಗೋಪಾಲಶಾಸ್ತ್ರಿಗಳೂ ಲಕ್ಷ್ಮಮ್ಮನವರೊಡನೆ ಶೃಂಗೇರಿಯತ್ತ ಪ್ರಯಾಣ ಮಾಡಿದರು.

* * *

# ೧೪. ಸಂನ್ಯಾಸ ಸ್ವೀಕಾರ, ಪಟ್ಟಾಭಿಷೇಕ

ಇತ್ತ ತಮ್ಮ ಉತ್ತರಾಧಿಕಾರಿಯು ಆಗಮಿಸಿ, ಆತನಿಗೆ ದೀಕ್ಷೆಯನ್ನು ಕೊಡುವ ಮುನ್ನವೇ, ಪರೀಧಾವಿ ಸಂವತ್ಸರದ ಚೈತ್ರ ಶುದ್ಧ ಬಿದಿಗೆಯಂದು [೧೯೧೨] ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಮಹಾಸ್ವಾಮಿಗಳವರು ಪರಮಪದವನ್ನೈದಿದ್ದರು. ಮಹಾತಪಸ್ವಿಗಳೂ, ಯೋಗಿಶ್ರೇಷ್ಠರೂ, ಅಪರೋಕ್ಷಜ್ಞಾನಿಗಳೂ ಆಗಿದ್ದ ಜಗದ್ಗುರುಗಳ ನಿರ್ಯಾಣದಿಂದ ನಾಡಿಗೆ ನಾಡೇ ಅತ್ಯಂತ ದುಃಖದಿಂದ ಪರಿತಪಿಸಿತು. ಅಜಾತಶತ್ರುಗಳೂ, ಸರ್ವಭೂತ ಕರುಣಾಶಾಲಿಗಳೂ, ದರ್ಶನಮಾತ್ರದಿಂದ ಜನಗಳ ಸಂತಾಪವನ್ನು ದಮನಪಡಿಸುವವರೂ ಆಗಿದ್ದ ಗುರುಗಳ ವಿಯೋಗವು ಎಲ್ಲರಿಗೂ ಅತ್ಯಂತ ದುಸ್ಸಹವಾಗಿದ್ದಿತು. ಮಠದ ದಕ್ಷಿಣಭಾಗದಲ್ಲಿ ಗುರುವರ್ಯರೇ ನಿರ್ಮಿಸಿಕೊಂಡಿದ್ದ ನೃಸಿಂಹವನದಲ್ಲಿಯೇ ಆ ಪೂತಾತ್ಮರ ಕಳೇಬರವನ್ನು ಸಮಾಧಿ ಮಾಡಲಾಯಿತು.

ಅತ್ತ ತ್ವರಿತ ಗತಿಯಲ್ಲಿ ಪ್ರಯಾಣಮಾಡಿ ಮರುದಿನ ಶೃಂಗೇರಿಗೆ ದಯಮಾಡಿಸಿದ ಶ್ರೀನರಸಿಂಹಶಾಸ್ತ್ರಿಗಳು ಜಗದ್ಗುರುಗಳು ಬ್ರಹ್ಮೀಭೂತರಾದುದನ್ನು ಕೇಳಿ ಸಿಡಿಲು ಬಡಿದಂತಾದರು. ತಮ್ಮನ್ನು ಬಾಲ್ಯದಿಂದಲೂ ಆಶೀರ್ವದಿಸಿ ಅನುಗ್ರಹಿಸಿದವರೂ, ಹೆಜ್ಜೆ ಹೆಜ್ಜೆಗೂ ತಮ್ಮನ್ನು ಅಭ್ಯುದಯ ಮಾರ್ಗದತ್ತ ನಡೆಸಿದವರೂ, ಕಟ್ಟಕಡೆಗೆ –ತಾವು ಬಹಳಕಾಲದಿಂದ ಮನಸ್ಸಿನಲ್ಲಿಯೇ ನಿರ್ಧರಿಸಿಕೊಂಡಿದ್ದ– ಪಾರಮಾರ್ಥಿಕ ಮಾರ್ಗದತ್ತಲೇ ನಡೆಯಬೇಕೆಂದು ತಮಗೆ ಮಹದಾಣತಿಯನ್ನಿತ್ತು ಶೃಂಗೇರಿಯ ಗುರುಪೀಠಕ್ಕೆ ತಮ್ಮನ್ನು ನೇಮಿಸಿದ ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಮಹಾಸ್ವಾಮಿಗಳವರ ಸ್ಮರಣೆಯಲ್ಲಿಯೇ ಅವರು ಬಹಳ ಸಮಯ ಮುಳುಗಿದ್ದರು. ಅವರ ಮನಸ್ಸು ಸಮಾಧಾನ ಸ್ಥಿತಿಗೆ ಬರಲು ಸ್ವಲ್ಪಕಾಲ ಬೇಕಾಯಿತು.

ಶ್ರೀಗುರುಗಳವರ ಆರಾಧನಾದಿ ಉತ್ತರಕ್ರಿಯೆಗಳೆಲ್ಲವೂ ಸಾಂಗವಾಗಿ ನಡೆದವು. ಈ ಮಧ್ಯೆ ಶ್ರೀಕಂಠಶಾಸ್ತ್ರಿಗಳು ಮೈಸೂರಿಗೆ ಹೋಗಿ ಮಹಾರಾಜರನ್ನು ಕಂಡು ಜಗದ್ಗುರುಗಳ ನಿರ್ಯಾಣವನ್ನೂ ಅವರ ಅಂತ್ಯೇಷ್ಟಿಯನ್ನೂ ವಿವರಿಸಿದರು. ಈ ಮೊದಲೇ ಶ್ರೀ ಜಗದ್ಗುರುಗಳವರಿಂದ ಮಹಾರಾಜರಿಗೆ ತಮ್ಮ ಉತ್ತರಾಧಿಕಾರಿಯಾಗಬೇಕಾದವರು ಶ್ರೀನರಸಿಂಹಶಾಸ್ತ್ರಿಗಳೇ ಎಂಬ ಸ್ಪಷ್ಟಾಭಿಪ್ರಾಯದ ಪತ್ರವೊಂದು ಬಂದಿತ್ತು. ಸದಾ ಗುರುಭಕ್ತಿ ನಿರತರಾಗಿದ್ದ



ರಾಜರ್ಷಿ ಕೃಷ್ಣರಾಜ ಒಡೆಯರು ಗುರುಗಳ ಆಜ್ಞೆ ಪಾಲಿಸುವುದೇ ತಮಗೆಲ್ಲಾ ಶ್ರೇಯಸ್ಕರವೆಂದೂ ಮತ್ತು ಶ್ರೀನರಸಿಂಹಶಾಸ್ತ್ರಿಗಳಿಗೆ ಆಶ್ರಮ ಸ್ವೀಕಾರಮಾಡಿಸಿ, ಗುರ್ವಾಜ್ಞೆಯನ್ನು ನೆರವೇರಿಸಬೇಕೆಂದೂ ತಿಳಿಸಿ, ಹೊಸಗುರುಗಳಿಗೆ ತಮ್ಮ ಗೌರವಕಾಣಿಕೆಗಳನ್ನು ಭಕ್ತಿಪುರಸ್ಸರವಾಗಿ ಕಳುಹಿಸಿಕೊಟ್ಟರು.

ಇತ್ತ ಶೃಂಗೇರಿಯಲ್ಲಿ ಒಂದೆಡೆ ಶ್ರೀನೃಸಿಂಹಭಾರತೀ ಸ್ವಾಮಿಗಳವರ ಆರಾಧನಾದಿ ಕಾರ್ಯಗಳೆಲ್ಲವೂ ನಡೆಯುತ್ತಿದ್ದರೆ, ಇನ್ನೊಂದೆಡೆ ನೂತನ ಗುರುಗಳ ಆಶ್ರಮ ಸ್ವೀಕಾರಕ್ಕೆ, ಪಟ್ಟಾಭಿಷೇಕಕ್ಕೆ ಸಮಸ್ತ ಸಿದ್ಧತೆಗಳೂ ಜರುಗುತ್ತಿದ್ದವು. ದೇಶದ ನಾನಾ ಕಡೆಗಳಿಂದ ಭಕ್ತರ, ಶಿಷ್ಯರ ಮತ್ತು ಗುರುಕಾರ್ಯದಲ್ಲಿ ಶ್ರದ್ಧೆಯುಳ್ಳವರ ಪ್ರವಾಹ ತಂಡತಂಡವಾಗಿ ಶೃಂಗೇರಿಗೆ ಧಾವಿಸುತ್ತಿತ್ತು. ಪ್ರಯಾಣದ ಅಸೌಕರ್ಯ, ರಸ್ತೆಗಳ ಅವ್ಯವಸ್ಥೆ, ವಾಹನಗಳ ಮಿತ ಸೌಲಭ್ಯ ಯಾವುದನ್ನೂ ಲೆಕ್ಕಿಸದೇ ಜನರು ಯಾವ ಯಾವ ವಾಹನಗಳ ಅನುಕೂಲ ದೊರಕಿದರೆ ಅದರಲ್ಲಿಯೇ ತುಂಬಿಕೊಂಡು ತಂಡೋಪತಂಡವಾಗಿ ಬರುತ್ತಿದ್ದರು. ಶ್ರೀಮಠದವರೂ, ಸರ್ಕಾರದ ಅಧಿಕಾರಿ ವರ್ಗದವರೂ ಅತ್ಯಂತ ಚಟುವಟಿಕೆ ಮತ್ತು ದಕ್ಷತೆಯಿಂದ ಜನಕ್ಕೆ ಊಟ ಉಪಚಾರಗಳ ಅನುಕೂಲಗಳನ್ನು ಒದಗಿಸುವುದರಲ್ಲಿ ಮಗ್ನರಾಗಿದ್ದರು. ಮಹಾರಾಜರನ್ನು ಪ್ರತಿನಿಧಿಸಿ ದಿವಾನರಾಗಿದ್ದ ವಿ.ಪಿ.ಮಾಧವರಾಯರೂ, ಇತರ ಅಧಿಕಾರಿಗಳೂ ಆಗಮಿಸಿದ್ದರು.

"ಸರ್ವಜ್ಞಂ ಶ್ರೀನೃಸಿಂಹಂ ಕುರು ಶಿವದಯಿತೇ" ಎಂದು ಯಾರ ವಿಷಯದಲ್ಲಿ ಗುರುವರ್ಯರು ಜಗನ್ಮಾತೆಯನ್ನು ಪ್ರಾರ್ಥಿಸಿದ್ದರೋ ಆ ಪುಣ್ಯಚರಿತರಾದ ನರಸಿಂಹಶಾಸ್ತ್ರಿಗಳು ಶೃಂಗೇರಿಗೆ ಹಿಂದಿರುಗಿ ಬಂದಾಗಿನಿಂದಲೂ ತಾವೂ ಜಗದಂಬೆಯನ್ನು "ಮುಂದೆ ತಾವು ನಿಯಮಿಸಲ್ಪಡುವ ಮಹಾಪೀಠಕ್ಕೆ ತಮ್ಮನ್ನು ಯೋಗ್ಯರನ್ನಾಗಿ ಮಾಡು, ಮಹತ್ಕಾರ್ಯ ನಿರ್ವಹಣೆಗೆ ಶಕ್ತರನ್ನಾಗಿ ಮಾಡು, ಎಂದೆಂದಿಗೂ ತಮ್ಮ ಮಾರ್ಗದರ್ಶಕಳಾಗು" ಎಂಬುದಾಗಿ ಪ್ರಾರ್ಥಿಸುತ್ತಿದ್ದರು.

**ಕಾಲಾಹಂಕಾರ ನಿರ್ವಾಪಣಚಣ ಹೃದಯಾಂಭೋಜ ಬಾಲಾರುಣಾಭೇ**
**ಕಾಯಕ್ಲೇಶಾದಿ ಹೀನೈರಪಿ ಸುಖಸುಲಭೈಃ ಸೇವನೈಃ ಪ್ರೀಯಮಾಣೇ।**
**ಕಾಣಾದಾಕ್ಷಾಂಘ್ರಿಶೇಷ ಪ್ರಮುಖ ಬುಧವರೈಃ ಚಿಂತ್ಯಮಾನಾಂಘ್ರಿಪದ್ಮೇ**
**ಸರ್ವಜ್ಞಂ ಶ್ರೀನೃಸಿಂಹಂ ಕುರು ಶಿವದಯಿತೇ ಸತ್ವರಂ ಮದ್ವಿನಮ್ರಂ ॥**

ಆ ಮಹಾದಿನವೂ ಬಂದಿತು. ಎಲ್ಲೆಲ್ಲಿಯೂ ಹಬ್ಬದ ವಾತಾವರಣ.

ಶೃಂಗೇರಿಯೆಲ್ಲ ತಳಿರು ತೋರಣಗಳಿಂದ ಅಲಂಕೃತವಾಗಿತ್ತು. ದೇವಮಂದಿರ, ಭಜನಮಂದಿರಗಳಲ್ಲಿ ಗಂಟೆ ಜಾಗಟೆಗಳ ನಿನಾದ. ಶಂಖಧ್ವನಿ, ಮಂತ್ರಘೋಷಗಳು ಎಲ್ಲೆಡೆಯಿಂದಲೂ ಪಡಿನುಡಿಯುತ್ತಿದ್ದವು. ರಸ್ತೆಗಳಲ್ಲಿ ಜನಜಾತ್ರೆಯಾಗಿ ಮಂಗಳದ ಶುಭಪ್ರಭೆ ಶೋಭಿಸುತ್ತಿತ್ತು. ಹರ್ಷಸಂತೋಷಗಳು ಉಲ್ಲಾಸ, ಸಂಭ್ರಮಗಳು ಸುತ್ತುಮುತ್ತೆಲ್ಲವೂ ಪಸರಿಸಿ ಶೃಂಗೇರಿಯು ಅಪೂರ್ವ ಕಳೆಯಿಂದ ನಳನಳಿಸುತ್ತಿತ್ತು.

ಇಂತಹ ಸಂದರ್ಭದಲ್ಲಿ ಕಂಡುಬಂದ ಒಂದೇ ಒಂದು ಕೊರತೆಯೆಂದರೆ ಶ್ರೀಗೋಪಾಲಶಾಸ್ತ್ರಿಗಳೂ, ಮಹಾಮಾತೆ ಲಕ್ಷಮ್ಮನವರೂ ಸಕಾಲದಲ್ಲಿ ಶೃಂಗೇರಿಗೆ ಬರಲಾಗದೇ ತಮ್ಮ ಸುಪುತ್ರರು ದೀಕ್ಷೆ ವಹಿಸುವುದನ್ನು ಕಾಣದೆಹೋದುದು. ದಂಪತಿಗಳು ಬೆಂಗಳೂರಿನಿಂದ ಹೊರಟವರು ಅತ್ಯಂತ ಪ್ರಯಾಸದಿಂದ ತರೀಕೆರೆಯವರೆಗೂ ಬಂದು, ಅಲ್ಲಿಂದ ಶೃಂಗೇರಿಗೆ ಬರಲು ಯಾವ ವಾಹನ ಸೌಕರ್ಯವೂ ದೊರೆಯದೇ ನಿರಾಶರಾಗಿದ್ದರು. ಮೊದಲೇ ದುಃಖಿಗಳಾಗಿದ್ದ ಅವರು ಮತ್ತೂ ದುಃಖದಲ್ಲಿ ಮುಳುಗಿದರು. ಮರುದಿನ ಆ ಪುಣ್ಯವಂತರಿಬ್ಬರೂ ವಿಶೇಷ ಪ್ರಯಾಸದಿಂದ ಶೃಂಗೇರಿಗೆ ಆಗಮಿಸಿದಾಗ ಕಂಡುದು ತಮ್ಮ ಪ್ರೀತ್ಯಾದರಗಳ ಪುತ್ಥಳಿಯಾಗಿದ್ದ ಬಾಲಕ ನರಸಿಂಹನನ್ನಲ್ಲ! ಶ್ರೀಶಂಕರ ದಕ್ಷಿಣಾಮ್ನಾಯ ಪೀಠದ ಆಚಾರ್ಯರಾಗಿದ್ದ ಶ್ರೀಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಗಳವರನ್ನು!

ಸಮಸ್ತ ಮರ್ಯಾದೆಗಳೂ ಶ್ರೀನರಸಿಂಹಶಾಸ್ತ್ರಿಗಳು ಉಳಿದುಕೊಂಡಿದ್ದ ಮನೆಗೇ ಬಂದವು. ಶ್ರೀಯುತರಿಗೆ ಅಧಿಕೃತವಾಗಿ ಶ್ರೀಜಗದ್ಗುರುಗಳ ಅಪ್ಪಣೆಯನ್ನು ತಿಳಿಸಲಾಯಿತು. ಮಠದ ಮೇನೆಯಲ್ಲಿ ಸಕಲ ಗೌರವಗಳೊಡನೆ ಶ್ರೀನರಸಿಂಹಶಾಸ್ತ್ರಿಗಳನ್ನು ಶ್ರೀಶಾರದಾಂಬೆಯ ಆಲಯಕ್ಕೆ ಕರೆದುಕೊಂಡು ಬರಲಾಯಿತು. ಅಲ್ಲಿ ನೆರೆದಿದ್ದ ಸಭೆಯಲ್ಲಿ ಶ್ರೀಕಂಠಶಾಸ್ತ್ರಿಗಳು ಮತ್ತೊಮ್ಮೆ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರು ಅಪ್ಪಣೆ ಕೊಡಿಸಿದ್ದ ತಮ್ಮ ಉತ್ತರಾಧಿಕಾರಿಯ ನೇಮಕ ವಿಷಯವನ್ನು ಶ್ರುತಪಡಿಸಿ, ಶ್ರೀನರಸಿಂಹಶಾಸ್ತ್ರಿಗಳು ಸಂನ್ಯಾಸಾಶ್ರಮ ಸ್ವೀಕಾರ ಮಾಡಿ ಪೀಠಾಧಿಕಾರವನ್ನು ವಹಿಸಿಕೊಳ್ಳಬೇಕೆಂದು ವಿಜ್ಞಾಪಿಸಿಕೊಂಡರು. ಸಭೆಯಲ್ಲಿ ಜಯಘೋಷವಾಗುತ್ತಿದ್ದಂತೆಯೇ ಶ್ರೀನರಸಿಂಹಶಾಸ್ತ್ರಿಗಳು ಎದ್ದುನಿಂತು ತಮ್ಮ ಗುರ್ವಾಜ್ಞೆಯನ್ನು ಶಿರಸಾವಹಿಸಲು ಸಿದ್ಧರಾದರು.

ಪರೀಧಾವೀ ಸಂವತ್ಸರದ ಚೈತ್ರ ಬಹುಳ ಷಷ್ಠಿ ಗುರುವಾರದಂದು [೦೭-೦೪-೧೯೧೨] ಶ್ರೀನರಸಿಂಹಶಾಸ್ತ್ರಿಗಳಿಗೆ ಸಂನ್ಯಾಸವಾಯಿತು. ಶ್ರೀನರಸಿಂಹಶಾಸ್ತ್ರಿಗಳಿಗೆ ಸ್ನಾನಾನಂತರ ಸಂನ್ಯಾಸಾಂಗವಾದ ಅಷ್ಟಶ್ರಾದ್ಧಗಳೂ,



ಪುರುಷಸೂಕ್ತ ಹೋಮ, ವಿರಜಾಹೋಮವೇ ಮೊದಲಾದ ಕರ್ಮಕಲಾಪಗಳೆಲ್ಲವೂ ಶಾಸ್ತ್ರೋಕ್ತವಾಗಿ ನಡೆದವು. ಪ್ರೈಷೋಚ್ಚಾರಣೆಗಾಗಿ ಶ್ರೀ ನರಸಿಂಹ ಶಾಸ್ತ್ರಿಗಳನ್ನು ತುಂಗಾನದಿಗೆ ಕರೆತರಲಾಯಿತು. ಶ್ರೀ ನರಸಿಂಹಶಾಸ್ತ್ರಿಗಳು ಯಥೋಕ್ತವಾಗಿ ನೀರಿನಲ್ಲಿಳಿದು ಪ್ರೈಷ ಮಂತ್ರವನ್ನು ಉಚ್ಚರಿಸಿದರು. ಆ ಕೂಡಲೇ ಅವರಿಗೆ ಸಂನ್ಯಾಸಾಶ್ರಮೋಚಿತವಾದ ಕೌಪೀನ, ಕಟಿಸೂತ್ರ, ಕಾಷಾಯವಸ್ತ್ರ, ದಂಡ, ಕಮಂಡಲ ಮತ್ತು ಪಾದುಕೆಗಳು ಸಮರ್ಪಿಸಲ್ಪಟ್ಟವು. ಆಶ್ರಮೋಚಿತವಾದ ಕಾಷಾಯವಸ್ತ್ರ ಧರಿಸಿ, ದಂಡಕಮಂಡಲಧಾರಿಯಾಗಿ ಯತಿವರ್ಯರು ಶ್ರೀ ಶಾರದಾಸನ್ನಿಧಿಗೆ ದಯಮಾಡಿಸಿದರು. ಅಲ್ಲಿ ಅವರಿಗೆ ಶ್ರೀ ದಕ್ಷಿಣಾಮ್ನಾಯ ಪೀಠದ ಮಹಾವಾಕ್ಯವು ಶ್ರೀ ನೃಸಿಂಹಭಾರತೀ ಮಹಾಸ್ವಾಮಿಗಳವರ ಸನ್ನಿಧಿಯಲ್ಲಿಯೇ ದೀರ್ಘಕಾಲ ವಸತಿ ಮಾಡುತ್ತಿದ್ದ ಯತಿ ಶ್ರೀ ಸತ್ಯಾನಂದ ಸರಸ್ವತೀ ಸ್ವಾಮಿಗಳಿಂದ ಉಪದೇಶಿಸಲ್ಪಟ್ಟಿತು.[೬] ಅನಂತರ ಯೋಗಪಟ್ಟಾದಿ ಸಕಲ ಸಂಸ್ಕಾರಗಳೂ ನೆರವೇರಿದವು. ಮುಕ್ತರಾದ ಗುರುಗಳ ಆಜ್ಞೆಯಂತೆಯೇ ಶ್ರೀ ಶ್ರೀ ಚಂದ್ರಶೇಖರ ಭಾರತೀ" ಎಂಬ ಯೋಗಪಟ್ಟವು ಕೊಡಲ್ಪಟ್ಟಿತು. ಶ್ರೀಸುರೇಶ್ವರಾಚಾರ್ಯರಿಂದ ಆರಂಭವಾದ ಪರಂಪರೆಯಲ್ಲಿ ಹದಿಮೂರನೆಯ ಮತ್ತು ಹದಿನೈದನೆಯ ಮತ್ತು ಹದಿನೆಂಟನೆಯ ಗುರುಗಳು ಇದೇ ಅಭಿದಾನವುಳ್ಳವರಾಗಿದ್ದರು.

ಪ್ರೈಷ ಮಂತ್ರೋಚ್ಚಾರಣೆಯಿಂದ ತಮ್ಮೆಲ್ಲ ಐಹಿಕ ಬಂಧನಗಳನ್ನು ಕಳಚಿಕೊಂಡು ಶ್ರೀನರಸಿಂಹಶಾಸ್ತ್ರಿಗಳು ಸ್ವತಂತ್ರರಾದರು. ಶ್ರೀಮಚ್ಛಂಕರಾಚಾರ್ಯರಿಂದ ಸ್ಥಾಪಿತವಾದ ಚತುರಾಮ್ನಾಯ ಪೀಠಗಳಲ್ಲಿ ಮೊದಲನೆಯದಾದ ದಕ್ಷಿಣಾಮ್ನಾಯ ಪೀಠದಲ್ಲಿನ ಪರಂಪರೆಯಲ್ಲಿ ವ್ಯಾಖ್ಯಾನ ಸಿಂಹಾಸನಾಧೀಶ್ವರರಾಗಿದ್ದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರ ಕರಕಮಲ ಸಂಜಾತರಾಗಿ ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಯವರು ವ್ಯಾಖ್ಯಾನ ಪೀಠದಲ್ಲಿ ಪಟ್ಟಾಭಿಷಿಕ್ತರಾದರು.[೭]

ನೂತನ ಗುರುವರ್ಯರು ತಮ್ಮ ಅಮೃತವಾಣಿಯಿಂದ ಸಕಲರನ್ನೂ ಹರಸಿ ಆಶೀರ್ವದಿಸಿದರು. ಶ್ರೀಮನ್ಮಹಾರಾಜರವರ ಪರವಾಗಿ ದಿವಾನ್

---

೬ ನರಸಿಂಹಶಾಸ್ತ್ರಿಗಳಿಗೆ ಶ್ರೀಮಠದ ಸಂಪ್ರದಾಯಗಳ ಪರಿಚಯವೂ, ಶ್ರೀವಿದ್ಯಾ, ಶ್ರೀನಾರಸಿಂಹ, ಶ್ರೀ ಮೇಧಾ ದಕ್ಷಿಣಾಮೂರ್ತಿ ಇತ್ಯಾದಿ ಮಂತ್ರಗಳ ಉಪದೇಶವು ಈ ಮೊದಲೇ ಶ್ರೀಕಂಠಶಾಸ್ತ್ರಿಗಳಿಂದ ಕೊಡಲ್ಪಟ್ಟಿದ್ದವು.

೭ ಯಾವಾಗ ಶಿಷ್ಯಪರಿಗ್ರಹವನ್ನು ತಾವೇ ಮಾಡಲಾಗುವುದಿಲ್ಲವೋ ಅಂತಹ ಸಂದರ್ಭದಲ್ಲಿ ಮುಕ್ತರಾಗುವ ಯತಿಗಳು ನಾರಿಕೇಳ ಫಲವನ್ನು ಅಭಿಮಂತ್ರಿಸಿ ಮುಂದೆ ಬರತಕ್ಕ ಪೀಠಾಧಿಕಾರಿಗಳಿಗೆ ಅನುಗ್ರಹ ಪೂರ್ವಕವಾಗಿ ಅದನ್ನು ಮೀಸಲಿಡುತ್ತಾರೆ. ಮುಂದಿನ ಪೀಠಾಧಿಕಾರಿಯು ಅದನ್ನು ಸ್ವೀಕರಿಸಿ ಗುರ್ವನುಗ್ರಹ ಭಾಜನರಾಗುತ್ತಾರೆ.

ವಿ.ಪಿ.ಮಾಧವರಾಯರು ಶ್ರೀಜಗದ್ಗುರುಗಳಿಗೆ ಭಕ್ತಿಪುರಸ್ಸರವಾಗಿ ವಂದನೆಗಳನ್ನರ್ಪಿಸಿದರು. ಭಾರತಾದ್ಯಂತ ಆಗಮಿಸಿದ್ದ ಭಕ್ತ ಶಿಷ್ಯರೆಲ್ಲರೂ ನೂತನ ಗುರುವರ್ಯರ ದರ್ಶನದಿಂದಲೂ, ಉಪದೇಶದಿಂದಲೂ ಹೊಸಶ್ರದ್ಧೆ, ನಂಬಿಕೆಗಳನ್ನು ಪಡೆದುಕೊಂಡು ಉತ್ಸಾಹಿತರಾದರು. ಹಿಂದಿನ ಗುರುಗಳನ್ನು ಸ್ಮರಿಸಿಕೊಂಡು, ಅವರ ಮಹಾತ್ಮ್ಯವನ್ನು ಬಹುಪ್ರಕಾರವಾಗಿ ಉದ್ಘೋಷಿಸಿ ಸರ್ವಪ್ರಕಾರದಿಂದಲೂ ಆ ಮಹಾಪುರುಷರ ಪ್ರತಿಬಿಂಬದಂತೆ ಬೆಳಗುತ್ತಿದ್ದ ನೂತನ ಗುರುವರ್ಯರನ್ನು ದರ್ಶಿಸಿ ಹಿಂದಿನ ಗುರುಗಳ ವಿಯೋಗದ ದುಃಖವನ್ನು ಕ್ರಮೇಣ ಮರೆಯುತ್ತಾ ಬಂದರು.

* * *



# ೧೫. ಮತ್ತೆ ಶಾಸ್ತ್ರಾಧ್ಯಯನ

ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರ ಸಂಕಲ್ಪದಂತೆಯೇ ಶ್ರೀಚಂದ್ರಶೇಖರ ಭಾರತೀ ಸ್ವಾಮಿಗಳವರು ವ್ಯಾಖ್ಯಾನ ಸಿಂಹಾಸನಾರೋಹಣವನ್ನು ಮಾಡಿದರು. ಆದರೆ ಈ ಆಚಾರ್ಯರಿಗೆ ತಮ್ಮ ಗುರುಗಳಿಗೆ ದೊರಕಿದಂತೆ ಆಶ್ರಮೋಚಿತ ಕರ್ಮಗಳಲ್ಲಿ ಸೂಕ್ತ ದಿಗ್ದರ್ಶನ, ಆಶ್ರಮವಿತ್ತ ಗುರುಗಳಿಂದಲೇ ಶಿಕ್ಷಣ, ಮಠದ ಆಡಳಿತ ವಿಷಯಗಳಲ್ಲಿ ತರಬೇತು ಇವೆಲ್ಲವೂ ದೊರೆಯಲಿಲ್ಲ. ಶ್ರೀನೃಸಿಂಹಭಾರತೀ ಸ್ವಾಮಿಗಳವರು ಹನ್ನೆರಡು ವರ್ಷಗಳ ಕಾಲ ತಮ್ಮ ಗುರುಗಳಿಂದಲೇ ಮಾರ್ಗದರ್ಶನ ಪಡೆದಿದ್ದರು. ಅವರ ನೇತೃತ್ವದಲ್ಲಿಯೇ ಆಧ್ಯಾತ್ಮಿಕ ಸಾಧನೆ ನಡೆಸಿದ್ದರು. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರಿಗೆ ಆ ಸೌಲಭ್ಯವಿರಲಿಲ್ಲ. ಆದರೆ ಅವರಿಗೆ ಜಗನ್ಮಾತೆಯ ಅನುಗ್ರಹವೂ, ರಕ್ಷೆಯೂ ಇದ್ದು, ತಮ್ಮ ಗುರುಗಳ ಮಾರ್ಗದರ್ಶನವು ಅಂತಃಪ್ರೇರಣೆಯಿಂದಲೇ ದೊರೆಯುತ್ತಿದ್ದುದರಿಂದ ಇದೊಂದು ಕೊರತೆಯೆನ್ನಿಸಲಿಲ್ಲ. ಅವರು ಆಧ್ಯಾತ್ಮಿಕ ಸಾಧನೆಯಲ್ಲಿ ಕ್ರಮಕ್ರಮವಾಗಿ ಮುಂದುವರೆಯುತ್ತಿದ್ದರು.

ಶ್ರೀ ಚಂದ್ರಶೇಖರ ಭಾರತೀಯವರು ತಮ್ಮ ನಿತ್ಯ, ನೈಮಿತ್ತಿಕ ಕಾರ್ಯಗಳೊಡನೆ, ಪ್ರತಿದಿನವೂ ತಮ್ಮ ಗುರುಗಳ ಸಮಾಧಿಯಲ್ಲಿಯೂ ಪೂಜಾದಿಗಳನ್ನು ಸಲ್ಲಿಸಿ, ತಮಗೆ ಅಗತ್ಯವಾದ ಮಾರ್ಗದರ್ಶನವನ್ನೂ, ತಿಳಿವಳಿಕೆಯನ್ನೂ ಗುರುವರ್ಯರನ್ನು ಮನಸಾ ಧ್ಯಾನಿಸುವುದರ ಮೂಲಕವೇ ಪಡೆಯುತ್ತಿದ್ದರು. ಸಂಪೂರ್ಣವಾಗಿ ಅವರ ಅನುಗ್ರಹಕ್ಕೆ ಪಾತ್ರರಾಗಿದ್ದ ಸ್ವಾಮಿಗಳು ತಮಗೆ ಅವರ ಸಾನ್ನಿಧ್ಯ ದೊರಕದಿದ್ದುದಕ್ಕೆ ಮನಸ್ಸಿನಲ್ಲಿಯೇ ವ್ಯಥೆಯಿದ್ದರೂ, ಶ್ರೀಚಕ್ರಾರಾಧನೆ, ಶ್ರೀಶಾರದಾ ಚಂದ್ರಮೌಳೀಶ್ವರ, ಶ್ರೀರತ್ನಗರ್ಭ ಗಣಪತಿ ಮುಂತಾದ ದೇವತಾಮೂರ್ತಿಗಳ ಅಭಿಷೇಕ ಪೂಜಾದಿಗಳೊಡನೆ ಆಧ್ಯಾತ್ಮಿಕ ಚಟುವಟಿಕೆಗಳಲ್ಲಿಯೂ ನಿರತರಾದರು. ಮೊದಲೇ ಯೋಗಾಭ್ಯಾಸದಲ್ಲಿ ಆಸಕ್ತರಾಗಿದ್ದ ಶ್ರೀಚಂದ್ರಶೇಖರ ಭಾರತೀಯವರು ಸಂನ್ಯಾಸವಾದ ಬಳಿಕ ವೇದಾಂತ ಮಾರ್ಗದಲ್ಲಿ ಆತ್ಮಸಾಧನೆಯನ್ನು ಮತ್ತು ಪಾತಂಜಲಿ ಮುನಿಪ್ರಣೀತವಾದ ರಾಜಯೋಗಾನುಸಾರ ತಮ್ಮ ಸಾಧನೆಗಳನ್ನು ನಡೆಸುತ್ತಾ ಒಂದೊಂದೇ ಮೆಟ್ಟಿಲಾಗಿ ಮೇಲೇರುತ್ತಾ ಹೋದರು.

ಮಠದ ಆಡಳಿತ ವ್ಯವಸ್ಥೆಯನ್ನು ನಡೆಸಲು ವೇದಶಾಸ್ತ್ರಗಳಲ್ಲಿ ಮತ್ತು ಲೌಕಿಕ ವಿಷಯಗಳಲ್ಲಿ ಪಾರಂಗತರೂ, ದಕ್ಷ ಆಡಳಿತಗಾರರೂ, ವ್ಯವಹಾರ ಚತುರರೂ ಮತ್ತು ಮುಕ್ತಾತ್ಮರಾದ ಶ್ರೀನೃಸಿಂಹಭಾರತೀ ಸ್ವಾಮಿಗಳವರ ಸೇವೆಯಲ್ಲಿಯೇ ಬಹುಕಾಲವಿದ್ದು ಅವರ ಆಶೀರ್ವಾದ, ಅನುಗ್ರಹಕ್ಕೆ ಪಾತ್ರರೂ ಆಗಿದ್ದ ನಂಜನಗೂಡು ಶ್ರೀಕಂಠಶಾಸ್ತ್ರಿಗಳಿದ್ದರು. ಆಡಳಿತ ಚತುರತೆ, ಕಾರ್ಯದಕ್ಷತೆ ಮತ್ತು ಅಚ್ಚುಕಟ್ಟುತನದಲ್ಲಿ ಶಾಸ್ತ್ರಿಗಳು ಒಂದು ರಾಜ್ಯದ ಆಡಳಿತವನ್ನೇ ನಡೆಸುವಷ್ಟು ಸಾಮರ್ಥ್ಯವುಳ್ಳವರಾಗಿದ್ದರು. ಅಂತಹವರ ಕೈಯಲ್ಲಿ ಮಠದ ಆಡಳಿತವಿದ್ದುದರಿಂದ ಗುರುಗಳು ನಿಶ್ಚಿಂತರಾಗಿ ಯೋಗ, ವೇದಾಂತ, ತಪೋನುಷ್ಠಾನಗಳಲ್ಲಿ ಮಗ್ನರಾದರು.

ಬೆಂಗಳೂರಿನ ಪಾಠಶಾಲೆಯಲ್ಲಿ ಒಂದು ಘಟ್ಟಕ್ಕೆ ಬಂದು ಹಠಾತ್ತಾಗಿ ನಿಂತುಹೋಗಿದ್ದ ಪಾಠಗಳು ಇಲ್ಲಿ ಪುನರಾರಂಭವಾದುವು. ಅಲ್ಲಿ ಪೂರ್ವ ಮೀಮಾಂಸಾ ಶಾಸ್ತ್ರವನ್ನು, ಅದ್ವೈತ ವೇದಾಂತವನ್ನು ಕ್ರಮವಾಗಿ ಶ್ರೀ ವೈದ್ಯನಾಥಶಾಸ್ತ್ರಿ ಮತ್ತು ಶ್ರೀ ವೆಳ್ಳೂರು ಸುಬ್ರಹ್ಮಣ್ಯಶಾಸ್ತ್ರಿಯವರಲ್ಲಿ ವ್ಯಾಸಂಗಮಾಡಿದ್ದ ಗುರುಗಳಿಗೆ ಇಲ್ಲಿ ಅದಕ್ಕಿಂತ ಹೆಚ್ಚಿನ ಸೌಲಭ್ಯ ದೊರಕಿತು. ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರಿಂದ ವೇದಾಂತದ ಗಹನ ತತ್ತ್ವಗಳನ್ನೂ, ಆತ್ಮಜ್ಞಾನೋಪದೇಶವನ್ನೂ ಪಡೆದು ಧನ್ಯರಾಗಿದ್ದ ಶ್ರೀಹಾನಗಲ್ ವಿರೂಪಾಕ್ಷ ಶಾಸ್ತ್ರಿಗಳು ಬಾಲ ಯತಿವರ್ಯರಿಗೆ ವೇದಾಂತ ಪಾಠವನ್ನು ಹೇಳಲು ನೇಮಿಸಲ್ಪಟ್ಟರು.

ಇದೆಂತಹ ಅಪೂರ್ವಸಂಧಿ! ಶ್ರೀ ನೃಸಿಂಹಭಾರತೀ ಮಹಾಸ್ವಾಮಿಗಳಲ್ಲಿ ಶಿಷ್ಯವೃತ್ತಿಯನ್ನಾಚರಿಸಿ ವೇದಾಂತಪಾಠಗಳಲ್ಲಿ ವಿಶೇಷಜ್ಞಾನವನ್ನೂ ಅನುಭೂತಿಯನ್ನೂ ಪಡೆದು ಪಾಂಡಿತ್ಯದ ಪರ್ವತವಾಗಿದ್ದ ಶ್ರೀಶಾಸ್ತ್ರಿಗಳು ಶ್ರೀನೃಸಿಂಹ ಭಾರತೀಯವರ ಕರಕಮಲ ಸಂಜಾತರಾದ ಶ್ರೀಚಂದ್ರಶೇಖರ ಭಾರತೀಯವರಿಗೆ ವೇದಾಂತ ಪಾಠಗಳನ್ನು ಹೇಳುವುದೆಂದರೆ ಅದೆಂತಹ ಸುಯೋಗ! ಗುರುವರ್ಯರು ಆಶ್ರಮದ ಪರಂಪರೆಯಲ್ಲಿ ಶ್ರೀನೃಸಿಂಹ ಭಾರತಿಯವರ ಶಿಷ್ಯರಾಗಿದ್ದರೆ, ವಿದ್ಯಾಪರಂಪರೆಯಲ್ಲಿ ಶಾಸ್ತ್ರಿಗಳು ಶ್ರೀನೃಸಿಂಹ ಭಾರತಿಯವರ ಶಿಷ್ಯರಾಗಿದ್ದರು. ವಿದ್ಯಾನಿಧಿಯಾಗಿದ್ದ ಶಾಸ್ತ್ರಿಗಳು ಗುರುಗಳಿಗೆ ಪಾಠ ಹೇಳುವಾಗ ಪಾಠ ಒಪ್ಪಿಸುವ ವಿದ್ಯಾರ್ಥಿಯಂತೆ ನಮ್ರರೂ ವಿನಯ ಶೀಲರೂ ಆಗಿರುತ್ತಿದ್ದರೆ, ಶ್ರೀ ಗುರುಗಳಾದರೋ ಮಹಾಮಹೋಪಾಧ್ಯಾಯರು ತಮಗೆ ಸಲ್ಲಿಸುತ್ತಿದ್ದ ಭಕ್ತಿಗೌರವಗಳಿಗೆ ಸಂಕೋಚಪಡುತ್ತಿದ್ದರು. ಪಾಠ ಪ್ರಾರಂಭವಾಗುತ್ತಿದ್ದಂತೆಯೇ ಪೂರ್ಣಪಾಠವನ್ನೇ ಗ್ರಹಿಸಿಬಿಡುತ್ತಿದ್ದ ಈ



ವಿದ್ಯಾರ್ಥಿಯ ಮೇಧಾಶಕ್ತಿಗೆ ಶಾಸ್ತ್ರಿಗಳು ಆಶ್ಚರ್ಯಪಟ್ಟರೆ ವೇದಾಂತದ ಗಹನ ತತ್ತ್ವಗಳನ್ನು ಸುಲಭವಾಗಿ ಹೃದ್ಯವಾಗುವಂತೆ ಬೋಧಿಸುತ್ತಿದ್ದ ಶಾಸ್ತ್ರಿಗಳ ಅನುಭೂತಿಗೆ ಗುರುಗಳು ವಿಸ್ಮಿತರಾಗುತ್ತಿದ್ದರು.

ಶ್ರೀವಿರೂಪಾಕ್ಷ ಶಾಸ್ತ್ರಿಗಳು ಶ್ರೀನೃಸಿಂಹ ಭಾರತೀ ಸ್ವಾಮಿಗಳವರಲ್ಲಿ ಅಪಾರ ಭಕ್ತಿ, ಗೌರವಗಳನ್ನಿಟ್ಟಿದ್ದರು. ಅವರಿಂದ ವೇದಾಂತ ಪಾಠಗಳನ್ನು ಕಲಿತುದ ರಿಂದಲೇ ಈಗ ಶ್ರೀಚಂದ್ರಶೇಖರ ಭಾರತೀಯವರಿಗೆ ವೇದಾಂತ ಪಾಠವನ್ನು ಹೇಳುವ ಸುಸಂಧಿಯೊದಗಿತೆಂದು ನಂಬಿದ್ದವರು. ತಮ್ಮ ಹಿರಿಯ ಗುರುಗಳ ಪ್ರತಿನಿಧಿಯಾದ ಈ ಗುರುಗಳಲ್ಲಿಯೂ ಏಕರೀತಿಯಾದ ಭಕ್ತಿ, ಗೌರವಗಳನ್ನು ಹೊಂದಿದ್ದರು. ಸಂಪ್ರದಾಯದಂತೆ ಪಾಠ ಆರಂಭಿಸುವ ಮುನ್ನ ಶಿಷ್ಯನು ಗುರುವಿಗೆ ಸಾಷ್ಟಾಂಗ ನಮಸ್ಕಾರ ಮಾಡಬೇಕು. ಅಂತೆಯೇ ಪಾಠ ಮುಕ್ತಾಯವಾಗಿ ಶಾಂತಿಮಂತ್ರ ಪಠನವಾದ ನಂತರವೂ ಸಹ ಶಿಷ್ಯನು ಗುರುವಿಗೆ ಸಾಷ್ಟಾಂಗ ಪ್ರಣಾಮ ಮಾಡಬೇಕು. ಆದರೆ ಇಲ್ಲಿ ಹಾಗೆ ಮಾಡುವಂತಿರಲಿಲ್ಲ. ಶ್ರೀ ಚಂದ್ರಶೇಖರ ಭಾರತಿಯವರು ಸಂನ್ಯಾಸ ಸ್ವೀಕರಿಸಿ ದ್ದುದರಿಂದ, ಎಲ್ಲ ಆಶ್ರಮಗಳಿಗಿಂತಲೂ ಸಂನ್ಯಾಸಾಶ್ರಮವು ಹಿರಿದಾದ್ದರಿಂದ ಸಂನ್ಯಾಸಿಗಳು ಯಾರಿಗೂ ನಮಸ್ಕರಿಸುವಂತಿಲ್ಲ. ಸಂನ್ಯಾಸಾಶ್ರಮ ಸ್ವೀಕರಿಸಿದವರು ಶ್ರೀಮನ್ಮಹಾವಿಷ್ಣುವಿಗೆ ಸಮಾನರು. ಅಷ್ಟೇ ಅಲ್ಲದೇ ಶ್ರೀಚಂದ್ರಶೇಖರ ಭಾರತಿಗಳಾದರೋ ಜಗದ್ಗುರು ಪೀಠದ ಆಚಾರ್ಯರು. ಶ್ರೀಶಾಸ್ತ್ರಿಗಳು ಇವೆಲ್ಲವನ್ನೂ ಅರಿತಿದ್ದಂತಹ ಶ್ರೇಷ್ಠ ಜ್ಞಾನಿಗಳು. ಅವರು ಪ್ರತಿದಿನವೂ ಪಾಠಕ್ಕೆ ಬಂದೊಡನೆಯೇ ಶ್ರೀ ಚಂದ್ರಶೇಖರ ಭಾರತಿಯವರಿಗೆ ದೀರ್ಘದಂಡ ನಮಸ್ಕಾರ ಮಾಡಿ ಬಳಿಕ ಪಾಠಕ್ಕೆ ಉಪಕ್ರಮಿಸುತ್ತಿದ್ದರು. ಪಾಠ ಮುಕ್ತಾಯದಲ್ಲಿಯೂ ಹೀಗೆಯೇ ನಡೆಯುತ್ತಿತ್ತು. ಆಶ್ರಮಧರ್ಮಕ್ಕೆ ಅನುಗುಣವಾಗಿ ಶ್ರೀಚಂದ್ರಶೇಖರ ಭಾರತಿಯವರು ಆ ಸಮಯದಲ್ಲಿ ಈ ಭಕ್ತಿಗೌರವಗಳನ್ನು ಸ್ವೀಕರಿಸಬೇಕಾಗುತ್ತಿತ್ತು. ಆದರೆ ಅವರು ಶಾಸ್ತ್ರಿಗಳು ನಮಸ್ಕರಿಸಲು ಆರಂಭಿಸುತ್ತಿದ್ದಂತೆಯೇ ತಾವೂ ಸಹ ತಮ್ಮೆದುರಿನಲ್ಲಿಯೇ ಇರುತ್ತಿದ್ದ ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರ ತೈಲಚಿತ್ರಕ್ಕೆ ಪ್ರಣಾಮ ಮಾಡಿಬಿಡುತ್ತಿದ್ದರು. ಹೀಗೆ ಶಾಸ್ತ್ರಿಗಳು ಶ್ರೀಗುರುಗಳಿಗೆ ವಂದಿಸುವಾಗಲೇ ಗುರುಗಳು ಆ ವಂದನೆಗಳನ್ನು ತಮ್ಮ ವಂದನೆಗಳೊಡನೆ ಹಿರಿಯ ಗುರುಗಳಿಗೆ ಅರ್ಪಿಸುತ್ತಿದ್ದರು!

ವೇದಾಂತಪಾಠಗಳೆಲ್ಲವೂ ಕೇವಲ ಎರಡು ವರ್ಷಗಳಲ್ಲಿಯೇ ಪೂರೈಸಿದವು. ಅತ್ಯಂತ ಮೇಧಾಶಕ್ತಿಯೂ, ಧಾರಣಶಕ್ತಿಯೂ ಇರುವವರೂ,

ಮೊದಲೇ ಹಲವಾರು ವರ್ಷಗಳ ಸತತ ಅಭ್ಯಾಸ ನಡೆಸಿದವರೂ ಆದವರಿಗೇ ಸಾಧಾರಣ ತಿಳಿವನ್ನು ಹೊಂದಲೂ ಸಹ ಆರು ವರ್ಷಗಳಿಗೂ ಅಧಿಕಕಾಲ ಬೇಕಾಗಿದ್ದಂತಹ ಕಠಿಣ ವಿಷಯಗಳಲ್ಲಿ ಬಾಲಯತಿಗಳು ಎರಡು ವರ್ಷಗಳಲ್ಲಿಯೇ ಪರಿಣತಿಯನ್ನು ಸಾಧಿಸಿದರು. ಸದಾಚಾರ ಸಂಪನ್ನರೂ, ಉಪಶಾಂತಿ ಸ್ವರೂಪರೂ ಆಗಿದ್ದ ಶ್ರೀವಿರೂಪಾಕ್ಷ ಶಾಸ್ತ್ರಿಗಳು ಶ್ರೀಗಳವರಿಗೆ ಇನ್ನಾವ ಪಾಠವನ್ನೂ ಹೇಳಬೇಕಾಗಿಲ್ಲವೆಂದೂ, ಗುರುಗಳು ಸರ್ವಜ್ಞರೆಂದೂ ಬೋಧಕರಾಗಿ ತಾವು ಕೇವಲ ನಿಮಿತ್ತ ಮಾತ್ರರೆಂದೂ ಶ್ರೀಗಳವರ ಮೇಧಾಶಕ್ತಿಯನ್ನೂ, ಗ್ರಹಣಶಕ್ತಿಯನ್ನೂ ಮೆಚ್ಚಿಕೊಂಡಿದ್ದರು.

ವೇದಾಂತ ವಿದ್ಯಾಭ್ಯಾಸ, ಯೋಗಾಭ್ಯಾಸಗಳೆಲ್ಲವೂ ಪೂರ್ಣವಾಗುತ್ತಾ ಬಂದು ಸಂನ್ಯಾಸವಾದ ನಾಲ್ಕು ವರ್ಷಗಳಲ್ಲಿಯೇ ಶ್ರೀಗಳವರು ಎಲ್ಲರಿಗೂ ಆದರ್ಶಪ್ರಾಯರಾದರು. ವಿದ್ಯಾನಿಧಿಯಾಗಿ, ಜ್ಞಾನನಿಧಿಯಾಗಿ ಸಾಕ್ಷಾತ್ ಮೇಧಾ ದಕ್ಷಿಣಾಮೂರ್ತಿ ಸ್ವರೂಪರಾದರು.

* * *



## ೧೬. ಶೃಂಗೇರಿಯಲ್ಲಿ ಕುಂಭಾಭಿಷೇಕ

ನರಸಿಂಹವನದಲ್ಲಿ ಏರ್ಪಟ್ಟಿದ್ದ ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರ ಸಮಾಧಿ ಮಂದಿರದ ನಿರ್ಮಾಣ ಕಾರ್ಯವು ಪೂರೈಸಲ್ಪಟ್ಟಿತ್ತು. ಕಾನಾಡು ಕಾತ್ತಾನ್ ರಾಮಸ್ವಾಮಿ ಚೆಟ್ಟಿಯಾರ್ ಎಂಬುವವರು ಕೃಷ್ಣಶಿಲೆಯಲ್ಲಿ ಆಲಯವನ್ನು ನಿರ್ಮಿಸಿದ್ದರು. ಶ್ರೀಗುರುಗಳ ಅಮೃತಶಿಲಾ ಮೂರ್ತಿಯನ್ನು ಬೊಂಬಾಯಿನ ಪ್ರಸಿದ್ಧ ಶಿಲ್ಪಿಗಳಾಗಿದ್ದ ಗಣಪತಿ ಕೃಷ್ಣರಾವ್ ಮಾತ್ರೆ ಎಂಬುವವರು ಉತ್ತಮ ರೀತಿಯಲ್ಲಿ ನಿರ್ಮಿಸಿದ್ದರು. ಶ್ರೀಗುರುಗಳ ಸಮಾಧಿ ಮಂದಿರವೂ ಮತ್ತು ಅವರ ಸಂಕಲ್ಪದಂತೆ ಆರಂಭಿಸಲ್ಪಟ್ಟು, ಅವರ ಜೀವಿತಕಾಲದಲ್ಲಿಯೇ ಬಹುಮಟ್ಟಿಗೆ ನಡೆದು ಈಗ ಸಂಪೂರ್ಣವಾಗಿದ್ದ ಶ್ರೀ ಶಾರದಾಂಬಾ ದೇವಾಲಯದ ಪುನರ್ನಿಮಾಣ ಕಾರ್ಯವೂ ಶ್ರೀ ಚಂದ್ರಶೇಖರ ಭಾರತಿಗಳವರ ನೇತೃತ್ವದಲ್ಲಿಯೇ ನೆರವೇರಿದ್ದವು. ಶ್ರೀಶ್ರೀಗಳವರು ಪ್ರತಿನಿತ್ಯವೂ ಈ ಕಟ್ಟಡ ನಿರ್ಮಾಣ ಕಾರ್ಯದ ಪ್ರಗತಿಯನ್ನು ತಾವೇ ಖುದ್ದಾಗಿ ಬಂದು ಪರಿಶೀಲಿಸುತ್ತಿದ್ದರು.

ಎರಡೂ ಆಲಯಗಳೂ ಸಂಪೂರ್ಣವಾಗಿದ್ದುದರಿಂದ ಕುಂಭಾಭಿಷೇಕ ವನ್ನು ನಡೆಸಿ, ತಮ್ಮ ಗುರುಗಳವರ ಸಂಕಲ್ಪವನ್ನೂ ಮತ್ತು ಅವರ ಶಿಷ್ಯರುಗಳ ಉದ್ದೇಶವನ್ನೂ ನೆರವೇರಿಸಬೇಕೆಂಬ ವಿಷಯದಲ್ಲಿ ಶ್ರೀಚಂದ್ರಶೇಖರ ಭಾರತಿಯವರು ಅತ್ಯಂತ ಉತ್ಸಾಹಿಗಳಾಗಿದ್ದರು.

ಶ್ರೀ ಚಂದ್ರಶೇಖರಭಾರತೀ ಸ್ವಾಮಿಗಳವರ ಆಜ್ಞೆಯಂತೆ ಆಲಯ ನಿರ್ಮಾಣ ಕಾರ್ಯವು ಪೂರೈಸಿರುವುದಾಗಿಯೂ, ಶ್ರೀಗಳವರು ಕುಂಭಾಭಿಷೇಕ, ಶಾಂತಿ, ಹವನ ಹೋಮಾದಿಗಳನ್ನು ನಡೆಸಲು ಸಂಕಲ್ಪಿಸಿರುವುದಾಗಿಯೂ, ಆ ಮಹಾಕಾರ್ಯವನ್ನು ನಡೆಸಲು ಅವಶ್ಯಕವಾದ ಅನುಕೂಲಗಳನ್ನು ಮಾಡಿಕೊಟ್ಟು ಶೃಂಗೇರಿಗೆ ಆಗಮಿಸಿ, ಶ್ರೀಗುರುಗಳ ಮತ್ತು ಶ್ರೀಶಾರದಾಂಬೆಯ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಮೈಸೂರಿನ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರವರಿಗೂ, ಇತರ ರಾಜಮಹಾರಾಜರುಗಳಿಗೂ ಶಿಷ್ಯವರ್ಗಕ್ಕೂ ಶ್ರೀಮುಖವು ಕಳುಹಿಸಲ್ಪಟ್ಟಿತು.

ಶೃಂಗೇರಿಯಲ್ಲಿ ಮತ್ತೊಮ್ಮೆ ವಿಶೇಷ ಚಟುವಟಿಕೆಗಳು ಆರಂಭವಾದವು. ಪ್ರಜೆಗಳೂ, ಸರ್ಕಾರದ ಅಧಿಕಾರಿಗಳೂ ಮತ್ತು ಮಠದ ಅಧಿಕಾರಿಗಳೂ ಕಾರ್ಯನಿರತರಾದರು. ತಂಡೋಪತಂಡವಾಗಿ ಜನಪ್ರವಾಹವು ಬರಲಾ

ರಂಭಿಸಿತು. ಶ್ರೀಚಂದ್ರಶೇಖರ ಭಾರತಿಯವರ ಪಟ್ಟಾಭಿಷೇಕದಂತೆಯೇ ಈಗಲೂ ಸಹ ಶಂಗೇರಿಯಲ್ಲಿ ನವಚೇತನ ಸಂಚಾರವಾಗಿ ಊರೆಲ್ಲವೂ ಕಳೆಗೊಂಡಿದ್ದು, ಹರ್ಷೋತ್ಸಾಹದಿಂದ ತುಂಬಿ ತುಳುಕುತ್ತಿತ್ತು. ವಸಂತಮಾಸದಲ್ಲಿ ಪ್ರಕೃತಿದೇವಿಯ ಸೌಂದರ್ಯವು ನೂರ್ಮಡಿ ಹೆಚ್ಚಿ ವರ್ಣನಾತೀತವಾಗಿರುತ್ತದೆ. ಮಲೆನಾಡಿನಲ್ಲಂತೂ ಸಹ್ಯಾದ್ರಿಯ ಮಡಿಲಿನಲ್ಲಿ ಪ್ರಕೃತಿದೇವಿಯು ನಿತ್ಯನೂತನೆಯಾಗಿ, ಲಾವಣ್ಯಮಯಿಯಾಗಿ ಕಣ್ಮನಗಳಿಗೆ ಆನಂದವನ್ನೀಯುತ್ತಾಳೆ. ಎಲ್ಲಿ ನೋಡಿದರಲ್ಲಿ ಹಸಿರು ಹಬ್ಬಿ ಆ ಹಸಿರಿನಲ್ಲಿ ಚೇತನೋತ್ಸಾಹಗಳು ಕುಸುರಿಟ್ಟು ಅನಿರ್ವಚನೀಯವಾದ ಸೌಂದರ್ಯವು ಕಂಗೊಳಿಸುತ್ತವೆ. ಈ ವಸಂತದೊಡನೆಯೇ ನವೋತ್ಸಾಹವೂ, ಉಲ್ಲಾಸವೂ ಮೂಡಿ ಎಲ್ಲೆಲ್ಲಿಯೂ ಚಟುವಟಿಕೆ ಕಾಣುತ್ತಿರುತ್ತದೆ. ಪ್ರಕೃತಿಯ ರಮ್ಯಸ್ಥಾನವಾದ ಶೃಂಗೇರಿಯಲ್ಲಿ ನಡೆಯಲಿದ್ದ ಮಹೋತ್ಸವಗಳಿಗೆ ಋತುಗಳ ರಾಜ ವಸಂತಮಾಸವೂ ತನ್ನ ಸೇವೆಯನ್ನು ಸಲ್ಲಿಸಿ ಭಕ್ತರ ಹರ್ಷಸಂತೋಷಗಳಿಗೂ, ಭಗವಂತನ ಅನುಗ್ರಹಕ್ಕೂ ಪಾತ್ರವಾಗಿತ್ತು.

ಭರತಖಂಡದ ಎಲ್ಲೆಡೆಯಿಂದಲೂ ಭಕ್ತವೃಂದವು ಶೃಂಗೇರಿಗೆ ಆಗಮಿಸಿತು. ಮೈಸೂರಿನಿಂದ ಶ್ರೀಮನ್ಮಹಾರಾಜ ಶ್ರೀಕೃಷ್ಣರಾಜ ಒಡೆಯರ್‌ರವರು ಕುಟುಂಬಪರಿವಾರ ಸಮೇತರಾಗಿ ಆಗಮಿಸಿದರು. ಇತರ ರಾಜಪ್ರತಿನಿಧಿಗಳು, ಉಚ್ಚ ಅಧಿಕಾರಿಗಳು, ಆಂಧ್ರ, ಕೇರಳ, ಮದರಾಸು, ಮಹಾರಾಷ್ಟ್ರ ಮತ್ತು ಕರ್ನಾಟಕದ ನಾನಾ ಭಾಗಗಳಿಂದ ಭಕ್ತರು, ಹೋಮಾದಿ ಕಾರ್ಯಗಳಲ್ಲಿ ಭಾಗವಹಿಸಲು ವಿದ್ವಾಂಸರೂ ಆಗಮಿಸಿದ್ದರು. ಸಾಧ್ಯವಾದಷ್ಟು ಮಟ್ಟಿಗೂ ಉತ್ತಮರೀತಿಯಲ್ಲಿ ಎಲ್ಲರಿಗೂ ಅನುಕೂಲಗಳನ್ನು ಕಲ್ಪಿಸಲಾಗಿತ್ತು.

ಕುಂಭಾಭಿಷೇಕ ಸಂಬಂಧವಾದ ಕರ್ಮಕಲಾಪಗಳು ಏಳುದಿನಗಳ ಮೊದಲೇ ಆರಂಭಿಸಲ್ಪಟ್ಟಿದ್ದವು. ನಿರ್ದಿಷ್ಟವಾದ ದಿನದಲ್ಲಿ [ನಳ ಸಂವತ್ಸರದ ವೈಶಾಖ ಶುದ್ಧ ಪಾಡ್ಯಮಿ ಗುರುವಾರ, ಕ್ರಿ.ಶ ೧೯೧೬] ಪ್ರಾತಃಕಾಲ ಎಂಟು ಗಂಟೆಗೆ ಸರಿಯಗಿ ತುಂಗಾನದಿಯ ದಕ್ಷಿಣ ತೀರದಲ್ಲಿ ಇರುವ ನೃಸಿಂಹವನದಲ್ಲಿ ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರ ಸಮಾಧಿಸ್ಥಾನಕ್ಕೆ ಶ್ರೀಚಂದ್ರಶೇಖರ ಭಾರತಿಯವರು ಶಿಷ್ಯರೊಡನೆ ದಯಮಾಡಿಸಿ, ಶ್ರೀಗುರುವರ್ಯರ ಮೂರ್ತಿಯನ್ನು ಪ್ರತಿಷ್ಠಿಸಿ ಕುಂಭಾಭಿಷೇಕ, ಪ್ರಾಣಪ್ರತಿಷ್ಠಾದಿಗಳನ್ನು ಸಾಂಗವಾಗಿ ನೆರವೇರಿಸಿದರು. ನೆರೆದಿದ್ದ ಸಮಸ್ತ ಶಿಷ್ಯಮಂಡಲಿಗೂ ಪ್ರಸಾದವನ್ನಿತ್ತು ಆನಂದಗೊಳಿಸಿದರು. ಆ ಬಳಿಕ ಹತ್ತುಗಂಟೆಗೆ ತುಂಗಾನದಿಯ ಉತ್ತರದಲ್ಲಿರುವ ಶ್ರೀಶಾರದಾಂಬಾ ದೇವಸ್ಥಾನಕ್ಕೆ



ದಯಮಾಡಿಸಿ ಅಲ್ಲಿ ಕುಂಭಾಭಿಷೇಕ, ಪ್ರಾಣಪ್ರತಿಷ್ಠೆ, ಕಲಾವಾಹನಾದಿ ಕರ್ಮಕಲಾಪಗಳನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿದರು. ಆ ಬಳಿಕ ಸಮಸ್ತ ಶಿಷ್ಯಮಂಡಲಿಗೂ ಪ್ರಸಾದವನ್ನು ಅನುಗ್ರಹಿಸಿದರು. ಪ್ರಸಾದ ತೀರ್ಥ ವಿನಿಯೋಗಗಳು, ವಸತಿ, ಊಟೋಪಚಾರದ ವ್ಯವಸ್ಥೆಗಳೆಲ್ಲವೂ ತೃಪ್ತಿಕರವಾಗಿದ್ದು ಭಕ್ತವೃಂದವು ತೃಪ್ತಿ, ಸಂತೋಷಗಳನ್ನು ಹೊಂದಿತು, ಸಂತೋಷಪಟ್ಟಿತು.

ಅಂದು ಸಂಜೆ ಶಾರದಾಂಬಾ ರಥೋತ್ಸವದೊಡನೆ ಶ್ರೀಗುರುವರ್ಯರೂ ಮತ್ತು ಮಹಾರಾಜರೂ ಉತ್ಸವದಲ್ಲಿಯೇ ದಯಮಾಡಿಸಬೇಕೆಂದು ಅನೇಕ ಭಕ್ತರು ಪ್ರಾರ್ಥಿಸಿದರು. ಶ್ರೀಜಗದ್ಗುರುಗಳನ್ನೂ, ಶ್ರೀಮನ್ಮಹಾರಾಜರನ್ನೂ ಒಟ್ಟಿಗೇ ನೋಡಿ ಕಣ್ಮನಗಳನ್ನು ತಣಿಸುವ ಅವಕಾಶ ಮಾಡಿಕೊಡಬೇಕೆಂದು ಭಕ್ತವೃಂದವು ಕೇಳಿಕೊಂಡಿತು. ಉತ್ಸವ, ಮೆರವಣಿಗೆ, ವೈಭವ ಪ್ರದರ್ಶನ ಮುಂತಾದವುಗಳಿಗೆ ಗುರುಗಳು ಅನುಮತಿ ನೀಡುವುದೇ ಕಷ್ಟವಾಗಿತ್ತು. ಆದರೆ ಕರ್ನಾಟಕ ರತ್ನಸಿಂಹಾಸನ ಸ್ಥಾಪನಾಚಾರ್ಯರೆಂದು ಬಿರುದಾಂಕಿತರಾದ ಶೃಂಗೇರಿಯ ಪೀಠಾಧಿಪತಿಗಳು ಆಗಾಗ ರಾಜೋಚಿತವಾದ ಗೌರವಗಳನ್ನೂ, ಬಿರುದು ಬಾವಲಿಗಳನ್ನೂ ಧರಿಸಬೇಕಾಗಿತ್ತು. ಇದು ಬಹಳ ಹಿಂದಿನಿಂದಲೂ, ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದಾಗಲಿಂದಲೂ ಬಂದ ಸಂಪ್ರದಾಯವಾಗಿತ್ತು. ಎಲ್ಲಾ ಗುರುವರ್ಯರೂ ಅನಿರ್ವಾಹ ಸಂದರ್ಭಗಳಲ್ಲಿ ಮಾತ್ರ ಕಿರೀಟಧಾರಣೆ, ಸಿಂಹಾಸನಾರೋಹಣ, ಉತ್ಸವಾದಿಗಳಿಗೆ ಒಪ್ಪಿಗೆ ಕೊಡಲೇಬೇಕಾಗುತ್ತಿತ್ತು. ಶ್ರೀಚಂದ್ರಶೇಖರ ಭಾರತಿಯವರು ಈ ಎಲ್ಲಾ ಗೌರವ, ಭೂಷಣಾದಿಗಳನ್ನು ದೂರವಿಟ್ಟಿದ್ದರೂ ಸಹ ಪೂರ್ಣವಾಗಿ ವರ್ಜಿಸುವಂತಿರಲಿಲ್ಲ. ತಮ್ಮ ಗುರುವರ್ಯರ, ಶ್ರೀಶಾರದಾದೇವಿಯ ದರ್ಶನಕ್ಕಾಗಿ ಬಂದು ತಮ್ಮನ್ನೂ, ರಾಜರನ್ನೂ ಉತ್ಸವದಲ್ಲಿಯೇ ದರ್ಶನ ಮಾಡಬೇಕೆಂಬ ಶಿಷ್ಯರ ವಿಶೇಷ ಪ್ರಾರ್ಥನೆಯನ್ನು ಮನ್ನಿಸದಿರಲಾದೀತೆ? ಆ ಸಂಜೆ ಅತ್ಯಂತ ವೈಭವದೊಡನೆ ಶ್ರೀಶಾರದಾದೇವಿಯ ದಿವ್ಯ ರಥೋತ್ಸವದೊಡನೆ, ವ್ಯಾಖ್ಯಾನ ಸಿಂಹಾಸನಾಧೀಶ್ವರರಾದ ಜಗದ್ಗುರು ಶ್ರೀಚಂದ್ರಶೇಖರ ಭಾರತೀ ಸ್ವಾಮಿಗಳವರು ರಜತ ಪಲ್ಲಕ್ಕಿಯಲ್ಲೂ, ಕರ್ನಾಟಕ ರತ್ನ ಸಿಂಹಾಸನಾಧೀಶ್ವರರಾದ ಶ್ರೀಮನ್ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರವರು ಸ್ವರ್ಣಪಾಲಕಿಯಲ್ಲಿಯೂ ಮಂಡಿಸಿ ನೆರೆದಿದ್ದ ಜನಸ್ತೋಮಕ್ಕೆ ದರ್ಶನವಿತ್ತರು. ವೈದಿಕ ಸಾಮ್ರಾಜ್ಯ ಚಕ್ರವರ್ತಿಗಳನ್ನೂ, ಲೌಕಿಕ ರಾಜ್ಯಾಧಿಪರನ್ನೂ ಒಟ್ಟಾಗಿ ದರ್ಶಿಸಿದ ಆ ಪ್ರಜೆಗಳ ಪುಣ್ಯಕ್ಕೆ ಎಣೆಯುಂಟೆ?

ಮಹಾರಾಜರು ಮರುದಿನ ಬೆಳಿಗ್ಗೆ ಶ್ರೀಗುರುದೇವರ ಪಾದಪೂಜಾದಿಗಳನ್ನು ನೆರವೇರಿಸಿ ಅವರ ಆಶೀರ್ವಾದ ಪಡೆದು ತಮ್ಮ ಬಿಡಾರಕ್ಕೆ ಹಿಂದಿರುಗಿದರು. ಮುಕ್ತರಾಗಿದ್ದ ಗುರುವರ್ಯರ ಮಾಹಾತ್ಮ್ಯವನ್ನು ಬಹುಪ್ರಕಾರದಿಂದ ಉದ್ಘೋಷಿಸಿ, ಎಲ್ಲ ರೀತಿಯಲ್ಲಿಯೂ ಅವರ ಪ್ರತಿಬಿಂಬದಂತೆ ಅವರ ಸ್ಥಾನದಲ್ಲಿ ಅಭಿಷಿಕ್ತರಾಗಿದ್ದ ಶ್ರೀಚಂದ್ರಶೇಖರ ಭಾರತಿಯವರ ಸಂದರ್ಶನದಿಂದ ಶ್ರೀಮನ್ಮಹಾರಾಜರು ಆನಂದಪಟ್ಟರು.

ಅದೇ ದಿನ ಮಧ್ಯಾಹ್ನ ಶ್ರೀಶಾರದಾಂಬಾ ಸನ್ನಿಧಿಯಲ್ಲಿ ವಿದ್ವತ್ಸಭೆ ನಡೆಯಿತು. ಶ್ರೀಗುರುವರ್ಯರೇ ಅಧ್ಯಕ್ಷತೆ ವಹಿಸಿದ್ದರು. ಪಂಡಿತರ ವಾಕ್ಯಾರ್ಥಗಳಲ್ಲಿ ಅವರವರ ಪಾಂಡಿತ್ಯ, ವಿದ್ಯಾಪ್ರತಿಭೆ ಮುಂತಾದುವನ್ನು ಗುರುಗಳು ಶೀಘ್ರವಾಗಿ ಗ್ರಹಿಸಿ, ಪ್ರತಿಯೊಬ್ಬ ಪಂಡಿತರಿಗೂ ಮಠದಿಂದ ಪುರಸ್ಕಾರ, ಪಾರಿತೋಷಕಗಳನ್ನಿತ್ತು ಆಶೀರ್ವದಿಸಿದರು. ಸಾಕ್ಷಾತ್ ಮೇಧಾ ದಕ್ಷಿಣಾಮೂರ್ತಿ ಸ್ವರೂಪರಾಗಿ ಕಂಗೊಳಿಸುತ್ತಿದ್ದ ಶ್ರೀಗಳವರು ತಮ್ಮ ಸುಮಧುರವಾದ ವಾಣಿಯಿಂದ ಸಂಸ್ಕೃತದಲ್ಲಿ ಶ್ರೀಶಂಕರ ಭಗವತ್ಪಾದರ ಚರಿತ್ರೆಯನ್ನು ಸಂಗ್ರಹವಾಗಿ ನಿರೂಪಿಸಿ ಶ್ರೀಶಾರದೆಯನ್ನು ಶೃಂಗೇರಿಯಲ್ಲಿ ಸ್ಥಾಪಿಸುವುದರ ಉದ್ದೇಶವನ್ನು ಹೃದಯಂಗಮವಾಗಿ ತಿಳಿಯಪಡಿಸಿದರು. ಧರ್ಮಾಚರಣೆಯಲ್ಲಿ ಶಿಷ್ಯಜನರ ಕರ್ತವ್ಯವನ್ನು ವಿಶದವಾಗಿ ಅಪ್ಪಣೆ ಕೊಡಿಸಿದರು.

ಅದೇ ಸಂದರ್ಭದಲ್ಲಿ ಆ ಸಭೆಗೆ ಆಗಮಿಸಿದ್ದ ಬರೋಡದ ಗಾಯಕವಾಡ ಮಹಾರಾಜ ಸಯ್ಯಾಜಿರಾವ್ ಅವರ ಪ್ರತಿನಿಧಿಯು ತಮ್ಮ ಮಹಾರಾಜರು ಭಕ್ತಿಪೂರ್ವಕವಾಗಿ ಕಳುಹಿಸಿದ್ದ ವಸ್ತ್ರಾಭರಣಗಳನ್ನು ಗೌರವಪೂರ್ವಕವಾಗಿ ಸಮರ್ಪಿಸಿದರು. ಗುರುವರ್ಯರ ಸಮಾರೋಪ ಭಾಷಣವನ್ನು ಕೇಳಿದ ವಿದ್ವತ್ಸಭೆಯು ಅವರ ಪಾಂಡಿತ್ಯ, ಪ್ರತಿಭೆ ಮತ್ತು ಜ್ಞಾನಕ್ಕೆ ಬೆರಗಾಯಿತು.

ಉತ್ಸವಾದಿಗಳೆಲ್ಲವೂ ಕಳೆದ ಬಳಿಕ ಭಕ್ತವೃಂದವೂ, ವಿದ್ವನ್ಮಂಡಲಿಯೂ, ಅತಿಥಿವರ್ಗವೂ ಒಬ್ಬೊಬ್ಬರಾಗಿ ತಮ್ಮ ಸ್ವಸ್ಥಾನಗಳಿಗೆ ತೆರಳಿದರು. ಶೃಂಗೇರಿಯು ಮೊದಲಿನಂತೆ ಪ್ರಶಾಂತ ಸ್ಥಿತಿಗೆ ಬಂದಿತು. ಗುರುಗಳು ಮತ್ತೆ ತಪೋನುಷ್ಠಾನ ಗಳಲ್ಲಿ ನಿರತರಾದರು. ಬ್ರಹ್ಮಸೂತ್ರ ಪಾಠಗಳನ್ನು ಬೋಧಿಸುವ ಕೆಲ ಸಂದರ್ಭಗಳು, ಪೂಜಾದಿ ಕಾಲಗಳನ್ನು ಬಿಟ್ಟು ಉಳಿದೆಲ್ಲ ಸಮಯದಲ್ಲಿಯೂ ಏಕಾಂತದಲ್ಲಿ ಧ್ಯಾನಮಗ್ನರಾಗಿರುತ್ತಿದ್ದರು.

* * *



# ೧೭. ಮಾತಾಪಿತರ ಕಡೆಯ ದಿನಗಳು

ಬೆಂಗಳೂರಿನಿಂದ ಹೊರಟು ತರೀಕೆರೆಯಲ್ಲಿ ಯಾವ ವಾಹನವೂ ದೊರೆಯದೆ ತಮ್ಮ ಏಕಮಾತ್ರ ಪುತ್ರ ನರಸಿಂಹನನ್ನು ಕಡೆಯದಾಗಿ ಒಮ್ಮೆ ಪುತ್ರವಾತ್ಸಲ್ಯ ದೃಷ್ಟಿಯಿಂದ ಕಾಣಲು ಸಾಧ್ಯವಾಗದೇ ಗೋಪಾಲಶಾಸ್ತ್ರಿಗಳೂ, ಲಕ್ಷ್ಮಮ್ಮನವರೂ ಅತ್ಯಂತ ಪರಿತಪಿಸಿದರು. ಮಾರನೆಯ ದಿನ ವಿಶೇಷ ಶ್ರಮದಿಂದ ವಾಹನವನ್ನು ದೊರಕಿಸಿಕೊಂಡು ಬಹುಪ್ರಯಾಸಕರವಾದ ಪ್ರಯಾಣ ಬೆಳಸಿ ದಂಪತಿಗಳು ಶೃಂಗೇರಿಗೆ ಮರಳಿ ಬಂದಿದ್ದರು. ಇನ್ನೇಕೆ ತಾನೇ ಅವರಿಗೆ ಬೆಂಗಳೂರು ವಾಸ?

ಬೆಂಗಳೂರಿನಿಂದ ಶೃಂಗೇರಿಗೆ ಬಂದ ಬಳಿಕ ಅವರು ಕಂಡುದು ತಮ್ಮ ಏಕೈಕ ಪುತ್ರ, ಮಾತಾಪಿತೃವಾಕ್ಯ ಪರಿಪಾಲಕ ಆತ್ಮೀಯ ನರಸಿಂಹ ಶಾಸ್ತ್ರಿಯನ್ನಲ್ಲ. ಅವರು ದರ್ಶಿಸಿದುದು ಶೃಂಗೇರಿಯ ವ್ಯಾಖ್ಯಾನ ಸಿಂಹಾಸನಾಧೀಶ್ವರರಾದ ದಕ್ಷಿಣಾಮ್ನಾಯ ಪೀಠದ ಅಧ್ಯಕ್ಷರಾದ ಜಗದ್ಗುರು ಶ್ರೀಚಂದ್ರಶೇಖರ ಭಾರತೀ ಸ್ವಾಮಿಗಳವರನ್ನು! ಯಾರು ಭಕ್ತಿ ನಮ್ರತೆಗಳಿಂದ ತಮಗೆ ವಂದಿಸಿ ಆಶೀರ್ವಾದ ಪಡೆಯುತ್ತಿದ್ದರೋ ಅವರೇ ಇಂದು ತಮ್ಮಿಬ್ಬರ ಭಕ್ತಿಗೌರವಗಳನ್ನು ಸ್ವೀಕರಿಸಿ ಅನುಗ್ರಹಿಸುವವರಾಗಿದ್ದರು!

ಮಠದ ಅಧಿಕಾರಿವರ್ಗದವರು ಮಹಾಮಾತೃಶ್ರೀ ಲಕ್ಷ್ಮಮ್ಮನವರನ್ನೂ, ಶ್ರೀಶಾಸ್ತ್ರಿಗಳನ್ನೂ ಸ್ವಾಗತಿಸಿದರು. ಅವರೀಗ ಮಹಾಸನ್ನಿಧಾನದ ಮಾತಾಪಿತ ರಲ್ಲವೇ? ಮಠದವರೇ ಅವರ ವಸತಿ, ಊಟೋಪಚಾರಗಳಿಗೂ, ಇತರ ಅವಶ್ಯಕತೆಗಳಿಗೂ ಸರ್ವಸೌಕರ್ಯಗಳನ್ನು ಕಲ್ಪಿಸಿಕೊಟ್ಟರು. ಶಾಸ್ತ್ರಿಗಳು ಒಂದು ರೀತಿ ತೃಪ್ತಿಯಿಂದಿದ್ದುಬಿಟ್ಟರು. ಲಕ್ಷ್ಮಮ್ಮನವರಾದರೋ ತಮಗಿದ್ದ ಒಂದೇ ಒಂದು ಆಧಾರವೂ ಈ ರೀತಿ ಕೈ ಬಿಟ್ಟಿತಲ್ಲಾ ಎಂದು ಮನಸ್ಸಿನಲ್ಲಿಯೇ ಕೊರಗುತ್ತಿದ್ದರು.

ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಯವರ ಪಟ್ಟಾಭಿಷೇಕ ಕಾಲದಲ್ಲಿ ಆ ಊರಿನಲ್ಲಿ ನೋಡಿದೆಡೆಯೆಲ್ಲಾ ಸಂಭ್ರಮ ಸಂತೋಷಗಳು ಜಿನುಗುತ್ತಿದ್ದವು. ಹರ್ಷೋತ್ಸಾಹಗಳು ತುಂಬಿ ತುಳುಕುತ್ತಿದ್ದವು. ಆದರೆ ಆ ತಾಯ ಮನಸ್ಸು ಮಾತ್ರ ವ್ಯಥೆಯಿಂದ ಕೂಡಿತ್ತು. ತನ್ನದಾಗಿ, ತನ್ನ ಆಶೆ, ಆಕಾಂಕ್ಷೆಗಳ ಮೂರ್ತಿಯಾಗಿದ್ದ ವಸ್ತುವು ತನ್ನ ಕೈ ಬಿಟ್ಟಾಗ ಆಗುವ ವ್ಯಥೆಗೆ ಭರಿಸಲಾರದ

ನಷ್ಟಕ್ಕೆ ಎಣೆಯುಂಟೆ? ತಮ್ಮ ಮಗ ಜಗದ್ಗುರು ಪೀಠಾಚಾರ್ಯರಾಗಿರಬಹುದು, ಎಲ್ಲರಿಗೂ ಪರಮಪೂಜ್ಯರೂ, ಜ್ಞಾನದಾತರೂ ಇರಬಹುದು. ಆದರೆ ಆ ಮಹಾಪುರುಷನನ್ನು ಈಗ ತನ್ನ ತನುಜಾತನೆಂಬ ವಾತ್ಸಲ್ಯದಿಂದಲೂ, ಪ್ರೀತಿಯಿಂದಲೂ ಆತ್ಮೀಯತೆಯಿಂದಲೂ ಕಾಣಲು ಸಾಧ್ಯವೇ? ಮಗನೆಂಬ ವಸ್ತು ನಷ್ಟವಾದಾಗ ತಾಯಿಗೆ ಆಗುವ ದುಃಖ ಅವರ್ಣನೀಯ. ತನ್ನ ತ್ಯಾಗದಿಂದ ಲಭಿಸಿದ್ದ ತೃಪ್ತಿಯ ಆತ್ಮ ಸಂತೋಷ ಆಕೆಗಿದ್ದರೂ ಪದೇಪದೇ ಉಮ್ಮಳಿಸಿ ಬರುತ್ತಿದ್ದ ದುಃಖವು ಆ ಆತ್ಮ ಸಂತೋಷವನ್ನು ಕರಗಿಸಿ ಬಿಡುತ್ತಿತ್ತು.

ಶ್ರೀಜಗದ್ಗುರುಗಳ ಮಾತಾಪಿತರನ್ನು ಕಂಡವರು ಅವರಿಗೂ ಗೌರವ ಸಲ್ಲಿಸುತ್ತಿದ್ದರು. ಆ ಮಹಾಮಾತೆಯು ಇಂತಹ ಪೂಜ್ಯನಾದ ಪುತ್ರನನ್ನು ಪಡೆಯಲು ಎಷ್ಟು ಪುಣ್ಯವಂತೆಯಾಗಿರಬೇಕು! ಶ್ರೀಶಂಕರ ಭಗವತ್ಪಾದರ ಪರಂಪರೆಯಲ್ಲಿ ಅಭಿನವ ಶಂಕರರೆಂದು ಪ್ರಖ್ಯಾತರಾಗಿದ್ದ ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರ ಮೆಚ್ಚುಗೆಗೆ ಮೊದಲಿನಿಂದಲೂ ಪಾತ್ರರಾಗಿದ್ದು, ನಂತರ ಅವರ ಕರಕಮಲಸಂಜಾತರಾಗಿ ಜಗದ್ಗುರು ಪೀಠವನ್ನು ಅಲಂಕರಿಸಿದ ಭಾಗ್ಯವಲ್ಲವೇ ಅವರ ಸುಪುತ್ರರದ್ದು? ಅವರ ಪೂರ್ವಜನ್ಮದ ತಪಸ್ಸು ಎಷ್ಟು ಮಹಿಮಾಯುತವಾಗಿರಬೇಕು ಇಂತಹ ಪುತ್ರರತ್ನರನ್ನು ಪಡೆಯಲು? ಒಂದೇ ಎರಡೇ, ನೂರಾರು ವಿಧದಲ್ಲಿ ಬಂದವರೆಲ್ಲರೂ ಆ ಮಾತಾಪಿತರ ಧನ್ಯತೆಯನ್ನು ಹಾಡಿ ಹೊಗಳುತ್ತಿದ್ದರು.

ಆದರೂ ಪುತ್ರ ದುಃಖವೆಂಬುದು ಲಕ್ಷಮ್ಮನವರನ್ನು ಬಿಡಲೇ ಇಲ್ಲ. ಯಾರಾದರೂ ಸಮಾಧಾನಕರವಾದ ಮಾತನ್ನಾಡುವಾಗ, ಮೆಚ್ಚುಗೆಯ ಮಳೆಗರೆಯುವಾಗ, ಗುರುಗಳನ್ನು ಭಕ್ತಿಗೌರವಗಳಿಂದ ನೆನೆದಾಗ, ನಡೆದುಕೊಂಡಾಗ ಲಕ್ಷಮ್ಮನವರಿಗೆ ಸ್ವಲ್ಪ ಸಂತೋಷವಾಗುತ್ತಿತ್ತು. ಗುರುಗಳು ಪೂಜೆಯಲ್ಲಿರುವ ವೇಳೆಯಲ್ಲಿ ಇವರು ಅವರ ದರ್ಶನ ಮಾಡಿದಾಗ, ನೂರಾರು ಜನ ಅವರಿಗೆ ಶಿರಬಾಗಿ ಸಾಷ್ಟಾಂಗ ನಮಸ್ಕಾರ ಮಾಡಿದಾಗ ಆ ಮಾತೃಹೃದಯಕ್ಕೆ ಹೆಮ್ಮೆಯೆನಿಸುತ್ತಿತ್ತು. ಆದರೆ ಆ ವಾತಾವರಣದಿಂದ ಹೊರಬಂದಾಗ ಆಕೆಗೆ ಕಾಣುವುದೆಲ್ಲವೂ ಶೂನ್ಯವಾಗಿಯೇ ತೋರುತ್ತಿತ್ತು. ವಂಶಲತೆ ತಮ್ಮಲ್ಲಿಯೇ ಕೊನೆಯಾಯಿತಲ್ಲಾ ಎಂಬ ಕೊರಗು ಕಾಡುತ್ತಿತ್ತು. ಶಾಸ್ತ್ರಿಗಳೂ ಕಡಿಮೆ ದುಃಖ ಪಟ್ಟವರಲ್ಲ. ಆದರೂ ಮನಸ್ಸನ್ನು ಸಮಾಧಾನ ಸ್ಥಿತಿಯಲ್ಲಿಟ್ಟುಕೊಂಡ ಸ್ಥಿತಪ್ರಜ್ಞರವರು. ಪತ್ನಿಯನ್ನು ನಾನಾರೀತಿಯಲ್ಲಿ ಸಮಾಧಾನ ಪಡಿಸುತ್ತಿದ್ದರು ಅವರು. ತಮ್ಮ ಪುತ್ರರು ತುರೀಯಾಶ್ರಮ ಸ್ವೀಕಾರ ಮಾಡಿದುದರಿಂದ ತಮ್ಮ ಪಿತೃಗಳೆಲ್ಲರೂ ಪಾವನರಾದರೆಂದೂ, ಅಂತಹ



ಭಾಗ್ಯ ದೊರಕಲು ಬಹಳ ಪುಣ್ಯ ಮಾಡಿರಬೇಕೆಂದೂ ಹೇಳುತ್ತಿದ್ದರು. ಸುಖದುಃಖಗಳೆಲ್ಲವೂ ಮನೋಜನ್ಯವಾದವುಗಳಲ್ಲವೇ? ನಮ್ಮ ಸುತ್ತಲಿನ ವಾತಾವರಣ ಎಷ್ಟೇ ಕಷ್ಟಮಯವಾಗಿರಲಿ, ಚಿಂತಾಜನಕವಾಗಿರಲಿ, ನಿರುತ್ಸಾಹದಾಯಕವಾಗಿರಲಿ, ಮನಸ್ಸು ತಾನು ಇಚ್ಛಿಸಿದಲ್ಲಿ ಇವೆಲ್ಲವನ್ನೂ ಎದುರಿಸಿ ನಿಲ್ಲುವಷ್ಟು ಸ್ಥಿರವಾಗಬಹುದು, ಸಮರ್ಥವಾಗಬಹುದು. ಎಂತಹ ಪರಿಸ್ಥಿತಿಯಲ್ಲಿಯೂ ಮನಸ್ಸು ಧೈರ್ಯಗುಂದದೇ ಇದ್ದರೆ, ವಿಘ್ನನಿವಾರಣೆಯಾಗಿ, ಯಶಸ್ಸಿನತ್ತ ಪದಾರ್ಪಣೆ ಮಾಡಬಹುದು. ಕಷ್ಟವನ್ನೂ, ನಷ್ಟವನ್ನೂ ಕುರಿತು ಚಿಂತಿಸುತ್ತಾ ಇದ್ದರೆ ದುಃಖದಿಂದ ತಪ್ಪಿಸಿಕೊಳ್ಳಲಾದೀತೆ? ಒಮ್ಮೊಮ್ಮೆ ಹರ್ಷ ಸಂತೋಷದ ವಾತಾವರಣದಲ್ಲಿಯೂ ಮನಸ್ಸು ಹಿಂದಿನ ಕಹಿಯನ್ನು ನೆನಪಿಸಿ ಕೊಂಡು ದುಃಖಪಡುತ್ತಿರುವುದಲ್ಲವೇ? ಮನಸ್ಸಿನ ಉದ್ವೇಗವನ್ನೂ, ಚಾಂಚಲ್ಯ ವನ್ನೂ ಕಡಿಮೆ ಮಾಡಿಕೊಂಡಲ್ಲಿ ಶಾಂತಿ ಲಭಿಸದಿರುವುದೇ? ಸುಖದುಃಖಗಳಲ್ಲಿ ಮನಸ್ಸನ್ನು ಸಮಾಧಾನ ಸ್ಥಿತಿಯಲ್ಲಿಡುವುದನ್ನು ಕಲಿಯಬೇಡವೆ?

ಈ ರೀತಿಯ ನುಡಿಗಳನ್ನೂ, ಸಮಾಧಾನದ ಮಾತುಗಳನ್ನೂ ಆಗಾಗ ಕೇಳಿ ಲಕ್ಷ್ಮಮ್ಮನವರು ತಾವಿನ್ನು ದುಃಖಿಸಬಾರದು ಎಂದುಕೊಳ್ಳುತ್ತಿದ್ದರು. ಆದರೆ ಹೆತ್ತ ಕರುಳಲ್ಲವೇ? ಆ ದುಃಖದ ಆಳವನ್ನು ತಿಳಿದುಕೊಳ್ಳಲು ಯಾರಿಗೆ ಸಾಧ್ಯ? ಹದಿಮೂರು ಮಕ್ಕಳನ್ನು ಕಳೆದುಕೊಂಡು ಬದುಕಿನಲ್ಲಿಯೇ ಆಸೆ ನಂಬಿಕೆಗಳನ್ನು ಕಳೆದುಕೊಂಡಿದ್ದವರ ಜೀವನದಲ್ಲಿ ದೈವಕೃಪೆಯಿಂದ ಜನಿಸಿದ ಪುತ್ರನು ಮತ್ತೊಮ್ಮೆ ಹರ್ಷೋತ್ಸಾಹಗಳನ್ನು ತಂದನು. ಆಸೆ ನಂಬಿಕೆಗಳನ್ನು ಮೂಡಿಸಿದನು. ಶಾಸ್ತ್ರಿಗಳು ಎಲ್ಲವೂ ದೈವೇಚ್ಛೆಯಂತೆ ನಿಷ್ಕರ್ಷಿಸಲ್ಪಟ್ಟಿದೆ ಯೆಂದೂ, ಆತನು ನಡೆಸಿದಂತೆ ನಾವು ನಡೆಯುವವರು ಎಂಬ ನಂಬಿಕೆಯನ್ನು ಹೊಂದಿ ಸಮಾಧಾನವಾಗಿದ್ದವರು. ಆವರೆಗೂ ಪುತ್ರರೂಪದಲ್ಲಿ ತಮ್ಮಲ್ಲಿದ್ದ ದೈವನಿಧಿ ತಾನು ಸಂನ್ಯಾಸ ಸ್ವೀಕರಿಸಲು ಅಪ್ಪಣೆ ಕೇಳಿದಾಗ ಸ್ವಲ್ಪ ಮಟ್ಟಿಗೆ ವಿಚಲಿತರಾದರೂ, ಕೂಡಲೇ ಒಪ್ಪಿಗೆಯನ್ನಿತ್ತರು. ಆದರೆ ಲಕ್ಷ್ಮಮ್ಮನವರು ಇದ್ದೊಬ್ಬ ಪುತ್ರನೂ ತಮ್ಮ ಪಾಲಿಗಿಲ್ಲವಲ್ಲಾ ಎಂದು ಕೊರಗುತ್ತಿದ್ದರು. ತನ್ನ ಪುತ್ರನು ಎಷ್ಟೇ ಭಾಗ್ಯಶಾಲಿಯೂ, ಯೋಗಶಾಲಿಯೂ ಆಗಿರಲಿ ಆತನು ತನ್ನ ಕರುಳಿನಿಂದ ದೂರವಾದಾಗ ಆಗುವ ದುಃಖ ಅಷ್ಟಿಷ್ಟಲ್ಲ. ಆತನು ತನ್ನ ತಾಯಿಯ ಸುಪುತ್ರನಾಗಿರುವಾಗ ಇರುವಂತಹ ಆತ್ಮೀಯ ಭಾವನೆ, ವಾತ್ಸಲ್ಯ ಭಾವನೆಗಳು ಆತನು ತಮ್ಮ ಸಂಬಂಧವನ್ನು ಕಳಚಿಕೊಂಡು ಎಂತಹ ಉನ್ನತ ಪದವಿಯಲ್ಲಿದ್ದರೂ ಬಾರದು.

ನಿಧಾನವಾಗಿ ಲಕ್ಷಮ್ಮನವರು ಪರಿಸ್ಥಿತಿಗೆ ಹೊಂದಿಕೊಳ್ಳುತ್ತಾ ಬಂದರು.

ಆಗೀಗ ಕೊರಗುತ್ತಿದ್ದ ಮನಸ್ಸನ್ನು ಬಲವಂತವಾಗಿ ಬೇರೆ ಕಡೆಗೆ ತಿರುಗಿಸಲು ಸಮರ್ಥರಾದರು. ಮಠದಲ್ಲಿ ಆಗಾಗ ನಡೆಯುತ್ತಿದ್ದ ಉತ್ಸವ ಪೂಜಾದಿಗಳಲ್ಲಿ ಶ್ರೀಚಂದ್ರಶೇಖರ ಭಾರತಿಗಳನ್ನು ವಾತ್ಸಲ್ಯಭರಿತರಾಗಿ ಕಣ್ತುಂಬ ನೋಡುತ್ತಿದ್ದರು. ತಮ್ಮ ತೊಡೆಯಲ್ಲಾಡಿ ಬೆಳೆದ ಕೂಸು ಪರಮ ಪೂಜ್ಯಪದದಲ್ಲಿರುವುದನ್ನು ಕಂಡು ಹರ್ಷಪುಲಕಿತರಾಗುತ್ತಿದ್ದರು. ಅಲ್ಲೋಲಕಲ್ಲೋಲವಾಗುತ್ತಿದ್ದ ಮನಸ್ಸನ್ನು ಬಿಗಿಹಿಡಿದು ಅದು ತಮ್ಮ ವಸ್ತುವಲ್ಲ, ತಮಗೆ ಸೇರತಕ್ಕದಲ್ಲ, ಶ್ರೀಶಾರದಾಂಬೆಗೆ ಸೇರಿದ್ದು ಎಂಬ ಭಾವನೆಯಿಂದ ಸಮಾಧಾನ ತಂದುಕೊಳ್ಳುತ್ತಿದ್ದರು.

ಆದರೆ ವಿಧಿ ಅವರನ್ನು ಅಲ್ಲಿಗೇ ಬಿಡಲಿಲ್ಲ. ಆತ್ಮತೃಪ್ತರೂ, ಪೂಜಾನುಷ್ಠಾನ ಪರರೂ ಆಗಿದ್ದ ಶ್ರೀಗೋಪಾಲಶಾಸ್ತ್ರಿಗಳು ಕ್ರಿ.ಶ. ೧೯೧೯ರಲ್ಲಿ ಶಾಂತಿಯಿಂದಲೂ, ತೃಪ್ತಿಯಿಂದಲೂ ದೇಹವನ್ನು ತ್ಯಜಿಸಿದರು. ಇದ್ದ ಒಬ್ಬನೇ ಮಗನು ಸಂನ್ಯಾಸದಿಂದ ಸರ್ವಸ್ವವನ್ನೂ ತ್ಯಜಿಸಿ ದೂರವಾದುದು, ವೃದ್ಧಾಪ್ಯದಲ್ಲಿ ಪತಿಯನ್ನು ಕಳೆದುಕೊಂಡುದು ಲಕ್ಷಮ್ಮನವರಿಗೆ ಭರಿಸಲಾಗದ ದುಃಖವನ್ನು ತಂದಿತು. ಬರಸಿಡಿಲಿನಂತೆ ಬಂದೆರಗಿದ ವಿಪತ್ತಿನಲ್ಲಿ ಆಕೆ ತಲ್ಲಣಿಸಿ ಹೋದರು. ಜೀವನದ ಕಷ್ಟ ಪರಂಪರೆಗಳಲ್ಲಿ ಸಿಕ್ಕಿ ಜರ್ಜರಿತರಾಗಿದ್ದ ಆ ತಾಯಿ ಅತ್ಯಂತ ನಿರ್ವಿಣ್ಣರಾದರು. ಮೊದಲಿನಿಂದಲೂ ದುಃಖದಲ್ಲಿಯೇ ನೊಂದ ಜೀವಕ್ಕೆ ಕಡೆಗೂ ದುಃಖವೇ ಪ್ರಾಪ್ತವಾಯಿತು. ಯಾರೆಷ್ಟು ಸಮಾಧಾನ ಮಾಡಿದರೂ ಉಪಶಮನವಾಗುವಂತಹುದೇ ಆ ದುಃಖ? ದುಃಖದಲ್ಲಿಯೇ ಕೊರಗಿ ಕೊರಗಿ ಆಕೆ ಕ್ರಿ.ಶ. ೧೯೨೨ರಲ್ಲಿ ಪರಲೋಕವಾಸಿಯಾದರು.

ಲಕ್ಷ್ಮಮ್ಮನವರು ಜೀವನವಿಡೀ ಕಷ್ಟನಷ್ಟಗಳಲ್ಲಿ ಬೆಂದು ದುಃಖಪರಂಪರೆಯಲ್ಲಿ ಪರಿತಪಿಸಿ ಕಟ್ಟಕಡೆಗೆ ಬೆಳಕು ಕಂಡೀತೇನೋ, ಮುಳುಗುತ್ತಿರುವ ದೋಣಿಗೆ ಆಧಾರ ಸಿಕ್ಕಿತೇನೋ ಎಂಬ ಆಶಾಭಾವನೆ ಮೂಡಿಸಿದ ಒಬ್ಬನೇ ಮಗನನ್ನೂ ತ್ಯಾಗ ಮಾಡಬೇಕಾಯಿತು. ದುಃಖದ ಸಮಯದಲ್ಲಿ ಧೈರ್ಯ, ಸ್ಥೈರ್ಯಗಳನ್ನು ತುಂಬುತ್ತಿದ್ದ ಪತಿಯನ್ನು ಕಳೆದುಕೊಳ್ಳಬೇಕಾಯಿತು. ಹೀಗೆ ಆ ತಾಯಿಯು ಇಹ ಜನ್ಮದಲ್ಲಿಯೇ ದುಃಖವನ್ನು ಪೂರ್ಣವಾಗಿ ಅನುಭವಿಸಿ ಕಣ್ಮುಚ್ಚಿದರು. ಇನ್ನು ಅಂತಹವರಿಗೆ ಪುನರ್ಜನ್ಮವೆಲ್ಲಿಯದು? ಇಹಜನ್ಮದಲ್ಲಿಯೇ ಎಲ್ಲಾ ಕರ್ಮಗಳೂ ಸವೆದಿರುವಾಗ? ಪೂತಾತ್ಮರವರು, ಚಿನ್ನದಂತೆ ಬೆಂದು ಬೆಂದು ಶುದ್ಧವಾದ ಜೀವಿ ಆ ತಾಯಿ.

* * *



# ೧೮. ಗುರುದೇವರ ತೀರ್ಥಕ್ಷೇತ್ರ ಯಾತ್ರೆ

ಕುಂಭಾಭಿಷೇಕವಾದ ಬಳಿಕ ಸುಮಾರು ಏಳು ವರ್ಷಗಳ ಕಾಲ ಗುರುದೇವರು ತಪೋನಿರತರಾಗಿದ್ದರು. ಕ್ಲುಪ್ತಕಾಲದಲ್ಲಿ ಶ್ರೀಶಾರದಾಂಬಾ ದರ್ಶನಕ್ಕೂ, ತಮ್ಮ ಗುರುವರ್ಯರ ಅಧಿಷ್ಠಾನಕ್ಕೂ ದಯಮಾಡಿಸುತ್ತಿದ್ದರು. ಆಗಲೇ ಇತರರಿಗೆ ದರ್ಶನವೂ, ಭೇಟಿಯೂ ದೊರಕಬೇಕಾಗಿದ್ದಿತು. ಕೆಲವೇ ಜನ ಯೋಗ್ಯರಾದ ಶಿಷ್ಯರಿಗೆ ಅವರ ಅರ್ಹತೆಯನ್ನು ಪರೀಕ್ಷಿಸಿ ತಿಳಿದುಕೊಂಡ ಬಳಿಕ ಪಾಠಪ್ರವಚನ ನಡೆಸುತ್ತಿದ್ದರು. ಉಳಿದ ಕಾಲದಲ್ಲೆಲ್ಲಾ ಅವರ ದರ್ಶನ ಲಭ್ಯವಾಗುವುದೂ ಸಹ ಅಸಾಧ್ಯವಾಗಿತ್ತು. ತಮ್ಮ ಅಪಾರ ಜ್ಞಾನವನ್ನು ಅನುಭವಕ್ಕೆ ತಂದುಕೊಳ್ಳುತ್ತಿದ್ದ ಗುರುಗಳು ಯೋಗಸಾಧನೆಯಲ್ಲಿಯೂ ಸಹ ಮುಂದುವರೆದಿದ್ದರು. ವಾಸನಾಕ್ಷಯವನ್ನೂ, ಮನೋನಾಶವನ್ನೂ ಸುಲಭದಿಂದ ಸಾಧಿಸಿ ಗುರುದೇವರು ಕ್ರಿ.ಶ.೧೯೨೩ರ ವೇಳೆಗಾಗಲೇ ಜೀವನ್ಮುಕ್ತ ಸ್ಥಿತಿಯನ್ನು ಮುಟ್ಟಿದ್ದರು.

ಈ ಮಧ್ಯೆ ಗುರುಗಳ ದರ್ಶನಕ್ಕಾಗಿ ಕಾತರರಾದ ಭಕ್ತರಿಂದಲೂ, ಶಿಷ್ಯವರ್ಗದವರಿಂದಲೂ ಗುರುಗಳು ಸಂಚಾರ ಕೈಗೊಳ್ಳಬೇಕೆಂದು ಪದೇಪದೇ ಪ್ರಾರ್ಥನೆಗಳು ಬರುತ್ತಲೇ ಇದ್ದವು. ಆದರೆ ಈ ವಿಷಯವಾಗಿ ಗುರುಗಳು ಯಾವ ಆಲೋಚನೆಯನ್ನೂ ಮಾಡಿರಲೇ ಇಲ್ಲ. ಹೀಗಿರುವಾಗ ಮೈಸೂರಿನ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರು ಶ್ರೀ ಗುರುಗಳಿಗೆ ಪ್ರಾರ್ಥನಾಪತ್ರವನ್ನು ಕಳುಹಿಸಿ ಶ್ರೀಗುರುದೇವರು ಮೈಸೂರಿಗೆ ದಯಮಾಡಿಸಿ ತಮ್ಮನ್ನೂ, ತಮ್ಮ ಕುಟುಂಬ ವರ್ಗವನ್ನೂ, ಪ್ರಜೆಗಳನ್ನೂ ಆಶೀರ್ವದಿಸಿ ಅನುಗ್ರಹಿಸಬೇಕೆಂದು ಕೇಳಿಕೊಂಡಿದ್ದರು. ಅಲ್ಲಿಯವರೆಗೆ ಸಂಚಾರದ ವಿಷಯವನ್ನೇ ಆಲೋಚಿಸದಿದ್ದ ಗುರುಗಳು ತಮ್ಮ ಗುರುಗಳ ಸಮಾಧಿ ಮಂದಿರದಲ್ಲಿ ಧ್ಯಾನ ನಿರತರಾಗಿದ್ದು ಅಂತಃಪ್ರೇರಣೆಯ ಮೂಲಕ ಸಂಚಾರಕ್ಕೆ ತಮ್ಮ ಗುರುವರ್ಯರ ಅಪ್ಪಣೆಯನ್ನು ಪಡೆದು, ಅನಂತರ ಸಂಚಾರಕ್ಕಾಗಿ ಸಮಸ್ತ ಸಿದ್ಧತೆಗಳನ್ನೂ ಮಾಡಿಕೊಳ್ಳುವಂತೆ ಕಾರ್ಯಭಾರಿಗಳಿಗೆ ಅಪ್ಪಣೆಯಿತ್ತರು.

ಶೃಂಗೇರಿಯಿಂದ ಪ್ರಯಾಣ ಬೆಳೆಸುವಾಗ ತಮ್ಮ ಗುರುಗಳು ಆಚರಿಸುತ್ತಿದ್ದಂತೆಯೇ ಶ್ರೀ ಶಾರದಾಂಬಾ ಸನ್ನಿಧಿಗೆ ದಯಮಾಡಿಸಿ ಪೂಜಾದಿಗಳನ್ನು ನೆರವೇರಿಸಿ, ತಮ್ಮ ಸಂಚಾರದಿಂದ ಎಲ್ಲರಿಗೂ ಅಭ್ಯುದಯವಾದಲ್ಲಿ,

ಲೋಕಕಲ್ಯಾಣವಾದಲ್ಲಿ, ತಮಗೆ ಸಂಚಾರಕ್ಕೆ ಅಪ್ಪಣೆ ಕೊಡಬೇಕೆಂದು ಪ್ರಾರ್ಥಿಸಿದರು. ಜಗನ್ಮಾತೆಯಿಂದ ಅನುಜ್ಞೆ ಪಡೆದು ಭಕ್ತಾನುಗ್ರಹಕ್ಕಾಗಿಯೂ, ಶಿಷ್ಯರನ್ನು ಸನ್ಮಾರ್ಗ ಪ್ರವರ್ತಕರನ್ನಾಗಿ ಮಾಡುವುದಕ್ಕಾಗಿಯೂ ಮತ್ತು ನಾನಾ ತೀರ್ಥಕ್ಷೇತ್ರಗಳಲ್ಲಿ ವ್ಯಕ್ತವಾಗಿರುವ ಭಗವಂತನ ನಾನಾ ರೂಪವಿಲಾಸ ವೈಭವಗಳ ದರ್ಶನಕ್ಕಾಗಿಯೂ ಜಗದ್ಗುರುವರ್ಯರು ಪ್ರಯಾಣವನ್ನು ಆರಂಭಿಸಿದರು.

ಕ್ರಿಸ್ತಶಕ ೧೯೨೪ರಲ್ಲಿ ಅವಶ್ಯಕತೆಯಿದ್ದಷ್ಟೇ ಪರಿವಾರದೊಡನೆ ಮಿತವಾದ ಬಿರುದುಬಾವಲಿಗಳು, ರಾಜಲಾಂಛನಗಳೊಡನೆ ಸಂಪ್ರದಾಯಕ್ಕನುಗುಣವಾಗಿ ಹೊರಟ ಗುರುವರ್ಯರಿಗೆ ದಾರಿಯುದ್ದಕ್ಕೂ ಸಂಭ್ರಮದ ಸ್ವಾಗತ ದೊರೆಯಿತು. ತಳಿರುತೋರಣಗಳಿಂದಲೂ, ಹಸಿರುವಾಣಿ ಮಂಟಪಗಳಿಂದಲೂ ತಮ್ಮ ಉತ್ಸಾಹವನ್ನು ವ್ಯಕ್ತಪಡಿಸುತ್ತಿದ್ದ ಜನತೆ ಗುರುವರ್ಯರು ಹೋದೆಡೆಯಲ್ಲೆಲ್ಲಾ ವೈಭವದ ವಿಜೃಂಭಣೆಯ ಸ್ವಾಗತ ನೀಡಿತು. ದರ್ಶನಕ್ಕಾಗಿ ಕಾತರಿಸಿ ಭಕ್ತಿಗೌರವಗಳನ್ನು ಸಮರ್ಪಿಸುತ್ತಿದ್ದ ಜನಜಂಗುಳಿಯು ಗುರುದೇವರ ದರ್ಶನವಾದೊಡನೆಯೇ ಮುಗಿಲು ಮುಟ್ಟುವಂತೆ ಜಯಘೋಷ ಮಾಡುತ್ತಿದ್ದರು. ಎಲ್ಲೆಲ್ಲಿಯೂ ಹರ್ಷಸಂತೋಷಗಳು ತುಂಬಿ ತುಳುಕುತ್ತಿದ್ದವು. ಹೀಗೆ ದಾರಿಯುದ್ದಕ್ಕೂ ತಮಗಾಗಿ ಕಾದು ಭಕ್ತಿ, ಗೌರವ ಸಮರ್ಪಣೆ ಮಾಡುತ್ತಿದ್ದ ಜನತೆಗೆ ಗುರುಗಳು ಸವಿಯಾದ ಮಾತುಗಳಲ್ಲಿ ಎಲ್ಲರೂ ಆಚರಿಸಬಹುದಾದ ಬೋಧನೆಗಳನ್ನು ಉಪದೇಶಿಸುತ್ತ, ಜೀವನಾದರ್ಶಗಳನ್ನು ಅನುಷ್ಠಾನಕ್ಕೆ ತರುವ ರೀತಿಯನ್ನು ವಿವರಿಸುತ್ತ, ಜನತೆಯು ಕಳೆದುಕೊಳ್ಳುತ್ತಿದ್ದ ಧಾರ್ಮಿಕ ಶ್ರದ್ಧೆ, ನಂಬಿಕೆಗಳನ್ನು ತುಂಬಿಕೊಡುತ್ತಾ ಮೈಸೂರಿಗೆ ಆಗಮಿಸಿದರು.

ರಾಜಧಾನಿಯಲ್ಲಂತೂ ಜನಜಾತ್ರೆಯೇ ನೆರೆದಿತ್ತು. ಎಲ್ಲೆಲ್ಲಿಯೂ ನವರಾತ್ರಿಯ ಸಂಭ್ರಮ, ವಿಜೃಂಭಣೆ, ವೈಭವ ಕಾಣುತ್ತಿತ್ತು. ಉತ್ಸಾಹ ಚಟುವಟಿಕೆಗಳು ತುಂಬಿ ತುಳುಕಾಡುತ್ತಿದ್ದವು. ಶ್ರೀಮನ್ಮಹಾರಾಜರಿಂದ ಸ್ವಾಗತಿಸಲ್ಪಟ್ಟ ಗುರುವರ್ಯರು ರಾಜರಭಕ್ತಿ, ಶ್ರದ್ಧೆಗಳಿಗೆ ಮೆಚ್ಚುಗೆಯನ್ನು ತೋರಿದರು. ಜನತೆಯಂತೂ ಗುರುಗಳು ಪರಿಕ್ರಮಣ ಮಾಡುವ ದಾರಿಯಲ್ಲಿ ಗಂಟೆಗಂಟೆಗಳ ಕಾಲ ಕಾದು ಗುರುಗಳ ಸವಾರಿ ಚಿತ್ತೈಸಿದೊಡನೆಯೇ ಆನಂದ ಸಂಭ್ರಮಗಳಿಂದ ಕರತಾಡನ, ಜಯಘೋಷಗಳನ್ನು ಮಾಡುತ್ತಿದ್ದರು.

ತಮ್ಮ ಪ್ರಾರ್ಥನೆಯಂತೆ ಶ್ರೀಗುರುಗಳು ಮೈಸೂರಿಗೆ ದಯಮಾಡಿಸಿದುದು ಮಹಾರಾಜರಿಗೆ ಅಪರಿಮಿತ ಸಂತೋಷವನ್ನು ಉಂಟುಮಾಡಿತ್ತು.



ಶ್ರೀ ವಿದ್ಯಾರಣ್ಯರ ಕಾಲದಲ್ಲಿ ಆರಂಭವಾದ ಗುರುಶಿಷ್ಯ ಸಂಬಂಧವು ಮಧ್ಯೆ ಲುಪ್ತವಾದಂತೆ ಕಂಡಿದ್ದರೂ, ಕರ್ನಾಟಕ ಸಿಂಹಾಸನದ ಮೇಲೆ ಜಗದ್ಗುರುಗಳ ಆಶೀರ್ವಾದ ಅನುಗ್ರಹಗಳು ಶಾಶ್ವತವಾಗಿಯೇ ಇದ್ದವು. ಮಹಾರಾಜರು ಗುರುವರ್ಯರನ್ನು ಪಾದಪೂಜಾದಿಗಳಿಂದ ವಿಶೇಷವಾಗಿ ಸತ್ಕರಿಸಿ ಅವರಿಂದ ಆಶೀರ್ವಾದವನ್ನು ಪಡೆದರು. ದರ್ಶನಮಾತ್ರದಿಂದಲೇ ಸರ್ವಸಂಶಯಗಳನ್ನೂ ಪರಿಹರಿಸಿ ಜ್ಞಾನಮಾರ್ಗದತ್ತ ಕೊಂಡೊಯ್ಯುವ ಗುರುವರ್ಯರಿಂದ ವಿಶೇಷವಾದ ಉಪದೇಶಗಳನ್ನು ಪಡೆದರು.

ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರು ಜನಿಸಿ, ತಮ್ಮ ಬಾಲ್ಯವನ್ನು ಕಳೆದಿದ್ದ ಮೈಸೂರಿನ ಮನೆಯನ್ನು ಶ್ರೀಮಠದವರು ಈ ಮೊದಲೇ ಪಡೆದುಕೊಂಡಿದ್ದರು. ಆ ಹಳೆಯ ಮನೆಯಿದ್ದ ಸ್ಥಳದಲ್ಲಿ ಭವ್ಯ ಮಂದಿರವೊಂದನ್ನು ನಿರ್ಮಿಸಿ ಅಲ್ಲಿ ಶ್ರೀನೃಸಿಂಹಭಾರತೀ ಸ್ವಾಮಿಗಳ ಅಮೃತ ಶಿಲಾಮೂರ್ತಿಯನ್ನು ಸ್ಥಾಪಿಸುವ ಏರ್ಪಾಟುಗಳೂ ನಡೆದಿದ್ದವು. ಆ ಕೆಲಸದಲ್ಲಿ ಮಠದ ಕಾರ್ಯಭಾರಿಯಾಗಿದ್ದ ಶ್ರೀಕಂಠಶಾಸ್ತ್ರಿಗಳೂ, ಅರಮನೆಯ ಧರ್ಮಾಧಿಕಾರಿಯಾಗಿದ್ದ ಕುಣಿಗಲ್ ರಾಮಶಾಸ್ತ್ರಿಗಳೂ ಮತ್ತು ಮೈಸೂರು ಸರ್ಕಾರದ ಉನ್ನತ ಹುದ್ದೆಯಲ್ಲಿದ್ದ ಶ್ರೀಕಂಠೇಶ್ವರ ಅಯ್ಯರ್‌ರವರೂ ವಿಶೇಷ ಶ್ರದ್ಧೆ ವಹಿಸಿದ್ದರು. ಜಗದ್ಗುರುಗಳವರು ಮೈಸೂರಿಗೆ ದಯಮಾಡಿಸಿದ್ದ ಸಂದರ್ಭದಲ್ಲಿ ಅವರ ಅಮೃತ ಹಸ್ತದಿಂದಲೇ ಈ ಸ್ಮೃತಿಮಂದಿರವನ್ನು ಆರಂಭಗೊಳಿಸಬೇಕೆಂದು ಭಕ್ತವರ್ಗದವರು ಅಪೇಕ್ಷೆಪಟ್ಟು, ತಮ್ಮ ಪ್ರಾರ್ಥನೆಯನ್ನು ಗುರುವರ್ಯರಲ್ಲಿ ಅರಿಕೆ ಮಾಡಿಕೊಳ್ಳಲು ಗುರುಗಳು ಕೂಡಲೇ ಒಪ್ಪಿಗೆಯನ್ನಿತ್ತರು.

ಮಹಾಮಹಿಮರೂ ಜ್ಞಾನಿಗಳೂ, ಯೋಗಿಶ್ರೇಷ್ಠರೂ, ಪ್ರಖ್ಯಾತರೂ ಆಗಿದ್ದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳವರ ದಿವ್ಯ ಸ್ಮೃತಿಮಂದಿರದ ಆರಂಭೋತ್ಸವವೂ, ಗುರುವರ್ಯರ ಮೂರ್ತಿಸ್ಥಾಪನೆಯೂ ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಗಳವರ ಅಮೃತಹಸ್ತದಿಂದಲೇ ನೆರವೇರಿಸಲ್ಪಟ್ಟವು. ಆ ಮಂದಿರಕ್ಕೆ "ಅಭಿನವ ಶಂಕರಾಲಯ"ವೆಂದು ನಾಮಕರಣವಾಯಿತು. ಅಲ್ಲಿ ವೇದಾಂತ ಮೀಮಾಂಸಾ ಶಾಸ್ತ್ರಗಳ ಪ್ರವಚನಕ್ಕೆ ಏರ್ಪಾಟು ಸಹ ನಡೆಯಿತು. ಆ ಮಂದಿರದ ಆರಂಭೋತ್ಸವಕ್ಕೆ ಶ್ರೀಮನ್ಮಹಾರಾಜರೂ, ಅನೇಕ ಅಧಿಕಾರಿವರ್ಗದವರೂ, ಅತ್ಯಧಿಕ ಸಂಖ್ಯೆಯಲ್ಲಿ ಭಕ್ತವರ್ಗದವರೂ ಆಗಮಿಸಿದ್ದರು. ತಪಶ್ಚಕ್ರವರ್ತಿಗಳನ್ನೂ, ರಾಜರ್ಷಿಗಳನ್ನೂ ಒಟ್ಟಾಗಿ ದರ್ಶನ ಮಾಡಿದ ಜನ ಭಕ್ತಿಸಂತೋಷಗಳಿಂದ ಪುಲಕಿತರಾದರು.

ಶ್ರೀಗುರುಗಳು ಮೈಸೂರಿನಲ್ಲಿ ತಂಗಿದ್ದಾಗ ಮತ್ತೊಮ್ಮೆ ದಕ್ಷಿಣದೇಶದ

ಭಕ್ತರಿಂದ ಪ್ರಾರ್ಥನೆ ಬಂದಿತು. ಈ ಬಾರಿಯಂತೂ ಅವರು ಅತ್ಯಂತ ಕಳಕಳಿಯಿಂದ ತಮ್ಮ ಪ್ರಾಂತ್ಯದಲ್ಲಿ ಸಂಚರಿಸಿ ಅನುಗ್ರಹಿಸಬೇಕೆಂದು ಗುರುಗಳನ್ನು ಬೇಡಿಕೊಂಡಿದ್ದರು. ಆ ಸಲುವಾಗಿ ಗುರುಗಳು ದಕ್ಷಿಣದೇಶದ ಯಾತ್ರೆಯನ್ನು ಕೈಗೊಳ್ಳಲು ನಿರ್ಧರಿಸಿ ರಾಜರನ್ನೂ, ರಾಜಕುಟುಂಬವನ್ನೂ, ಮೈಸೂರಿನ ಪ್ರಜೆಗಳನ್ನೂ ಆಶೀರ್ವದಿಸಿ ಫಲಮಂತ್ರಾಕ್ಷತೆಗಳನ್ನಿತ್ತು ಮುಂದಕ್ಕೆ ನಂಜನಗೂಡಿನ ಮೂಲಕ ಪ್ರಯಾಣ ಬೆಳಸಿದರು.

* * *



# ೧೯. ಆಧ್ಯಾತ್ಮಿಕ ಜ್ಞಾನತೀರ್ಥ

ಕನ್ನಡನಾಡಿನಿಂದ ತಮಿಳುನಾಡಿಗೆ ಸದಾ ಎರಡು ಮಹಾತೀರ್ಥಗಳು ಪ್ರವಹಿಸುತ್ತಲೇ ಇರುತ್ತವೆ. ಒಂದು ತೀರ್ಥ ತಾನು ಹರಿದೆಡೆಯೆಲ್ಲಾ ನೆಲವನ್ನು ತಣಿಸಿ ಸಂತೋಷವನ್ನು ನೀಡುವ ಕಾವೇರಿಯಾದರೆ, ಮತ್ತೊಂದು ಸಹ್ಯಾದ್ರಿಯ ತಪ್ಪಲಲ್ಲಿರುವ ಶೃಂಗೇರಿಯಿಂದ ಪ್ರವಹಿಸುತ್ತಿರುವ, ಶಾಂತಿಯನ್ನೂ, ಆನಂದ ವನ್ನೂ ತಂದುಕೊಡುವ ಜ್ಞಾನತೀರ್ಥ. ಒಂದು ತೀರ್ಥ ಪ್ರಕೃತಿದತ್ತವಾದರೆ ಇನ್ನೊಂದು ದೈವದತ್ತವಾದುದು. ಒಂದು ಲೌಕಿಕ ಸಂಪದಭಿವೃದ್ಧಿಗೆ ಕಾರಣವಾದರೆ ಮತ್ತೊಂದು ಆಧ್ಯಾತ್ಮಿಕ ಸಂಪದಭಿವೃದ್ಧಿಗೆ ಕಾರಣವಾದುದು. ಭರತಖಂಡದ ಈ ಎರಡು ಪ್ರಾಂತ್ಯಗಳನ್ನೂ ಪ್ರೀತಿವಿಶ್ವಾಸಗಳಲ್ಲಿ ಬೆಸೆಯಲು ಈ ಎರಡು ತೀರ್ಥಗಳು ಸಾಧನವಾಗಿವೆ. ಹೀಗಾಗಿ ಕಾವೇರಿಯೆಂದರೆ ತಮಿಳುನಾಡಿನವರಿಗೆ ಅತ್ಯಂತ ಪ್ರೀತಿ, ಶೃಂಗೇರಿಯ ಗುರುಗಳೆಂದರೆ ಅತ್ಯಂತ ಭಕ್ತಿ. ಜೀವನದ ಗುರಿಯನ್ನು ತಲುಪಲು ಆಧ್ಯಾತ್ಮಿಕ ತತ್ತ್ವಾನುಷ್ಠಾನ ಅಗತ್ಯವಿದ್ದಂತೆಯೇ ದೇಶದ ಆರ್ಥಿಕ ಅಭಿವೃದ್ಧಿಗೆ ನೀರಾವರಿಯ ಸೌಲಭ್ಯವೂ ಅಗತ್ಯವಲ್ಲವೇ? ಕಾವೇರಿಯು ಸಂಪದಭಿವೃದ್ಧಿಯ ಸಂಕೇತವಾಗಿ ಸುಖಸಂತೋಷಗಳನ್ನು ಕೊಟ್ಟರೆ, ಶೃಂಗೇರಿಯ ಪೀಠವು ಆಧ್ಯಾತ್ಮಿಕ ಸಂಪತ್ತನ್ನು ಹೆಚ್ಚಿಸಿ ಆನಂದವನ್ನೂ, ಶಾಂತಿಯನ್ನೂ ಕೊಡುವಂತಹುದು.

ಶ್ರೀ ಗುರುವರ್ಯರು ಮೈಸೂರಿನಿಂದ ನಂಜನಗೂಡು, ಚಾಮರಾಜನಗರ ಗಳ ಮಾರ್ಗವಾಗಿ ಘಟ್ಟವನ್ನು ಇಳಿದು ತಮಿಳುನಾಡಿನ ಸತ್ಯಮಂಗಲಕ್ಕೆ ಆಗಮಿಸಿದರು. ದಾರಿಯುದ್ದಕ್ಕೂ ಭಕ್ತಿ, ಗೌರವಪೂರ್ವಕವಾಗಿ ಜನ ನೀಡಿದ ಸ್ವಾಗತವನ್ನು ಸ್ವೀಕರಿಸಿ, ಎಲ್ಲರಿಗೂ ಶುಭವನ್ನೂ, ಮಂಗಳವನ್ನೂ ಬಯಸುತ್ತ ತಮಿಳುನಾಡಿನ ಪ್ರಥಮ ವಾಸ್ತವ್ಯಕ್ಕೆ ದಯಮಾಡಿಸಿದರು. ಅಲ್ಲಿಯಂತೂ ಅಪೂರ್ವವೂ, ಅಸಾಮಾನ್ಯವೂ ಆದ ಸ್ವಾಗತ ದೊರಕಿತ್ತು. ತಮಿಳುನಾಡಿನ ಜನ ಗುರುಗಳೆಂದರೆ ಸಾಕ್ಷಾತ್ ದೈವವೇ ಎಂದು ಭಾವಿಸುವ ಭಾವುಕರು. ಅವರ ಭಕ್ತಿಗೌರವಗಳಿಗೆ ಎಣೆಯೇ ಇಲ್ಲ. ಗುರುಗಳ ದರ್ಶನದಲ್ಲಿ ತಲ್ಲೀನರಾಗಿ ಆನಂದಬಾಷ್ಪ ಸುರಿಸುತ್ತಾ ಮೈಮರೆವಂತಹ ಸಂಸ್ಕಾರವುಳ್ಳವರು ಅಲ್ಲಿಯ ಶಿಷ್ಯವರ್ಗದವರು.

ಹೋದೆಡೆಯಲ್ಲೆಲ್ಲಾ ಗುರುಗಳು ಸಾಧಾರಣವಾಗಿ ಕನ್ನಡ, ತೆಲುಗು, ಸಂಸ್ಕೃತ ಭಾಷೆಗಳಲ್ಲಿ ಆಯಾ ಸಭೆಗನುಗುಣವಾಗಿ, ಸಂದರ್ಭಾನುಸಾರವಾಗಿ

ಮಾತನಾಡುತ್ತಿದ್ದರು. ವಿದ್ವತ್ಸಭೆಗಳಲ್ಲಿ ಅಧ್ಯಕ್ಷ ಭಾಷಣ, ಅನುಗ್ರಹ ಭಾಷಣಗಳು ಸಂಸ್ಕೃತದಲ್ಲಿಯೇ ನಡೆಯುತ್ತಿದ್ದವು, ಆಯಾ ಸಭೆಗನುಗುಣವಾಗಿ. ಮನೆಯ ಭಾಷೆ ತೆಲುಗು, ಶಾಲೆಯಲ್ಲಿ ಕಲಿತು ಓದಿದ ಭಾಷೆ ಕನ್ನಡ, ಧಾರ್ಮಿಕ ವಿದ್ಯಾಭ್ಯಾಸ ನಡೆದುದು ಸಂಸ್ಕೃತದಲ್ಲಿ. ಈ ಮೂರೂ ಭಾಷೆಗಳಲ್ಲಿಯೂ ಹೃದಯಂಗಮವಾಗಿ ಮಾತನಾಡುವ ಕಲೆ ಗುರುಗಳಿಗೆ ಸಿದ್ಧಿಸಿತ್ತು. ಆದರೆ ಶ್ರೀಗಳವರು ಸತ್ಯಮಂಗಲದಲ್ಲಿದ್ದಾಗ ಒಂದು ವಿಶೇಷ ಘಟನೆ ನಡೆಯಿತು.

ಅಲ್ಲಿನ ಕೆಲ ಜನಪ್ರಮುಖರು ಮಠದ ಕಾರ್ಯಭಾರಿಯಾದ ಶ್ರೀಕಂಠಶಾಸ್ತ್ರಿಗಳವರನ್ನು ಭೇಟಿ ಮಾಡಿ "ಶ್ರೀಗುರುಗಳು ಇಂದು ತಮಿಳಿನಲ್ಲಿ ನಾಲ್ಕು ಮಾತನ್ನಾದರೂ ಆಡಿ ಅನುಗ್ರಹಿಸಬೇಕು. ಶೃಂಗೇರಿಯ ಗುರುಗಳು ಸಾಧಾರಣವಾಗಿ ಇತ್ತ ಕಡೆ ಸಂಚಾರ ಬಂದಾಗ ಸಂಸ್ಕೃತದಲ್ಲಿಯೇ ಉಪದೇಶವೀಯುತ್ತಾರೆ. ಸಂಸ್ಕೃತವು ಬಹುಜನಕ್ಕೆ ಅರ್ಥವಾಗದ ಭಾಷೆಯಾಗಿದೆ. ಆದ್ದರಿಂದ ಶ್ರೀಗಳವರು ತಮಿಳಿನಲ್ಲಿ ನಾಲ್ಕು ಮಾತನ್ನಾದರೂ ಆಡಿ ಉಪದೇಶ ಭಾಷಣವನ್ನು ಅನುಗ್ರಹಿಸಬೇಕೆಂದು ಭಕ್ತಾದಿಗಳು ಪ್ರಾರ್ಥಿಸುತ್ತಾರೆ" ಎಂಬುದಾಗಿ ವಿಜ್ಞಾಪಿಸಿದರು. ಶ್ರೀಕಂಠಶಾಸ್ತ್ರಿಗಳಿಗೆ ಯೋಚನೆಯಾಯಿತು. ಶ್ರೀಗಳವರಿಗೆ ಬಾರದ ಭಾಷೆಯಲ್ಲಿ ಭಾಷಣ ಮಾಡಬೇಕೆಂದು ಜನ ಕೇಳಿಕೊಳ್ಳುತ್ತಿದ್ದಾರಲ್ಲ ಎಂದು ತುಸು ಕೋಪವೂ ಬಂದಿತು. ಗುರುಗಳಿಗೆ ತಮಿಳು ಭಾಷೆಯ ಪರಿಚಯವಿಲ್ಲವೆಂದೂ, ಅವರು ಕಲಿತುದೆಲ್ಲಾ ಕನ್ನಡ, ತೆಲುಗು, ಸಂಸ್ಕೃತ ಮಾತ್ರವೆಂದೂ, ಅವರನ್ನು ತಮಿಳಿನಲ್ಲಿ ಮಾತನಾಡಬೇಕೆಂದು ಪ್ರಾರ್ಥಿಸುವುದು ಯುಕ್ತವಲ್ಲವೆಂದೂ ಜನಕ್ಕೆ ತಿಳಿಹೇಳಿದರು. ಆದರೆ ಬಂದಿದ್ದ ಆ ಪ್ರಮುಖರು "ನಾಲ್ಕೇ ಮಾತನಾಡಿದರೂ ಸಾಕು. ಅದೇ ನಮಗೆ ಅನುಗ್ರಹ. ಸಭಿಕರೆಲ್ಲರಿಗೂ ತಿಳಿವ ನಾಲ್ಕೇ ತಮಿಳು ಮಾತು ಸಾಕು. ನಾವು ಕೃತಾರ್ಥರಾಗುತ್ತೇವೆ" ಎಂದು ಬಿನ್ನವಿಸಿದರು. ಶಾಸ್ತ್ರಿಗಳು ಏನೂ ತೋಚದೇ ನೇರವಾಗಿ ಗುರುಗಳಲ್ಲಿಗೆ ಬಂದರು.

ಆಲೋಚನೆ ಮಾಡುತ್ತಾ ನಿಂತ ಶಾಸ್ತ್ರಿಗಳನ್ನು ಕಂಡೊಡನೆಯೇ ಗುರುಗಳು ವಿಷಯವೇನೆಂದು ಪ್ರಶ್ನಿಸಿದರು. ನಮ್ರರಾಗಿ ನಿಂತ ಶಾಸ್ತ್ರಿಗಳು ನತವದನರಾಗಿ ಎಲ್ಲವನ್ನೂ ಅರಿಕೆ ಮಾಡಿದರು. ಗುರುವರ್ಯರು "ಆಗಲಿ, ಶ್ರೀ ಶಾರದಾಂಬೆಯ ಇಚ್ಛೆಯಿದ್ದಲ್ಲಿ ತಮಿಳಿನಲ್ಲಿಯೇ ನಾಲ್ಕು ಮಾತು ಹೇಳಿದರಾಯಿತು. ಅವರ ಉತ್ಸಾಹವೇಕೆ ಭಂಗವಾಗಬೇಕು? ಇಚ್ಛೆ ಪೂರ್ತಿಯಾಗಲಿ" ಎಂದು ಅಪ್ಪಣೆ ಕೊಡಿಸಿದರು. ಶಾಸ್ತ್ರಿಗಳಿಗೆ ಆಶ್ಚರ್ಯವಾಯಿತು. ತಮಿಳು ಬಾರದವರು ತಮಿಳಿನಲ್ಲಿ ಮಾತನಾಡಲು ಸಾಧ್ಯವೇ? ಎಲ್ಲಾದರೂ ಆಭಾಸವಾದರೆ



ಹಾಸ್ಯಾಸ್ಪದವಲ್ಲವೇ? ಏನು ಗತಿ? ಎಂದು ಚಿಂತೆಯೂ ಆಯಿತು. ಪ್ರವಾಸದ ಆರಂಭದಲ್ಲಿಯೇ ಹೀಗಾಯಿತಲ್ಲ ಎಂದು ಆತಂಕವೂ ಆಯಿತು.

ಆ ಸಂಜೆ ಪೂಜಾದಿ ಕಾರ್ಯಕ್ರಮಗಳೆಲ್ಲವೂ ಮುಗಿದ ಬಳಿಕ ಶ್ರೀಗುರುಗಳು ಉಪನ್ಯಾಸ ಪೀಠಕ್ಕೆ ದಯಮಾಡಿಸಿದರು. ಅವರ ಅಮೃತವಾಣಿಯನ್ನಾಲಿಸಲು ಕಾತರರಾಗಿದ್ದ ಭಕ್ತಾದಿಗಳು ಎದ್ದು ನಿಂತು ತಮ್ಮ ಭಕ್ತಿ ಗೌರವಗಳನ್ನು ಸೂಚಿಸಿದರು. ಶ್ರೀಗಳವರು ಹಸನ್ಮುಖಿಗಳಾಗಿ ಪೀಠದಲ್ಲಿ ಕುಳಿತು ಎಲ್ಲರೂ ಕುಳಿತುಕೊಳ್ಳುವಂತೆ ಅನುಜ್ಞೆಯಿತ್ತು ಉಪನ್ಯಾಸವನ್ನಾರಂಭಿಸಿದರು. ಏನಾಶ್ಚರ್ಯ! ಅಚ್ಚ ತಮಿಳಿನಲ್ಲಿ ನಿರರ್ಗಳವಾಗಿ ಕಾರಂಜಿಯಂತೆ ಪುಟಿಯುತ್ತಿದೆ ಅಮೃತವಾಣಿ. ನೆರೆದ ಸಭೆ ಹರ್ಷಾತಿರೇಕದಿಂದ ಉಬ್ಬಿಹೋಯಿತು ! ಗಾಳಿಗೆ ತೊನೆಯುವ ಜೋಳದ ತೆನೆಗಳಂತೆ ಅನಂದದಿಂದ ಭಕ್ತರು ತಲೆದೂಗಿದರು. ದೇವವಾಣಿಯೇ ಶ್ರೀಗುರುಮುಖದಿಂದ ಪ್ರವಹಿಸಿ ಬಂದು ಭಕ್ತರ ಹೃದಯ, ಮನಸ್ಸುಗಳನ್ನು ತುಂಬಿ, ತುಳುಕಾಡಿತು. ಶ್ರೀಗಳವರು ಸರಳವೂ, ಅರ್ಥಗರ್ಭಿತವೂ, ಸುಂದರವೂ ಆದ ಉಪದೇಶವನ್ನು ತಮಿಳ್ನುಡಿಯಲ್ಲಿ ಅಸ್ಖಲಿತವಾಣಿಯಿಂದ ಅನುಗ್ರಹಿಸಿದರು. ಶಾಸ್ತ್ರಿಗಳಿಗಂತೂ ಪರಮಾಶ್ಚರ್ಯವಾಯಿತು. ಗುರುಗಳು ತಮ್ಮ ಅನುಷ್ಠಾನದ ಅತ್ಯಲ್ಪಕಾಲದಲ್ಲಿಯೇ ಗಳಿಸಿದ್ದ ಈ ಶಕ್ತಿಯನ್ನು ಕಂಡು ವಿಸ್ಮಿತರಾದರು.

ಶ್ರೀಗುರುಗಳಿಗೆ ಮಾತೃಭಾಷೆಯೂ, ದೇಶಭಾಷೆಯೂ ಮತ್ತು ವಿದ್ಯಾಭ್ಯಾಸದ ಭಾಷೆಯೂ ಅಲ್ಲದ ತಮಿಳಿನಲ್ಲಿ ಇಂತಹ ಪಾಂಡಿತ್ಯ ಹೇಗೆ ಬಂದಿತು? ಇದೇ ಶಾಸ್ತ್ರಿಗಳಿಗೆ ಸೋಜಿಗವಾಗಿತ್ತು. ಆಗಾಗ ಶೃಂಗೇರಿಗೆ ಬರುತ್ತಿದ್ದ ತಮಿಳುನಾಡಿನ ಭಕ್ತರಿಂದ ಗುರುಗಳು ಅಲ್ಪಸ್ವಲ್ಪ ತಮಿಳನ್ನು ಕಲಿತಿರಬಹುದೇ? ಈ ರೀತಿ ಬಂದವರೊಡನೆ ಆಡಿದ ಒಂದೆರಡು ಮಾತು ಅಚ್ಚ ತಮಿಳರೂ ಮೆಚ್ಚುವಂತೆ ಭಾಷಣ ಮಾಡುವಷ್ಟು ಆಳವೂ, ವಿಶಾಲವೂ ಆದ ಜ್ಞಾನಕ್ಕೆ ತಳಹದಿಯಾಗಲು ಸಾಧ್ಯವಿದೆಯೇ? ಪಾಂಡಿತ್ಯಪೂರ್ಣವಾಗಿ, ಗಂಭೀರವಾಗಿ ಅಡೆತಡೆಯಿಲ್ಲದೇ ಪ್ರವಹಿಸುವ ಆ ರಸವಾಹಿನಿಯಲ್ಲಿ ಮಿಂದ ಭಕ್ತಾವಳಿಯಂತೂ ಉಲ್ಲಾಸ ಉತ್ಸಾಹಗಳಿಂದ ಆನಂದಾನುಭವ ಪಡೆಯಿತು. ಯೋಗಶಾಸ್ತ್ರದಲ್ಲಿ ಅಗಾಧ ಸಾಧನೆ ನಡೆಸಿದ್ದ ಗುರುವರ್ಯರಿಗೆ ಜನಮನದ ಆಂತರ್ಯವನ್ನರಿವ ಅಪೂರ್ವಶಕ್ತಿಯೂ ಕರಗತವಾಗಿತ್ತು. ಸರ್ವಸ್ವವನ್ನೂ ಆಕರ್ಷಿಸಿಕೊಳ್ಳುವ ಸಂಕರ್ಷಣ ಶಕ್ತಿ ಇದ್ದವರಿಗೆ ಯಾವ ಕಾರ್ಯ ತಾನೇ ಅಸಾಧ್ಯ? ಗುರುಗಳಲ್ಲಿದ್ದು ನುಡಿಯುತ್ತಿದ್ದುದು ಶ್ರೀ ಶಾರದೆಯೇ ಎಂದರಿತು ಮನಸಾ ಗುರುಪಾದಕ್ಕೆ ವಂದಿಸಿದರು ಶ್ರೀಕಂಠಶಾಸ್ತ್ರಿಗಳು.

ಮುಂದೆ ದಯಮಾಡಿಸಿದೆಡೆಯಲ್ಲೆಲ್ಲಾ ಗುರುವರ್ಯರು ತಮಿಳಿನಲ್ಲಿಯೇ ಉಪನ್ಯಾಸ ಮಾಡಿದರು. ತಾವು ಹೋದೆಡೆಯಲ್ಲೆಲ್ಲಾ ತಮಗೆ ದೊರೆತ ಸಂಭ್ರಮದ ಸ್ವಾಗತದಿಂದಲೂ, ಭಕ್ತಿ ಆದರಗಳಿಂದಲೂ ಗುರುವರ್ಯರು ಹರ್ಷಿತರಾದರು. ಶಿಷ್ಯರೂ ತಮ್ಮ ತಾಯ್ನುಡಿಯಲ್ಲಿಯೇ ಗುರುಗಳ ಉಪದೇಶವನ್ನು ಪಡೆದು ಕೃತಾರ್ಥರಾದರು. ಮುಂದೆ ಸತ್ಯಮಂಗಲದಿಂದ ರಾಮೇಶ್ವರ, ಅಲ್ಲಿಂದ ಮಧುರೆ, ತಿನ್ನವೆಲ್ಲಿ ಜಿಲ್ಲೆಗಳಲ್ಲಿ ಸಂಚರಿಸಿ ಗುರುವರ್ಯರು ತಿರುವಾಂಕೂರಿಗೆ ಚಿತ್ತೈಸಿದರು. ಅಲ್ಲಿ ಮಹಾರಾಜರಿಂದ ಸ್ವಾಗತಿಸಲ್ಪಟ್ಟು, ಹಲವು ದಿನ ವಾಸವಿದ್ದು ಎಲ್ಲರನ್ನೂ ಅನುಗ್ರಹಿಸಿ, ಮುಂದೆ ಶ್ರೀಆದಿ ಶಂಕರರ ಜನ್ಮಸ್ಥಾನವಾದ ಕಾಲಟೀ ಕ್ಷೇತ್ರವನ್ನು ತಲುಪಿದರು.

ಪುಣ್ಯಶ್ಲೋಕರಾದ ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಮಹಾಸ್ವಾಮಿಯವರು ಕಾಲಟೀ ಕ್ಷೇತ್ರವನ್ನು ಪರಿಷ್ಕರಿಸಿ, ಶ್ರೀಶಂಕರ ಭಗವತ್ಪಾದರ ಮತ್ತು ಶ್ರೀಶಾರದಾಂಬಾ ದೇವಸ್ಥಾನಗಳನ್ನು ನಿರ್ಮಿಸಿ ಶ್ರೀಶಂಕರ ಭಗವತ್ಪಾದರ ಪುನರವತಾರದ ನಂಬುಗೆಗೆ ನೀರೆರೆದಿದ್ದರಷ್ಟೆ? ಕ್ರಿ.ಶ. ೧೯೧೦ರಲ್ಲಿ ಉದ್ಧರಿಸಲ್ಪಟ್ಟ ಈ ಸ್ಥಳದಲ್ಲಿ ಶ್ರೀಚಂದ್ರಶೇಖರ ಭಾರತಿಯವರು ಒಂದು ವೇದ ಪಾಠಶಾಲೆ ಮತ್ತು ಅಗ್ರಹಾರವನ್ನು ಕಟ್ಟಿಸುವಂತೆ ಈ ಮೊದಲೇ ಅಪ್ಪಣೆ ಮಾಡಿದ್ದರು. ಕ್ರಿ.ಶ.೧೯೨೭ರಲ್ಲಿ ತಾವು ಆ ಸ್ಥಳಕ್ಕೆ ಭೇಟಿಯಿತ್ತಾಗ ಉಚ್ಚ ಶಿಕ್ಷಣವೀಯುವ ವೇದಾಂತ ಪಾಠಶಾಲೆಯನ್ನೂ ಸ್ಥಾಪಿಸಿ, ಅಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ವಸತಿ ಸೌಕರ್ಯವನ್ನೂ, ಅವರ ಖರ್ಚುವೆಚ್ಚಗಳಿಗಾಗಿ ವಿದ್ಯಾರ್ಥಿ ವೇತನ ವನ್ನೂ ಕಲ್ಪಿಸಿದ್ದರು. ಕಾಲಟಿಯಲ್ಲಿ ತಮ್ಮ ಸಂಕಲ್ಪ ಪೂರ್ಣವಾದ ಬಳಿಕ ಪಾಲ್ಘಾಟ್, ಕೊಯಮತ್ತೂರು ಜಿಲ್ಲೆಗಳ ಮಾರ್ಗವಾಗಿ ಮತ್ತೆ ನಂಜನಗೂಡಿಗೆ ದಯಮಾಡಿಸಿದರು. ಅಲ್ಲಿಯೂ ಸಹ ಒಂದು ಪಾಠಶಾಲೆಯನ್ನು ಸ್ಥಾಪಿಸಿ, ಆ ಬಳಿಕ ಕ್ರಿಸ್ತಶಕ ೧೯೨೭ರ ಕೊನೆಗೆ ಶೃಂಗೇರಿಗೆ ಬಂದರು.

ಶ್ರೀಗುರುಗಳ ಸಂದರ್ಶನ ಲಭ್ಯವಿದ್ದವರಿಗೆ ಆಗಿದ್ದ ಪ್ರಯೋಜನಗಳು ಅನೇಕ. ಬ್ರಹ್ಮ ಸಾಕ್ಷಾತ್ಕಾರದ ವಿವಿಧ ಮಾರ್ಗಗಳಲ್ಲಿ ಸಾಧನೆ ನಡೆಸಿದ್ದ ಗುರುಗಳು ಆಯಾ ಮಾರ್ಗಗಳಲ್ಲಿ ಜ್ಞಾನ ಸಂಪಾದನೆ ಮಾಡಿದ್ದ ಎಲ್ಲರ ಭಕ್ತಿ ಗೌರವಗಳಿಗೆ ಪಾತ್ರರಾಗಿದ್ದರು. ವಿದ್ವಾಂಸರಷ್ಟೇ ಅಲ್ಲದೇ ಅತ್ಯಂತ ಸಾಧಾರಣ ವ್ಯಕ್ತಿಯೂ ಸಹ ತನ್ನ ಜೀವನಕ್ಕೊಂದು ಗುರಿ ತೋರುವ ಮತ್ತು ಆ ಗುರಿಯತ್ತ ತನ್ನನ್ನು ನಡೆಸುವ ಮಾರ್ಗದರ್ಶಕನನ್ನು ಅವರಲ್ಲಿ ಕಾಣಬಹುದಾಗಿತ್ತು. ಅವರ ಪ್ರೀತಿ ವಿಶ್ವಾಸಗಳು ಸರ್ವರಿಗೂ ಸಮಾನವಾಗಿದ್ದು ಅವರು ಸಮಾಜದ ಉಚ್ಚವರ್ಗ, ಕೆಳವರ್ಗ, ಶ್ರೀಮಂತ, ಬಡವ, ಕಲಿತವರು, ಕಲಿಯದವರು,



ಹಿಂದುಗಳು ಹಿಂದುವೇತರರು, ಆಸ್ತಿಕರು ಮತ್ತು ಧಾರ್ಮಿಕ ವಿಷಯಗಳಲ್ಲಿ ನಂಬಿಕೆ ಇರದವರು ಎಲ್ಲರನ್ನೂ ಆಕರ್ಷಿಸಿ ವಿಶ್ವಾಸ, ದಯೆ, ಕರುಣೆಗಳಿಂದ ಕಾಣುತ್ತಿದ್ದರು. ಅವರಲ್ಲಿಗೆ ಬಂದ ಬಹಳ ಜನರು ಧಾರ್ಮಿಕ ಮತ್ತು ನೈತಿಕ ಭಾವನೆಗಳಲ್ಲಿ ಹೊಸ ಶ್ರದ್ಧೆಯನ್ನೂ, ನಂಬಿಕೆಯನ್ನೂ ಪಡೆದುಕೊಂಡು ಹೃದಯ ತುಂಬಿದವರಾಗಿ ಹಿಂದಿರುಗುತ್ತಿದ್ದರು. ಶ್ರೀಗುರುವರ್ಯರು ತಮ್ಮ ಸಮೀಪಕ್ಕೆ ಬಂದವರಿಗೆ ಅವರ ಸಂಸ್ಕಾರ, ಯೋಗ್ಯತೆ ಮತ್ತು ಧಾರ್ಮಿಕ ವಿಷಯಗಳಲ್ಲಿ ಅವರಿಗಿದ್ದ ಅಧಿಕಾರ ಅರ್ಹತೆಗಳಿಗೆ ತಕ್ಕಂತೆ ಉಪದೇಶ ಕೊಡುತ್ತಿದ್ದರು.

ಅವರು ಕೊಡುತ್ತಿದ್ದ ಬುದ್ಧಿವಾದಗಳೂ, ಹಿತಬೋಧನೆಗಳೂ ಶಿಷ್ಯರ ಕಲ್ಯಾಣಕ್ಕಾಗಿ, ಅಭ್ಯುದಯಕ್ಕಾಗಿ ನುಡಿದ ಮಾತುಗಳಾಗಿದ್ದು ಪ್ರಾಮಾಣಿಕ ಹೃದಯದಿಂದ ಹೊರಹೊಮ್ಮುತ್ತಿದ್ದವು. ನಾಸ್ತಿಕರನ್ನೂ, ಸಂಶಯಾತ್ಮರನ್ನೂ ಧರ್ಮದತ್ತ ನಡೆಸಿ ಅಂತಹವರಲ್ಲಿ ಹೊಸಬೆಳಕನ್ನು ಮೂಡಿಸುತ್ತಿದ್ದರು. ಅವರ ಉಪದೇಶಗಳು ಧರ್ಮಾಚರಣೆಯಲ್ಲಿದ್ದವರಿಗಂತೂ ಶಕ್ತಿವರ್ಧಕ ಔಷಧಗಳಾಗಿದ್ದವು. ಅವರ ಸಂಚಾರಕಾಲದಲ್ಲಿ ಜೀವನದಲ್ಲಿ ನಂಬಿಕೆ ಶ್ರದ್ಧೆಗಳನ್ನು ಕಳೆದುಕೊಂಡು ದಾರಿತಪ್ಪಿದವರೆಷ್ಟೋ ಮಂದಿ ಅವರ ಅನುಗ್ರಹದಿಂದ ಪರಿವರ್ತನೆ ಹೊಂದಿ ನಿಜಬೆಳಕಿನಲ್ಲಿ ನಡೆದು ಜೀವನದ ಸಾರ್ಥಕತೆಯನ್ನು ಕಂಡುಕೊಂಡರು.

ದೈವೀ ಪುರುಷರ ನಿತ್ಯಜೀವನದಲ್ಲಿ ನಡೆಯುವ ಅನೇಕ ಘಟನೆಗಳು ಸಾಧಾರಣರಿಗೆ ಆಶ್ಚರ್ಯವನ್ನುಂಟು ಮಾಡುತ್ತವೆ. ತಮ್ಮ ಇಂದ್ರಿಯಗಳ ಶಕ್ತಿಗೆ ನಿಲುಕದ ಇಂತಹ ಘಟನೆಗಳನ್ನು ಸಾಧಾರಣ ಜನ ಪವಾಡವೆಂದು ಕರೆಯುತ್ತಾರೆ. ಮಹಾಪುರುಷರಲ್ಲಿ ಸಾಧಾರಣ ಜನರಲ್ಲಿಲ್ಲದ ವಿಶೇಷ ಶಕ್ತಿ ಪ್ರಕಟವಾಗಿದ್ದು, ಅವರ ಕೃತಿಗಳೆಲ್ಲವೂ ಅತಿಮಾನುಷವಾಗಿದ್ದು ಅದು ಅವರಿಗೆ ಸ್ವಭಾವ ಸಿದ್ಧವಾಗಿರುತ್ತದೆ. ಮಹಾಪುರುಷರ ಜೀವನ ಚರಿತ್ರೆಯನ್ನು ಓದಿದವರೆಲ್ಲರಿಗೂ ಈ ಅಂಶ ವೇದ್ಯವಾಗದೇ ಇರದು. ಎಲ್ಲ ದೇಶಗಳಲ್ಲಿಯೂ, ಎಲ್ಲ ಕಾಲಗಳಲ್ಲಿಯೂ ಮಹಾಪುರುಷರ ಜೀವನದಲ್ಲಿ ಇಂತಹ ಅನೇಕ ಘಟನೆಗಳು ಜರುಗಿವೆ, ಜರುಗುತ್ತಲೇ ಇವೆ ಮತ್ತು ಮುಂದೆಯೂ ಜರುಗುತ್ತವೆ.

ಸಂಚಾರ ಕಾಲದಲ್ಲಿ ಗುರುದೇವರು ಮಹಿಮಾಯುತವಾದ ಕಾರ್ಯಗಳನ್ನು ಅನೇಕ ಬಾರಿ ತೋರಿದ್ದರು. ಆ ಮೊದಲೂ, ಆ ಬಳಿಕವೂ ಅಂತಹ ಪವಾಡಗಳು ಆಗಾಗ ನಡೆಯುತ್ತಿದ್ದವು. ಕೆಲವೊಮ್ಮೆ ಅಂತಹ ಕಾರ್ಯಗಳು ಅವರಿಗರಿವಿಲ್ಲದಂತೆಯೇ ನಡೆದು ಹೋಗುತ್ತಿದ್ದವು. ಅವರ

ಸಾನ್ನಿಧ್ಯದಲ್ಲಿ ಪವಾಡಗಳು ಅವರರಿವಿಲ್ಲದೆಯೇ ಸಂಭವಿಸುತ್ತಿದ್ದುದೂ ಉಂಟು. ಆದರೆ ಇದರಿಂದ ಅವರ ತಪಶ್ಶಕ್ತಿಗೆ ಯಾವ ಲೋಪವೂ ಬಂದಿರಲಿಲ್ಲ. ಅವರ ಅಂತಶ್ಶಕ್ತಿಯು ಗಾಢವೂ, ಗಹನವೂ ಆಗಿದ್ದು ಸ್ಫೂರ್ತಿಯ ಚಿಲುಮೆಯಾಗಿತ್ತು. ಈ ರೀತಿಯ ವಿಶೇಷ ಶಕ್ತಿಯು ಅವರು ಸಾಧನೆ ನಡೆಸಿ ಯೋಗಮಾರ್ಗದಲ್ಲಿ ಸಿದ್ಧರಾಗಿದ್ದುದರಿಂದ ಲಭ್ಯವಾಗಿದ್ದುದೇ ವಿನಾ ಪುಸ್ತಕಾಭ್ಯಾಸದಿಂದಾಗಲೀ, ಇತರ ರೀತಿಯಿಂದಾಗಲೀ ಬರಬಹುದಾದ ಶಕ್ತಿಯಂತೂ ಅಲ್ಲ.[೮]

ಸಂಚಾರ ಕಾಲದಲ್ಲಿ ಶ್ರೀಗಳವರು ಅನೇಕ ದೇವಸ್ಥಾನಗಳಿಗೂ ದಯಮಾಡಿಸಿ ತಾವೇ ಸ್ವತಃ ಪೂಜಾದಿಗಳನ್ನು ನೆರವೇರಿಸಿದರಷ್ಟೇ. ವಾಸ್ತುಕಲೆ, ಆಗಮಶಾಸ್ತ್ರಗಳಲ್ಲಿ ಪರಿಣತರಾಗಿದ್ದ ಗುರುದೇವರು ತಾವು ಹೋದೆಡೆಗಳಲ್ಲಿ ದೇವಸ್ಥಾನದ ವಾಸ್ತುವಿನಲ್ಲಿಯೋ ಪೂಜಾಕ್ರಮದಲ್ಲಿಯೋ ಅಥವಾ ಮೂರ್ತಿ ಪ್ರತಿಷ್ಠಾ ಕ್ರಮದಲ್ಲಿಯೋ ಜರುಗಿದ್ದ ಮತ್ತು ಜರುಗುತ್ತಿದ್ದ ಲೋಪದೋಷಗಳನ್ನು ಕುರಿತು ವ್ಯವಸ್ಥಾಪಕರಿಗೆ ಸೂಕ್ತ ತಿಳಿವಳಿಕೆಯನ್ನು ಕೊಡುತ್ತಿದ್ದರು ಮತ್ತು ಆ ಪೂಜಾಮಂದಿರಗಳಲ್ಲಿ ದೈವಸಾನ್ನಿಧ್ಯವು ಹೆಚ್ಚು ಪ್ರಕಟವಾಗುವಂತೆ ಮಾಡುತ್ತಿದ್ದರು.

* * *

---

೮ ಗುರುವರ್ಯರು ನಡೆಸಿದ ಮಹಿಮಾಯುತ ಲೀಲೆಗಳಿಗೆ ಸಂಬಂಧಪಟ್ಟ ಅನೇಕ ಘಟನೆಗಳು ಪ್ರಕಟವಾಗಿವೆ. ಇವುಗಳಲ್ಲಿ ಹೃದಯಂಗಮವಾದ ಕೆಲವು ಘಟನೆಗಳನ್ನು ಶ್ರೀ ಆರ್. ಕೃಷ್ಣಸ್ವಾಮಿ ಅಯ್ಯರ್ ಅವರ The Saint of Sringeri, Sparks from the divine Anvil ಮತ್ತು ಗಮಕಿ ರಾಮಕೃಷ್ಣಶಾಸ್ತ್ರಿಗಳು ರಚಿಸಿರುವ ಜೀವನ ಚರಿತ್ರೆಗಳಲ್ಲಿ ಓದಬಹುದು.
ಈ ಲೇಖಕರು ಭಾವಾನುವಾದ ಮಾಡಿರುವ ಸಂಭಾಷಣ ತರಂಗಿಣಿಯೂ ವಾಚಕರಿಗೆ ಉಪಯೋಗವಾಗಬಹುದು.
ಈ ಲೇಖಕರ ಪುಸ್ತಕ ಅನುಗ್ರಹ ಪರಂಪರೆಯಲ್ಲಿ ಘಟನೆಗಳ ವಿಸ್ತಾರವಾದ ಮಾಹಿತಿಗಳು ಲಭ್ಯವಿದ್ದು ಈ ಪುಸ್ತಕ ಮೂರು ಮುದ್ರಣ ಕಂಡಿದೆ.



# ೨೦. ಯೋಗಾಭ್ಯಾಸ, ತಪಸ್ಸು

ಶೃಂಗೇರಿಯ ಪೀಠಾಧಿಪತಿಗಳಿಗೆ "ಯಮನಿಯಮಾಸನ ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ,ಧಾರಣ ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ" ಎಂಬ ಬಿರುದಾವಳಿ ಇದೆಯಷ್ಟೆ? ಈ ಯೋಗಮಾರ್ಗದಲ್ಲಿ ಶ್ರೀ ನೃಸಿಂಹ ಭಾರತಿಯವರೂ ಬಹಳ ಸಾಧನೆಯನ್ನು ಮಾಡಿದ್ದರು. ಶ್ರೀಚಂದ್ರಶೇಖರ ಭಾರತಿಯವರೂ ಸಹ ಈ ಯೋಗಮಾರ್ಗದಲ್ಲಿ ಸಾಧನೆ ನಡೆಸಿದ್ದರು. ಸಂನ್ಯಾಸಾನಂತರ ತಮ್ಮ ವೇದಾಂತ ವಿದ್ಯಾಭ್ಯಾಸ ಪೂರ್ಣವಾದ ಬಳಿಕ ಗುರುಗಳು ರಾಜಯೋಗದ ಕಠಿಣ ತಪಶ್ಚರ್ಯೆಯನ್ನು ಕೈಗೊಂಡಿದ್ದರು. ಸದಾ ಕಾಲವೂ ಪಾರಮಾರ್ಥಿಕ ವಸ್ತುವಿನತ್ತಲೇ ಅವರ ದೃಷ್ಟಿಯಿದ್ದುದರಿಂದ, ಬಾಹ್ಯ ವ್ಯಾಪಾರಗಳಲ್ಲಿ ಅವರು ಅನಾಸಕ್ತರಾಗಿದ್ದರು. ಶ್ರೀನೃಸಿಂಹಭಾರತೀ ಸ್ವಾಮಿಗಳವರ ಅಧಿಷ್ಠಾನದಲ್ಲಿಯೂ, ಶ್ರೀಶಾರದಾ ದೇವಾಲಯದಲ್ಲಿಯೂ ಕುಂಭಾಭಿಷೇಕಾದಿಗಳು ನಡೆದ ನಂತರ ಅವರ ತಪಶ್ಚರ್ಯೆ ಇನ್ನೂ ಕಠಿಣವಾಯಿತು. ಈ ಮಧ್ಯೆ ಭಕ್ತರಿಂದ ಅನೇಕ ಪ್ರಾರ್ಥನೆಗಳು ಬಂದುದರಿಂದ ಅವರು ಸಂಚಾರ ಕೈಗೊಳ್ಳಲೇಬೇಕಾಯಿತು. ತತ್ಪೂರ್ವದಲ್ಲಿಯೇ ಬಾಹ್ಯವ್ಯಾಪಾರಗಳಿಂದ ವಿಮುಖರಾಗಿದ್ದ ಗುರುಗಳ ಮನಃಸ್ಥಿತಿಯು ಜನವೂ, ಪರಿಜನವೂ ಬುದ್ಧಿವಿಕಲ್ಪವೇನೋ ಎಂದು ಶಂಕಿಸಬಹುದಾದಷ್ಟು ಮಟ್ಟಿಗೆ ವಿಚಿತ್ರವಾಗಿತ್ತು. ಆದರೆ ಮೂರು ವರ್ಷಗಳ ಸಂಚಾರಕಾಲದಲ್ಲಿ ಅವರ ನಡೆನುಡಿಗಳೆಲ್ಲ ಸ್ವಾಭಾವಿಕವಾಗಿಯೇ ಇದ್ದವು. ಸಂಚಾರದ ಕಾಲದಲ್ಲಿ ಅವರಿಗೆ ತಪೋನುಷ್ಠಾನಕ್ಕೆ ಸಮಯವೇ ದೊರಕುತ್ತಿರಲಿಲ್ಲ. ಶೃಂಗೇರಿಗೆ ಹಿಂದಿರುಗಿದ ನಂತರ ತಾಯ ಮಡಿಲು ಸೇರಿದ ಮಗುವಿನಂತಾದ ಗುರುಗಳು ಸ್ವಚ್ಛಂದ ವಾತಾವರಣದಲ್ಲಿ ಮತ್ತೆ ಆತ್ಮಾರಾಮರಾದರು.ತಮ್ಮ ಸಾಧನೆಯನ್ನು ಮುಂದುವರೆಸಿ ಕ್ರಮೇಣ ಬಾಹ್ಯ ಜಗತ್ತಿನಿಂದ ದೂರ ಸರಿದರು.

ಈ ಯೋಗಮಾರ್ಗದಲ್ಲಿ ಸಾಧಕನು ಒಂದೊಂದೇ ಮಜಲನ್ನು ಏರುತ್ತಾ ಅದರ ಪ್ರಯೋಜನಗಳನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾ ಹೋಗಬಹುದು. ಪ್ರತ್ಯಕ್ಷ ಮತ್ತು ಅನುಭವ ಪ್ರಮಾಣವೇ ಆಧಾರವಾಗುಳ್ಳ ಈ ಸಾಧನಕ್ರಮದಲ್ಲಿ ಎಂಟು ಸೋಪಾನಗಳಿವೆ. ನಿಯಮ ಪ್ರಕಾರ ತನ್ನ ಸಾಧನೆಯನ್ನು ನಡೆಸಿಕೊಂಡು ಬರುವಾತನು ಸಾಧನೆಯ ಆರಂಭದಲ್ಲಿಯೇ ಅದ್ಭುತ ಅನುಭವಗಳನ್ನು ಪಡೆಯುತ್ತಾನೆ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರಗಳು

ಮೊದಲ ಐದು ಸೋಪಾನಗಳು. ಆ ಬಳಿಕ ಧ್ಯಾನ, ಧಾರಣ,ಸಮಾಧಿ ಎಂಬವು ಬರುತ್ತವೆ.

ಯಮ, ನಿಯಮದಿಂದ ಶೀಲ, ಚಾರಿತ್ರ್ಯ ಶುದ್ಧಿಯೂ, ಅಹಿಂಸೆ, ಸತ್ಯ, ಅಸ್ತೇಯ, ಸದಾಚಾರ, ಅಪರಿಗ್ರಹ, ಆತ್ಮಸಂಯಮವೂ, ಬ್ರಹ್ಮಚರ್ಯವೂ ಅಭ್ಯಸಿಸಲ್ಪಟ್ಟು ಶೌಚ, ಆರ್ಜವ, ತೃಪ್ತಿ, ನಿಷ್ಠೆ, ಶಾಸ್ತ್ರಾಧ್ಯಯನ ಮತ್ತು ಈಶ್ವರನಲ್ಲಿ ಶರಣಾಗತಿ ಉಂಟಾಗಿ ಮುಂದಿನ ಹಂತವಾದ ಆಸನಕ್ಕೆ ಬುನಾದಿಯಾಗುತ್ತದೆ.

ಆಸನವು ಒಂದು ಬಗೆಯ ಶಾರೀರಿಕ ವ್ಯಾಯಾಮ. ದೀರ್ಘಕಾಲ ನಿಶ್ಚಲವಾಗಿ ಕುಳಿತುಕೊಳ್ಳುವ ಅಭ್ಯಾಸವು ಆಸನದಿಂದ ಬರುತ್ತದೆ. ಧ್ಯಾನಕ್ಕಾಗಿ ಎಷ್ಟು ಕಾಲ ಕುಳಿತರೂ ದೇಹದ ಯಾವ ಭಾಗಕ್ಕೂ ನೋವಾಗಲೀ, ಹಿಂಸೆಯಾಗಲೀ ಆಗದಂತೆ ಇರುವ ಕ್ರಮವೇ ಆಸನ. ಬೆನ್ನುಮೂಳೆಯನ್ನು ನೆಟ್ಟಗೆ ನಿಲ್ಲಿಸಿ ಕತ್ತು ಮತ್ತು ಎದೆಯನ್ನು ಸಮಮಟ್ಟದಲ್ಲಿಟ್ಟುಕೊಂಡು ಚಲಿಸದೆ ಕುಳಿತುಕೊಂಡು [ಆಸನದಲ್ಲಿ ನಾನಾ ಭಂಗಿಗಳಿವೆ] ಸಾಧಕನು ಪ್ರಾಣಾಯಾಮವನ್ನು ಅಭ್ಯಸಿಸುತ್ತಾನೆ. ಪ್ರಾಣಾಯಾಮವು ಬಹಳ ಕಷ್ಟಸಾಧ್ಯವಾದ ಸಾಧನೆ. ಶ್ವಾಸೋಚ್ಛ್ವಾಸವನ್ನು ಯೋಗಾಭ್ಯಾಸಕ್ಕೆ ಅನುಗುಣವಾಗಿ ಪೂರಕ, ಕುಂಭಕ, ರೇಚಕ ಕ್ರಮದಲ್ಲಿ ನಿಯಂತ್ರಿಸಬೇಕು. ಇದರಿಂದ ಅತಿ ಚಂಚಲವಾಗಿ ಓಡುತ್ತಿರುವ ಮನಸ್ಸು ಸ್ವಾಧೀನವಾಗುತ್ತಾ ಬಂದು ಕೊನೆಗೆ ಚಿತ್ತೈಕಾಗ್ರತೆ ದೊರಕುವುದು. ಪ್ರಾಣಾಯಾಮವು ಮುಂದಿನ ಹಂತವಾದ ಪ್ರತ್ಯಾಹಾರಕ್ಕೆ ಬುನಾದಿ. ಇದು ಸರ್ವೇಂದ್ರಿಯಗಳನ್ನೂ ಅಂತರಂಗದತ್ತ ತಿರುಗುವಂತೆ ಮಾಡುವುದು.

ಮುಂದಿನ ಘಟ್ಟವೇ ಮನೋನಿಗ್ರಹ. ಚಕ್ಷು, ಶ್ರೋತ್ರ, ಘ್ರಾಣ, ಜಿಹ್ವೆ, ತ್ವಕ್ [ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ] ಎಂಬ ಪಂಚಜ್ಞಾನೇಂದ್ರಿಯಗಳ ಮೂಲಕ ಮನಸ್ಸಿಗೆ ಬಾಹ್ಯ ಜಗತ್ತಿನ ಸಂಬಂಧ ಉಂಟಾಗುವುದು. ಕಣ್ಣು ದೃಶ್ಯವನ್ನು ನೋಡುತ್ತದೆ, ಕಿವಿ ಶಬ್ದವನ್ನು ಕೇಳುತ್ತದೆ, ಚರ್ಮದಿಂದ ಸ್ಪರ್ಶಾನುಭವವಾಗುತ್ತದೆ, ಮೂಗು ವಾಸನೆಯನ್ನು ಗ್ರಹಿಸುತ್ತದೆ, ನಾಲಿಗೆಯು ರುಚಿಗೆ ವಶವಾಗುತ್ತದೆ.ಆಯಾ ಕ್ರಿಯೆಗಳನ್ನು ಆಯಾ ಇಂದ್ರಿಯಗಳು ಅನುಭವಿಸುವ ಶಕ್ತಿಯನ್ನು, ಎಂದರೆ ತಮ್ಮ ಅನುಭವಗಳನ್ನು ಮನಸ್ಸಿಗೆ ತಲುಪಿಸುವ ಶಕ್ತಿಯನ್ನು ಹೊಂದಿರುವುದರಿಂದ ಇವುಗಳಿಗೆ ಪಂಚ ಜ್ಞಾನೇಂದ್ರಿಯಗಳೆಂದು ಹೆಸರು. ಮನಸ್ಸಿನ ಆಜ್ಞೆಗಳು ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಎಂಬ ಪಂಚ ಕರ್ಮೇಂದ್ರಿಯಗಳ ಮೂಲಕ ನಡೆಯುವುದು. ಯಾವುದಾದರೊಂದು ವಸ್ತುವನ್ನು ಕಣ್ಣು ನೋಡಿದಾಗ ಅದು ಅಲೆಗಳ ಮೂಲಕ ಮನಸ್ಸಿಗೆ ಸಾಗಿ ಮನಸ್ಸಿನಲ್ಲಿ ಅದರ ಚಿತ್ರ ಮೂಡುವುದು. ಮನಸ್ಸು



ಕರ್ಮೇಂದ್ರಿಯಕ್ಕೆ ಆ ವಸ್ತುವನ್ನು ದೊರಕಿಸಿಕೊಳ್ಳಲು ಆಜ್ಞೆಯನ್ನು ನೀಡುತ್ತದೆ. ಇವೆಲ್ಲಾ ಕೇವಲ ಕೆಲವು ಕ್ಷಣಗಳಲ್ಲೇ ನಡೆಯುವುದು. ಇಂದ್ರಿಯ ವ್ಯಾಪಾರವೆಲ್ಲವೂ ಹೀಗೆಯೇ ನಡೆಯುತ್ತದೆ. ಜ್ಞಾನೇಂದ್ರಿಯಗಳು ಮನಸ್ಸಿಗೆ ಹೊರಜಗತ್ತಿನ ಸಂಪರ್ಕವನ್ನು ಉಂಟು ಮಾಡುತ್ತವೆ. ಮನಸ್ಸು ಕರ್ಮೇಂದ್ರಿಯಗಳ ಮೂಲಕ ತನ್ನ ಕೆಲಸವನ್ನು ಮಾಡಿಸುತ್ತದೆ. ಎಂದರೆ ಮನಸ್ಸೇ ಕಿವಿಯ ಮೂಲಕ ಕೇಳುತ್ತದೆ, ಕಣ್ಣುಗಳ ಮೂಲಕ ನೋಡುತ್ತದೆ. ಹೀಗೆ ಪ್ರತಿಯೊಂದು ಇಂದ್ರಿಯದ ಮೂಲಕವೂ ಮನಸ್ಸೇ ವ್ಯಾಪಾರ ನಡೆಸುತ್ತದೆ. ಇಂದ್ರಿಯಗಳಿಗೆ ಪ್ರತ್ಯೇಕ ಅಸ್ತಿತ್ವವಿಲ್ಲ.

ಎಲ್ಲಿಯವರೆಗೆ ಕಣ್ಣು ತೆರೆದಿರುತ್ತದೋ ಅಲ್ಲಿಯವರೆಗೆ ದೃಶ್ಯವೂ ಕಣ್ಣಿಗೆ ಬೀಳುತ್ತಿರುತ್ತದೆ. ಅಲೆಅಲೆಯಾಗಿ ಮನಸ್ಸನ್ನು ಮುಟ್ಟುತ್ತಾ ಚಿತ್ತ ಚಾಂಚಲ್ಯವನ್ನು ಹೆಚ್ಚಿಸುತ್ತದೆ. ಹೀಗೆಯೇ ಇತರ ಜ್ಞಾನೇಂದ್ರಿಯಗಳೂ ಮನಸ್ಸಿನ ಚಾಂಚಲ್ಯವನ್ನು ಹೆಚ್ಚಿಸಿ, ಮನಸ್ಸು ಸತತವಾಗಿ ಕರ್ಮೇಂದ್ರಿಯಗಳ ಮೂಲಕ ಬಾಹ್ಯ ವ್ಯಾಪಾರದಲ್ಲಿಯೇ ತೊಡಗಿರುವಂತೆ ಮಾಡುತ್ತದೆ. ಈ ಜ್ಞಾನೇಂದ್ರಿಯಗಳನ್ನು ಬಾಹ್ಯ ವಸ್ತುಗಳ ಸಂಪರ್ಕದಿಂದ ಬಿಡಿಸುವುದೇ ಪ್ರತ್ಯಾಹಾರ. ಆಗ ಜ್ಞಾನೇಂದ್ರಿಯಗಳ ಬಹಿರ್ವ್ಯಾಪಾರ ನಿಂತು ಅವು ಅಂತರ್ಮುಖವಾಗುವುವು. ಹಾಗೆಯೇ ಕರ್ಮೇಂದ್ರಿಯಗಳ ಚಟುವಟಿಕೆಯೂ ನಿಲ್ಲುವುದು. ಮನಸ್ಸಿನಲ್ಲಿ ಏಳುವ ಯೋಚನಾ ತರಂಗಗಳು ಕಡಿಮೆಯಾಗುತ್ತಾ ಬಂದು ಮನಸ್ಸು ಸಮಾಧಾನಕ್ಕೆ ಬರುವುದು. ಪ್ರತ್ಯಾಹಾರದಿಂದ ಮನಸ್ಸು ಸ್ಥಿಮಿತಕ್ಕೆ ಬಂದಂತೆಲ್ಲಾ ಇಂದ್ರಿಯಶಕ್ತಿಯು ಚುರುಕಾಗುವುದು. ಗ್ರಹಣಶಕ್ತಿ, ವಿಚಾರಶಕ್ತಿ, ಜ್ಞಾಪಕಶಕ್ತಿ ಇವೆಲ್ಲವೂ ಹೆಚ್ಚುತ್ತಾ ಹೋಗಿ ಮನಸ್ಸು ಬಲಯುತವೂ, ಸೂಕ್ಷ್ಮವೂ. ವ್ಯಾಪಕವೂ ಆಗುತ್ತದೆ.ಈ ಸ್ಥಿತಿಗೆ ಬರುವುದು ಸುಲಭವಲ್ಲ. ಹೊರಜಗತ್ತಿನ ವ್ಯಾಪಾರವನ್ನು ಪೂರ್ಣವಾಗಿ ಕಡಿದುಕೊಂಡು ಮನಸ್ಸನ್ನು ಒಳಮುಖವಾಗಿ ತಿರುಗಿಸುವುದು ಬಹಳ ಕಠಿಣ ಸಾಧನೆ. ಇದಕ್ಕೆ ಸತತವಾದ ದೃಢ ಪ್ರಯತ್ನವೂ, ಸ್ಥಿರ ಸಂಕಲ್ಪವೂ ಬೇಕು. ಈ ಘಟ್ಟಕ್ಕೆ ತಲುಪಿದ ಸಾಧಕನು ತನಗೆ ಲಭಿಸಿರುವ ಶಕ್ತಿಗಳಿಂದ ಕೆಲವೊಮ್ಮೆ ದಿಙ್ಮೂಢನಾದರೂ ಮುಂದುವರೆಯುತ್ತಾನೆ. ಏಕೆಂದರೆ ಅವನ ಗುರಿ ಈ ಶಕ್ತಿಗಳನ್ನು ಗಳಿಸುವುದಕ್ಕಿಂತಲೂ ಹಿರಿದಾಗಿರುತ್ತದೆ.

ಈ ಎಲ್ಲ ಶಕ್ತಿಗಳೂ ಅವನ ಅಭ್ಯುದಯಕ್ಕೆ ನೆರವಾಗುತ್ತವೆ. ಮನಸ್ಸು ಸ್ಥಿಮಿತಕ್ಕೆ ಬಂದ ನಂತರ ಧ್ಯಾನ; ಯಾವುದಾದರೂ ಸೂಕ್ಷ್ಮ ಅಥವಾ ಸ್ಥೂಲ ವಸ್ತುವನ್ನು ಕುರಿತು ಮನಸ್ಸನ್ನು ಧ್ಯಾನದಲ್ಲಿ ತೊಡಗಿಸಬೇಕು.

ಪ್ರಾರಂಭದಲ್ಲಿ ಸಾಧಕನು ಸ್ಥೂಲ ವಸ್ತುವನ್ನು ಕುರಿತೇ ಧ್ಯಾನ ಮಾಡುತ್ತಾನೆ. ಮನಸ್ಸಿನಲ್ಲಿ ಯಾವುದಾದರೂ ಸ್ಥೂಲ ವಸ್ತುವನ್ನು ಕುರಿತು ಆಲೋಚಿಸುತ್ತಾನೆ. ಮನಸ್ಸು ಚಂಚಲವಾದುದರಿಂದ ಎಷ್ಟೇ ಕಷ್ಟಪಟ್ಟರೂ ಸಹ ಧ್ಯಾನತಂತುವು ಕಡಿದುಹೋಗುತ್ತದೆ. ಆದರೆ ಮರಳಿ ಮರಳಿ ಪ್ರಯತ್ನಿಸುವುದರ ಮೂಲಕ ಸಾಧಕನು ಮನಸ್ಸನ್ನು ಆ ವಸ್ತುವಿನತ್ತ ಕೊಂಡೊಯ್ಯುತ್ತಾನೆ. ಹತ್ತಿಯಿಂದ ನೂಲು ತೆಗೆಯುವಾಗ ಅಭ್ಯಾಸವಿಲ್ಲದವನಿಗೆ ಪದೇ ಪದೇ ನೂಲು ಕಡಿದುಹೋಗುತ್ತದೆ. ಗೋಜಲಾಗುತ್ತದೆ, ಗಂಟುಗಳಾಗುತ್ತದೆ. ಒಮ್ಮೊಮ್ಮೆ ತೆಗೆದ ನೂಲು ತಕಲಿಗೇ ಸುತ್ತಿಕೊಂಡು ಬಿಡುತ್ತದೆ. ಆದರೆ ಅಭ್ಯಾಸವಾದಂತೆಲ್ಲಾ ಈ ತೊಂದರೆಗಳು ಕಡಿಮೆಯಾಗಿ ಹತ್ತಿಯಿಂದ ನಯವಾದ ತೆಳುವಾದ ನೂಲು ತೆಗೆಯಬಹುದು. ಹಾಗೆಯೇ ಯೋಗಮಾರ್ಗದ ಅಭ್ಯಾಸಿಗೂ ಆರಂಭದಲ್ಲಿ ಮನಸ್ಸು ಎಷ್ಟೇ ಪ್ರಲೋಭನೆಗಳಿಗೆ ಒಳಗಾದರೂ ಮತ್ತೆ ಮತ್ತೆ ಪ್ರಯತ್ನ ಮಾಡುವುದರಿಂದ ಕ್ರಮೇಣ ಮನಸ್ಸು ಧ್ಯಾನವಸ್ತುವಿನಲ್ಲಿ ನಿಲ್ಲಲು ಸಮರ್ಥವಾಗುತ್ತದೆ. ಹೀಗೆ ಇತರ ವಸ್ತುಗಳತ್ತ ಧಾವಿಸುತ್ತಿರುವ ಮನಸ್ಸನ್ನು ಧ್ಯಾನವಸ್ತುವಿನತ್ತ ಕೊಂಡೊಯ್ದು ನಿಲ್ಲಿಸುವುದೇ ಧಾರಣ.

ಧಾರಣವು ಧ್ಯಾನದ ಮುಂದುವರೆದ ಸ್ಥಿತಿ. ಮನಸ್ಸನ್ನು ಒಂದು ವಿಷಯದಲ್ಲಿ ಕೇಂದ್ರೀಕರಿಸಲು ಧಾರಣ ಸಹಾಯ ಮಾಡುತ್ತದೆ. ಧ್ಯಾನವು ಏಕಾಗ್ರತೆಯಿಂದ ನಡೆದರೆ ಮುಂದೆ ಒದಗುವ ಸ್ಥಿತಿಯೇ ಸಮಾಧಿ. ಸಮಾಧಿಯೆಂದರೆ ಸರ್ವೋತ್ತಮವಾದ ಧ್ಯಾನ. ಸಮಾಧಿಯಲ್ಲಿ ಮನಸ್ಸು ಧ್ಯಾನವಸ್ತುವಿನಲ್ಲೇ ಲೀನವಾಗುತ್ತದೆ. ಸುಷುಪ್ತಿಯಲ್ಲಿರುವಂತೆ ಸಮಾಧಿಯಲ್ಲಿರುವ ಸಾಧಕನಿಗೆ ಯಾವ ವಿಷಯದ ಅರಿವೂ ಇರುವುದಿಲ್ಲ. ಯಾವ ವಸ್ತುವನ್ನು ಕುರಿತು ಸಾಧಕನು ಧ್ಯಾನ ಮಾಡುತ್ತಿದ್ದನೋ ಆ ವಸ್ತುವೂ ಸಹ ಮರೆಯಾಗುವುದು. ಸಮಾಧಿಯಿಂದ ಮನಸ್ಸು ಹಿಂದಿರುಗಿದಾಗ ತಾನು ಧ್ಯಾನ ಮಾಡುತ್ತಿದ್ದ ವಸ್ತುವಿನ ನಿಜ ಸ್ವಭಾವವು ಪೂರ್ಣವಾಗಿ ಹೊಳೆದು ಮನಸ್ಸನ್ನೆಲ್ಲಾ ತುಂಬಿಕೊಳ್ಳುತ್ತದೆ. ಸಂಪೂರ್ಣವಾಗಿ ತಾನು ಧ್ಯಾನಿಸುತ್ತಿದ್ದ ವಸ್ತುವಿನ ನಿಜಜ್ಞಾನವುಂಟಾಗುತ್ತದೆ. ಪ್ರಕೃತಿಯಲ್ಲಿರುವ ಯಾವುದೇ ವಸ್ತುವನ್ನು ಧ್ಯಾನ ವಿಷಯವನ್ನಾಗಿಸಿಕೊಂಡು ಸಮಾಧಿಸ್ಥನಾಗುವವರೆಗೂ ಧ್ಯಾನ ಮಾಡಿದರೆ ಆ ವಸ್ತುವಿನ ಸಂಪೂರ್ಣ ಜ್ಞಾನ ಉಂಟಾಗುವುದು. ಈ ರೀತಿಯಲ್ಲಿಯೇ ಅನೇಕ ಯೋಗಿಗಳು ಪಂಚಭೂತಾತ್ಮಕವಾದ ಬಾಹ್ಯಪ್ರಕೃತಿಯನ್ನು ವಶಪಡಿಸಿಕೊಳ್ಳುವರು.

ಯತಿರಾಜ ಶ್ರೀಚಂದ್ರಶೇಖರ ಭಾರತಿಯವರು ತಮ್ಮ ಗುರುವರ್ಯರಂತೆಯೇ ಇದೇ ರೀತಿಯ ಸಾಧನೆ ಮಾಡಿದ್ದ ಸಿದ್ಧಪುರುಷರು. ಅವರಿಗೆ ಎಲ್ಲೆಲ್ಲಿ ಏನೇನು ನಡೆಯುತ್ತಿದೆಯೆಂಬುದರ ಅರಿವಾಗುತ್ತಿತ್ತು. ಯಾರ ಯಾರ ಮನಸ್ಸಿನಲ್ಲಿ ಎಂತೆಂತಹ ಆಲೋಚನೆಗಳಿವೆ, ಯಾರು ಯಾವ ತೊಂದರೆಯಲ್ಲಿ ಸಿಲುಕಿದ್ದಾರೆ, ಯಾರು ಯಾವ ಚಿಂತೆ ವ್ಯಸನಗಳಲ್ಲಿ ಮುಳುಗಿದ್ದಾರೆ, ತಮ್ಮಲ್ಲಿಗೆ ಬರುವವರಲ್ಲಿ ಯಾರು ಪ್ರಾಮಾಣಿಕರು, ಯಾರು ಕಪಟಿಗಳು, ಯಾರು ನಿಜವಾದ ತಿಳಿವಿಗಾಗಿ ಬರುತ್ತಾರೆ, ತೋರಿಕೆಗಾಗಿ ಬರುವವರಾರು ಎಂಬುದೆಲ್ಲವೂ ತಿಳಿದುಬಿಡುತ್ತಿತ್ತು.[೯]

ಈ ರೀತಿ ಯೋಗಸಾಧನೆಯಿಂದ ಅಭ್ಯುದಯ ಹೊಂದುತ್ತಾ ಬಂದ ಸಾಧಕನು ತಾನು ಗಳಿಸಿರುವ ಇಂದ್ರಿಯಾತೀತ ಶಕ್ತಿಗಳನ್ನು ಜಗತ್ತಿಗೆ ಪ್ರದರ್ಶಿಸುವುದರಲ್ಲಿ ಆಸಕ್ತನಾಗಿಬಿಟ್ಟರೆ ಅಥವಾ ಅದರಿಂದ ಸ್ವಾರ್ಥವನ್ನು ಬೆಳೆಸಿಕೊಂಡು, ಸ್ವಲಾಭಕ್ಕೆ, ಹೆಸರು, ಕೀರ್ತಿಗಳಿಗೆ ಬಳಸಿಕೊಂಡರೆ ಸಾಧನೆಯ ತುಟ್ಟತುದಿಯನ್ನು ಮುಟ್ಟಲಾರದೇ ಪತನಕ್ಕೆ ಜಾರುವುದು ಖಂಡಿತ. ಈ ಸಾಧನೆಯು ಆಂತರ್ಯದಲ್ಲಿ ಅಡಗಿರುವ ಸರ್ವಶಕ್ತಿಗಳನ್ನು ಜಾಗೃತಗೊಳಿಸಿ, ಬಾಹ್ಯ ಮತ್ತು ಅಂತರಿಕ ಪ್ರಕೃತಿಯಲ್ಲಿರುವ ಎಲ್ಲ ವಿಷಯಗಳ ಮರ್ಮವನ್ನು ಮನಸ್ಸಿಗೆ ತಿಳಿಸಿಕೊಟ್ಟು ಸಾಧಕನಿಗೆ ಅವುಗಳ ಮೇಲೆ ಸರ್ವಾಧಿಕಾರವನ್ನು ಕೊಡುತ್ತದೆ. ಕಠಿಣಸಾಧನೆಗಳ ನಂತರ ಇಂತಹ ಸಮಾಧಿಸ್ಥಿತಿಯನ್ನು ಪಡೆಯಲಾಗದಿದ್ದರೆ ಸಾಧಕನು ಅತ್ಯಂತ ದುಃಖಕ್ಕೀಡಾಗುವುದರಿಂದ, ಯಾವುದೇ ಪ್ರಲೋಭನೆಗೀಡಾಗದೇ ತಾನು ಗಳಿಸಿದ ಎಲ್ಲಾ ಶಕ್ತಿಯನ್ನೂ ತನ್ನ ಗುರಿಯಾದ ಬ್ರಹ್ಮಸಾಕ್ಷಾತ್ಕಾರ ಪಡೆಯಲು ಬಳಸಿಕೊಳ್ಳುತ್ತಾನೆ. ಸ್ಥೂಲವಿಷಯದಿಂದ ಸೂಕ್ಷ್ಮವಿಷಯವನ್ನೂ, ಸೂಕ್ಷ್ಮವಿಷಯದಿಂದ ತನ್ನ ಮನಸ್ಸನ್ನೇ ಕುರಿತು ಧ್ಯಾನ ಮಾಡುತ್ತಾನೆ. ಈ ಧ್ಯಾನ ಮುಂದುವರೆದಂತೆಲ್ಲಾ ಮನಸ್ಸು ಸ್ತಬ್ಧವಾಗುತ್ತದೆ. ಸಂಪ್ರಜ್ಞಾತ ಸಮಾಧಿಯಿಂದ ಅಸಂಪ್ರಜ್ಞಾತ ಸಮಾಧಿಯುಂಟಾಗಿ ಅಲ್ಲಿ ಮನಸ್ಸು ಇರುವುದಿಲ್ಲ. ಆತ್ಮ ಸಾಕ್ಷಾತ್ಕಾರಕ್ಕಿದ್ದ ಕೊನೆಯ ತೆರೆಯು ತೆರೆಯಲ್ಪಡುತ್ತದೆ. ತನ್ನ ಸಹಜ ಮಹಿಮೆಯಿಂದ ಆತ್ಮವೂ ಕಾಣಿಸಿಕೊಳ್ಳುತ್ತದೆ. ಸಾಧಕನು ತನ್ನ ಅಸ್ತಿತ್ವದ ಕೇಂದ್ರವನ್ನು ಮುಟ್ಟಲು ಬ್ರಹ್ಮ ಸಾಕ್ಷಾತ್ಕಾರವಾಗುತ್ತದೆ.

---

೯ ಶ್ರೀ ಆರ್. ಕೃಷ್ಣಸ್ವಾಮಿ ಅಯ್ಯರ್ ರವರು ತಮ್ಮ Sparks from the divine Anvil ಎಂಬ ಗ್ರಂಥದಲ್ಲಿ ಗುರುಗಳಲ್ಲಿದ್ದ ಅತೀಂದ್ರಿಯ ಶಕ್ತಿಗೆ ಕೆಲವು ನಿದರ್ಶನಗಳನ್ನು ಕೊಟ್ಟಿದ್ದಾರೆ.
ಈ ಲೇಖಕರ ಅನುಗ್ರಹ ಪರಂಪರೆ ಪುಸ್ತಕದಲ್ಲಿಯೂ ಇಂತಹ ಹಲವಾರು ನಿದರ್ಶನಗಳಿವೆ. ಅದು ಇಂಗ್ಲಿಷಿಗೂ ಅನುವಾದವಾಗಿ ಎ ಲೆಗಸಿ ಆಫ್ ಬ್ಲೆಸಿಂಗ್ಸ್ ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಗಿದೆ.

ಹೀಗೆ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದ ಯೋಗಿಯ ಮನಸ್ಸು ಸಾಮಾನ್ಯ ಪ್ರಪಂಚದತ್ತ ತಿರುಗಿದರೆ ಪೂರ್ಣಪ್ರಜ್ಞನಾದ ಅವನಿಗೆ ಎಲ್ಲೆಲ್ಲಿಯೂ ದಿವ್ಯವೇ– ಬ್ರಹ್ಮವೇ– ತೋರುವುದು. ಇಂತಹ ಸ್ಥಿತಿಯನ್ನು ಮುಟ್ಟಿದಾತನಿಗೆ ರಾಗ ದ್ವೇಷಗಳಾಗಲೀ, ಆಸೆ ಆಕಾಂಕ್ಷೆಗಳಾಗಲೀ ಇರುವುದಿಲ್ಲ. ಆತನಿಗೆ ವೈಭವ ಆಡಂಬರ ಯಾವುದೂ ಬೇಕಾಗುವುದಿಲ್ಲ. ಜಗತ್ತಿನ ಯಾವ ಪ್ರಲೋಭನೆಯೂ ಆತನನ್ನು ಅಲುಗಿಸಲಾಗದು. ಆದರೆ ಆತನಿಂದ ಜಗತ್ತಿಗೆ ಶಾಂತಿ, ದಯೆ, ಕಾರುಣ್ಯ, ಪ್ರೇಮ ಮತ್ತು ಬೆಳಕು ಲಭಿಸುತ್ತದೆ.

ಆಚಾರ್ಯ ಶ್ರೀಚಂದ್ರಶೇಖರ ಭಾರತಿಯವರು ಯೋಗಮಾರ್ಗದ ತುತ್ತತುದಿಯಲ್ಲಿದ್ದು ಆತ್ಮ ಸಾಕ್ಷಾತ್ಕಾರ ಮಾಡಿಕೊಂಡಿದ್ದ ಮಹಾಪುರುಷರು. "ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ" ಎಂಬ ಬಿರುದನ್ನು ಸಾರ್ಥಕ ಪಡಿಸಿಕೊಂಡಿದ್ದವರು. ದಕ್ಷಿಣಾಮ್ನಾಯ ಪೀಠಾಧೀಶ್ವರರಾಗಿ ಅಕ್ಷರಶಃ ಜಗದ್ಗುರುವೇ ಆಗಿದ್ದರೂ ಸಹ ಸರಳರೂ, ಆಡಂಬರ ರಹಿತರೂ, ವಾತ್ಸಲ್ಯಪೂರ್ಣರೂ ಆಗಿದ್ದರು. ಪೀಠಾಧಿಪತಿಗಳಾಗಿದ್ದರೂ ಜಗದ್ಗುರುಗಳ ಲಾಂಛನಗಳನ್ನು ದೂರವಿರಿಸಿದ್ದವರು. ಅತ್ಯಂತ ಸಾಧಾರಣ ಕಾಷಾಯ ವಸ್ತ್ರಗಳ ವಿನಾ ಬೆಲೆಬಾಳುವ ವಸ್ತ್ರಗಳನ್ನು ಧರಿಸಿದವರಲ್ಲ. ತಮಗೆ ಸಿದ್ಧಿಸಿದ್ದ ಅತೀಂದ್ರಿಯ ಶಕ್ತಿಗಳನ್ನು ವಶಪಡಿಸಿಕೊಂಡು ಆಧ್ಯಾತ್ಮಿಕ ಗುರಿಯತ್ತ ಸಾಗಿದ ಮಹನೀಯರು ಅವರು. ಗುರುದೇವರ ಮನೋವ್ಯಾಪಾರವೆಲ್ಲವೂ ಅನವರತವೂ ಅಂತರ್ಮುಖವಾಗಿದ್ದು, ಬಹಿವ್ಯಾ೯ಪಾರಗಳಿಗೆ ಅವರು ಪೂರ್ಣ ವಿಮುಖರಾಗಿರುತ್ತಿದ್ದರು. ಈ ಸಾಧಕರ ಸಿದ್ಧಿಯನ್ನರಿಯದವರು ಗುರುಗಳಿಗೆ ಬುದ್ಧಿ ವಿಕಲ್ಪವಾಗಿದೆಯೆಂದು ಭಾವಿಸಿದರು. ಗುರುಗಳು ತಿಂಗಳುಗಟ್ಟಲೆ ಹೊರಬಾರದೇ ಅಂತರ್ಮುಖಿಗಳಾಗಿಯೇ ಇದ್ದುಬಿಡುತ್ತಿದ್ದರು. ಇಂತಹ ಸಮಯದಲ್ಲಿ ಅವರ ಸಮೀಪ ಹೋದವರಿಗೆ ಅವರ ಚರ್ಯೆ ವಿಪರೀತವಾಗಿ ಕಂಡಿದ್ದು, ಆ ವಿಭೂತಿ ಪುರುಷರ ದಿವ್ಯಸ್ಥಿತಿಯು ಅರ್ಥವಾಗದೇ ಅದನ್ನು ಬುದ್ಧಿಭ್ರಮಣೆ, ಹುಚ್ಚು ಎಂದು ಅವರು ಭಾವಿಸಿದ್ದಿರಬಹುದು.

ಕಾಲಾವಕಾಶ, ಏಕಾಂತತೆ, ಸ್ಥಳನೈರ್ಮಲ್ಯ ಮುಂತಾದವುಗಳೆಲ್ಲಾ ಆ ಸಾಧನೆಗೆ ಅತ್ಯವಶ್ಯಕವಾಗಿದ್ದುದರಿಂದ ಗುರುಗಳು ತಮ್ಮ ನಿಶ್ಚಿತ ಗುರಿಯನ್ನು ತಲುಪುವುದಕ್ಕೆ ಯಾವ ವಿಘ್ನಗಳೂ ಬಾರದಂತೆ ತಮ್ಮ ಸಮೀಪಕ್ಕೆ ಯಾರನ್ನೂ ಸೇರಿಸುತ್ತಿರಲಿಲ್ಲ. ಈ ಸಾಧನೆಯ ವಿನಾ ಬೇರೇನನ್ನೂ ಮಾಡುತ್ತಿರಲಿಲ್ಲ. ನಿಶ್ಚಿತ ಗುರಿ ಮುಟ್ಟಿದ ಬಳಿಕ ಮನಸ್ಸು ಹೊರಜಗತ್ತಿಗೆ ಬರಬೇಕಾದರೆ



ಅನೇಕ ದಿನಗಳೇ ಬೇಕಾಗುತ್ತಿದ್ದವು. ಸಂಗೀತಸುಧೆಯನ್ನು ಸವಿಯುವಾಗ, ಯಾವುದಾದರೂ ಗ್ರಂಥದ ಸ್ವಾರಸ್ಯ ಭಾಗದಲ್ಲಿ ತಲ್ಲೀನರಾಗಿದ್ದಾಗ, ಯಾವುದಾದರೂ ಆಲೋಚನೆಯಲ್ಲಿ ಮಗ್ನರಾಗಿದ್ದಾಗ ನಮ್ಮೆದುರು ಯಾರಾದರೂ ಸುಳಿದು ಹೋದರೆ, ನಮ್ಮನ್ನು ಯಾರಾದರೂ ಕರೆದರೆ, ಮಾತನಾಡಿಸಿದರೆ ನಮಗೆ ತಿಳಿಯುವುದೇ ಇಲ್ಲ. ಮನಸ್ಸು ಅಷ್ಟು ಗಾಢವಾಗಿ ತಲ್ಲೀನವಾಗಿರುತ್ತದೆ. ಸಾಧಾರಣರಾದ ನಮ್ಮ ಅನುಭವವೇ ಹೀಗಿರುವಾಗ ಬ್ರಹ್ಮಾನಂದದಲ್ಲಿರುವವರ ಸ್ಥಿತಿ ಎಂತಹುದಿರಬೇಕು? ಅದನ್ನು ಅಳೆಯಲು ನಮ್ಮಿಂದ ಸಾಧ್ಯವೇ? ಈ ಸಮಾಧಿಯ ಸಂದರ್ಭದಲ್ಲಿ ಅವರ ಪರಿಜನರಿಗೆ ಗುರುಗಳ ಬಾಹ್ಯಾಚರಣೆ, ಮಾತು ನಡವಳಿಕೆಗಳು ವಿಚಿತ್ರವಾಗಿ ತೋರುತ್ತಿದ್ದವು. ಸಮಾಧಿಸ್ಥಿತಿಯಿಂದ ಬಹಿರ್ಮುಖರಾದ ಬಳಿಕ ಆಚಾರ್ಯಪಾದರು ಕ್ರಮಪ್ರಕಾರ, ಸ್ನಾನ, ಜಪ, ಪೂಜಾನುಷ್ಠಾನಗಳನ್ನು ನಡೆಸುತ್ತಿದ್ದರು.

ಗುರುದೇವರು ತಮ್ಮ ಕೊಠಡಿಯಲ್ಲಿ ಧ್ಯಾನಮಗ್ನರಾಗಿರುತ್ತಿದ್ದಾಗ ಅವರಿಗೆ ವಿಘ್ನವಾಗದಂತೆ, ಪರಿಜನರು ಅವರ ಕೊಠಡಿಯನ್ನು ಸದ್ದಿಲ್ಲದೆ ಪ್ರವೇಶಿಸಿ ಅವರ ದೈನಂದಿನ ಅವಶ್ಯಕತೆಗಳೇನೆಂದು ಅರಿತುಕೊಂಡು ಸ್ನಾನಕ್ಕೆ ನೀರಿನಿಂದ ಹಿಡಿದು ಪೂಜಾದ್ರವ್ಯ, ಆಹಾರ, ಪಾನೀಯಗಳನ್ನು ಸಿದ್ಧ ಪಡಿಸುತ್ತಿದ್ದರು. ಗುರುಗಳು ಬಹಿರ್ಮುಖರಾದಾಗ ಅವರ ದೃಷ್ಟಿ ಅವುಗಳ ಮೇಲೆ ಬಿದ್ದರೆ ಬಿತ್ತು ಇಲ್ಲವಾದರೆ ಇಲ್ಲ. ಗುರುಗಳು ಅನೇಕ ದಿನಗಳ ಕಾಲ ಬಹಿರ್ಮುಖ ರಾಗದೇ ಧ್ಯಾನಮಗ್ನರಾಗಿಯೇ ಇದ್ದುಬಿಡುತ್ತಿದ್ದರು. ಅವರಿಗಾಗಿ ತಂದಿಟ್ಟ ಆಹಾರ ಪದಾರ್ಥಗಳು ಅಲ್ಲಿಯೇ ಹಳಸುತ್ತಿದ್ದುದನ್ನು ಕಂಡ ಪರಿಜನರು ನಿಶ್ಶಬ್ದವಾಗಿ ಅವನ್ನು ತೆಗೆದುಹಾಕಿ ಸ್ಥಳವನ್ನು ಸ್ವಚ್ಛಮಾಡುತ್ತಿದ್ದರು. ಅನೇಕ ದಿನಗಳ ಕಾಲ ಆಹಾರ ಪಾನಿಯಗಳಿಲ್ಲದೇ ಅವರ ದಿವ್ಯ ಶರೀರವು ಕೃಶವಾಗಿದ್ದರೂ, ಅವರ ಮುಖಮಂಡಲವು ಅಗ್ನಿಕುಂಡದ ಜ್ವಾಲೆಯಂತೆ ಪ್ರಕಾಶವನ್ನೂ, ತೇಜಸ್ಸನ್ನೂ ಬೀರುತ್ತಿತ್ತು.

ಸಾಧನಾಕಾಲದಲ್ಲಿ ವೈದ್ಯರುಗಳಿಂದ ಗುರುದೇವರಿಗೆ ಸಾಕಷ್ಟು ತೊಂದರೆಯೂ, ಅನನುಕೂಲವೂ ಉಂಟಾಗಿತ್ತು. ಗುರುಗಳು ಸಾಧನೆಯನ್ನು ತೀವ್ರಗೊಳಿಸಿ ಹಸಿವು ನಿದ್ರೆಗಳನ್ನು ಗೆಲ್ಲುವ ಮಜಲಿನಲ್ಲಿದ್ದಾಗ, ಈ ಆಧ್ಯಾತ್ಮಿಕ ಸಾಧನೆಯ ಆಂತರ್ಯವನ್ನು ಅರಿಯದ ವೈದ್ಯರು ಇದೊಂದು ವಿಧವಾದ ಶಾರೀರಿಕ ವ್ಯಾಧಿಯೋ, ಮನೋರೋಗವೋ ಇರಬಹುದೆಂದು ಭಾವಿಸಿ, ಅದರ ನಿವಾರಣೆಗಾಗಿ ಅತಿಶ್ರದ್ಧೆಯನ್ನು ವಹಿಸಿಬಿಟ್ಟಿದ್ದರು.

ಬಹಿರ್ಮುಖರಾಗಿದ್ದಾಗ ಗುರುಗಳು ಸಾಕಷ್ಟು ಆಹಾರವನ್ನು

ತೆಗೆದುಕೊಳ್ಳುತ್ತಿಲ್ಲವೆಂದು ಅರಿತ ಶಿಷ್ಯವೈದ್ಯರೊಬ್ಬರು ಗುರುದೇವರಿಗೆ ರಾತ್ರಿ ಕೊಡುತ್ತಿದ್ದ ಹಾಲಿನಲ್ಲಿ ಔಷಧಿಯನ್ನು ಬೆರೆಸಿಕೊಟ್ಟರು. ಮರುದಿನ ಗುರುಗಳಿಗೆ ಸ್ವಲ್ಪ ಹೆಚ್ಚಾಗಿಯೇ ಹಸಿವಾಗಿದೆಯೆನ್ನಿಸಿತು. ಅವರು ವೈದ್ಯರಿಗೆ ಹೇಳಿಕಳಿಸಿ, ಅವರಿಂದ ವಿಷಯವನ್ನರಿತು, “ನಾನು ಹಸಿವು, ಬಾಯಾರಿಕೆಯನ್ನು ಗೆಲ್ಲುವ ಪ್ರಯತ್ನದಲ್ಲಿದ್ದಾಗ ನೀವು ಹಸಿವು ಹೆಚ್ಚಾಗುವಂತೆ ಔಷಧಿ ಕೊಟ್ಟಿದ್ದೀರಿ. ಇನ್ನು ಮುಂದೆ ಹೀಗೆ ಮಾಡಬೇಡಿ” ಎಂದು ಮೃದುವಾಗಿಯೇ ಎಚ್ಚರಿಸಿದರು.

ಮತ್ತೊಂದು ಸಂದರ್ಭದಲ್ಲಿ ಗುರುಗಳು ಸಾಕಷ್ಟು ನಿದ್ರಿಸದಿರುವುದರಿಂದ ಅವರಿಗೆ ಆಲಸ್ಯ ಉಂಟಾಗಿದೆಯೆಂದು ಭಾವಿಸಿದ ವೈದ್ಯರೊಬ್ಬರು ನಿದ್ರೆ ಬರುವಂತಹ ಮಾತ್ರೆಯನ್ನು ಹಾಲಿನಲ್ಲಿ ಸೇರಿಸಿ ಗುರುಗಳಿಗೆ ಕೊಟ್ಟುಬಿಟ್ಟರು. ಔಷಧಿ ತನ್ನ ಕೆಲಸ ಮಾಡಿತು. ಮರುದಿನ ಎಚ್ಚರವಾದಾಗ ಗುರುಗಳಿಗೆ ವೈದ್ಯರು ಮಾಡಿದ್ದ ಕೆಲಸವೇನೆಂದು ಅರ್ಥವಾಯಿತು. ವೈದ್ಯರಿಗೆ ಹೇಳಿಕಳುಹಿಸಿದರು. ವೈದ್ಯರು ಬಂದು ನಮ್ರರಾಗಿ ನಿಂತಾಗ, ಕೊಟ್ಟ ಔಷಧಿ ಎಂತಹುದೆಂದು ಕೇಳಿ “ಸ್ವಾಭಾವಿಕವಾದ ವಿಸ್ಮರಣೆಯೇ ಸಾಲದೆಂದು ಹೆಚ್ಚಿನ ನಿದ್ದೆಗಾಗಿ ಔಷಧಿ ಕೊಡುವುದೇ? ಇನ್ನು ಮುಂದೆ ಹಾಗೆಲ್ಲ ಮಾಡಬೇಡಿ. ನಿದ್ದೆಯನ್ನು ಗೆಲ್ಲಬೇಕೆಂಬ ನಮ್ಮ ಪ್ರಯತ್ನಕ್ಕೆ ಅಡ್ಡಿ ತರಬೇಡಿ” ಎಂದು ಎಚ್ಚರಿಸಿದರು. ವೈದ್ಯರು ತಲೆತಗ್ಗಿಸಿ ಕ್ಷಮೆ ಕೋರಿದರು.

ಲೋಕದ ಅಳತೆಗೋಲಿನಿಂದ ನೋಡುವ ಜನಕ್ಕೆ ಇವೆಲ್ಲಾ ಅರ್ಥವಾಗುತ್ತದೆಯೇ?

* * *



## ೨೧. ಸಾಧನೆಯಿಂದ ಸಿದ್ಧಿಗೆ

ಶ್ರೀಗುರುದೇವರ ಆಧ್ಯಾತ್ಮಿಕ ಸಾಧನೆಯು ಅವ್ಯಾಹತವಾಗಿ ಸಾಗಿತ್ತು. ಮಠದ ಒಳಹೊರಗಿನ ವ್ಯವಹಾರಗಳನ್ನು ನೋಡಿಕೊಳ್ಳಲು ಸಮರ್ಥರಾದ ಅಧಿಕಾರಿಗಳಿದ್ದರು. ಕ್ಲುಪ್ತಕಾಲಗಳಲ್ಲಿ ಮಾತ್ರ ಹೊರಬರುತ್ತಿದ್ದ ಗುರುದೇವರು ತಮ್ಮ ದರ್ಶನಕ್ಕಾಗಿ ಬರುತ್ತಿದ್ದವರನ್ನು ಮಂದಹಾಸದಿಂದ, ಪ್ರಸನ್ನಚಿತ್ತದಿಂದ ಆಶೀರ್ವದಿಸುತ್ತಿದ್ದರು. ಶ್ರೀ ಚಂದ್ರಮೌಳೀಶ್ವರ ಪೂಜೆ, ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರ ಅಧಿಷ್ಠಾನ ಮತ್ತು ಶ್ರೀಶಾರದಾಂಬಾ ದರ್ಶನ, ತೀರ್ಥಪ್ರಸಾದ ವಿನಿಯೋಗ ಇವಿಷ್ಟನ್ನು ಕ್ರಮವಾಗಿ ನೆರವೇರಿಸಿ ಅನಂತರ ತಮ್ಮ ಸಾಧನಾಸ್ಥಳಕ್ಕೆ ಹೊರಟುಬಿಡುತ್ತಿದ್ದರು.

ಮಠದ ಯಾವ ವ್ಯವಹಾರಗಳಲ್ಲಿಯೂ ಆಸಕ್ತಿಯಿಲ್ಲ. ಆದಾಯ ಖರ್ಚುವೆಚ್ಚಗಳ ವಿವರಗಳನ್ನಾಗಲೀ, ಅಂದಾಜನ್ನಾಗಲೀ ಒಪ್ಪಿಸಿದರೆ ಮೌನವಾಗಿ ತಲೆಯಾಡಿಸಿಬಿಡುತ್ತಿದ್ದರು ಅಥವಾ ಸರಿ ಎಂದಷ್ಟೇ ನುಡಿಯುತ್ತಿದ್ದರು. ತತ್ಕಾಲದಲ್ಲಿ ನಡೆಯುತ್ತಿರುವ ಅಥವಾ ಮುಂದೆ ನಡೆಸಬೇಕಾದ ಕೆಲಸಕಾರ್ಯಗಳ ವಿವರವನ್ನು ಒಪ್ಪಿಸಿದರೂ ಅಷ್ಟೇ, ಸರಿ ಎಂದುಬಿಡುತ್ತಿದ್ದರು. ಯಾವ ಅಭಿಪ್ರಾಯವನ್ನೂ ಸೂಚಿಸುತ್ತಿರಲಿಲ್ಲ. ತಮಗೆ ಏನು ಬೇಕು, ಏನು ಬೇಡ ಎಂಬುದನ್ನೂ ತಿಳಿಸುತ್ತಿರಲಿಲ್ಲ. ವಿಖ್ಯಾತವಾದ ಜಗದ್ಗುರು ಪೀಠದಲ್ಲಿ ಇದ್ದೂ ಇಲ್ಲದಂತೆ, ತಾವರೆಯೆಲೆಯ ಮೇಲಣ ನೀರ ಹನಿಯಂತೆ ಎಲ್ಲ ಲೌಕಿಕ ವ್ಯವಹಾರಗಳಲ್ಲಿಯೂ ಅನಾಸಕ್ತರಾಗಿದ್ದುಬಿಟ್ಟರು.

ಮಠದ ಅಧಿಕಾರಿ ಶ್ರೀಕಂಠಶಾಸ್ತ್ರಿಗಳು ಇವೆಲ್ಲವನ್ನೂ ಗಮನಿಸಿದ್ದರು. ಅವರಿಗೂ ಆಗಾಗ ಮಠದ ಕೆಲಸದಿಂದ ನಿವೃತ್ತಿಹೊಂದಿ ವಿಶ್ರಾಂತಿ ಪಡೆಯಬೇಕೆಂಬ ಅಪೇಕ್ಷೆಯುಂಟಾಗುತ್ತಿತ್ತು. ಯಾರಾದರೂ ಸಮರ್ಥ ಅಧಿಕಾರಿ ದೊರೆತರೆ ತಾವು ವಿಶ್ರಾಂತಿ ಹೊಂದಬಹುದೆಂಬ ಯೋಚನೆಯೂ ಇತ್ತು. ಈ ವಿಚಾರವನ್ನು ಒಂದೆರಡು ಬಾರಿ ಗುರುಗಳಲ್ಲಿಯೂ ಅರಿಕೆ ಮಾಡಿಕೊಂಡಿದ್ದರು. ಒಮ್ಮೆ ಇದೇ ವಿಷಯವನ್ನು ಅರಿಕೆ ಮಾಡಿಕೊಂಡಾಗ ಗುರುದೇವರು “ಆಗಲಿ, ಸ್ವಲ್ಪದಿನ ತಡೆಯಿರಿ” ಎಂದು ನುಡಿದು ಶಾಸ್ತ್ರಿಗಳು ಪುನಃ ಆ ವಿಷಯವನ್ನು ಪ್ರಸ್ತಾಪಿಸದಂತೆ ಮಾಡಿಬಿಟ್ಟಿದ್ದರು. ಇನ್ನು ಕೆಲವು ದಿನ ತಾನೇ, ಕಾದು ನೋಡೋಣ ಎಂದು ಶಾಸ್ತ್ರಿಗಳೂ ಸುಮ್ಮನಾಗಿದ್ದರು.

ಶ್ರೀಗುರುದೇವರ ಸಾಧನೆಯು ತುತ್ತತುದಿಯನ್ನು ಮುಟ್ಟಿಬಿಟ್ಟಿತ್ತು. ಅವರು ಶಾಸ್ತ್ರಿಗಳಿಗೆ ಹೇಳಿದಂತೆ ಆ ಸ್ವಲ್ಪ ದಿನಗಳು ಕಳೆಯಲು, ಗುರುದೇವರು ಸಿದ್ಧಿಯ ಹಂತವನ್ನೇರಿಬಿಟ್ಟರು. ಅವರ ಚರ್ಯೆ ಸಂಪೂರ್ಣವಾಗಿ ಬದಲಾಗಿಬಿಟ್ಟಿತು. ಉನ್ಮತ್ತರಂತೆಯೂ, ಬಾಲಕರಂತೆಯೂ ವರ್ತಿಸಲಾರಂಭಿಸಿದರು. ಕೆಲವು ಸಲ ಮೂಢರಂತೆ, ಒಮ್ಮೊಮ್ಮೆ ವಿದ್ವಾಂಸರಂತೆ, ಒಮ್ಮೆ ಶಾಂತರಂತೆ ಕೆಲವೊಮ್ಮೆ ಭ್ರಾಂತರಂತೆ ವರ್ತಿಸಲಾರಂಭಿಸಿದರು. ಒಂದೊಂದು ಸಲ ಹುಚ್ಚರಂತೆ ನಗುವುದು, ಕೇಕೆ ಹಾಕುವುದು. ಮಗುವಿನಂತೆ ಅಳುವುದು, ಹೀಗೆ ವಿಚಿತ್ರವಾಯಿತು ಅವರ ಚರ್ಯೆ. ಎಲ್ಲರಿಗೂ ಆಶ್ಚರ್ಯವಾಯಿತು. ಕೆಲವರಿಗಂತೂ ವ್ಯಥೆಯೇ ಆಯಿತು. ಅಪ್ರಾಮಾಣಿಕರು, ಕಪಟಿಗಳು, ವಂಚಕರೂ ಹತ್ತಿರಹೋದಲ್ಲಿ ಗುರುದೇವರು ರೇಗಿಬಿಡುತ್ತಿದ್ದರು. ಸಾಧುಸ್ವಭಾವದವರು, ಗುಣಶಾಲಿಗಳು, ಆಚಾರಶೀಲರು ಹೋದರೆ ಸುಮ್ಮನಾಗುತ್ತಿದ್ದರು. ಬಹುಜನಕ್ಕೆ ಅದು ಹುಚ್ಚೇ ಎನಿಸಿತು.[೧೦]

ಶ್ರೀಗುರುದೇವರ ಈ ಸ್ಥಿತಿ ಬಹಳ ಜನಕ್ಕೆ ವಿಪರೀತವಾಗಿ ಕಂಡುದರಿಂದ ಗುರುದೇವರು ಪ್ರತ್ಯೇಕವಾಗಿ ಇರಲು ವ್ಯವಸ್ಥೆಯಾಯಿತು. ಅವರ ಸ್ನಾನ, ಆಹ್ನೀಕ, ಪೂಜೆ, ಭಿಕ್ಷೆಗಳಿಗೆ ಪ್ರತ್ಯೇಕ ಏರ್ಪಾಟಾಯಿತು. ತೀರ ಆಪ್ತರಾದ ಸೇವಕರು ಮಾತ್ರ ಸಮೀಪಕ್ಕೆ ಹೋಗುತ್ತಿದ್ದರು. ಸ್ನಾನಕ್ಕೆ ಕುಳಿತರೆ ಪಾತ್ರೆಯಲ್ಲಿ ನೀರು ಮುಗಿದುಹೋಗಿದ್ದರೂ ತಲೆಯ ಮೇಲೆ ಸುರುವಿಕೊಳ್ಳುತ್ತಲೇ ಇದ್ದರು. ಹೊರಗಿನ ಅರಿವೂ ಇಲ್ಲ, ಹೊತ್ತಿನ ಪರಿವೆಯೂ ಇಲ್ಲ. ಪರಿಜನಕ್ಕೆ ನೀರು ಮುಗಿದಿದೆ ಎಂದು ಹೇಳಲು ಭಯ. ಎಷ್ಟು ಸಮಯವಾದರೂ ಕೈ ಯಾಂತ್ರಿಕವಾಗಿ ತಲೆಗೂ ನೀರಿನ ಪಾತ್ರೆಗೂ ಮಧ್ಯೆ ಚಲಿಸುತ್ತಲೇ ಇರುತ್ತಿತ್ತು! ತೆರೆದ ಕಣ್ಣು ತೆರೆದಂತೆಯೇ ಇರುತ್ತಿತ್ತು. ಪೂಜೆಗೆ ಕುಳಿತರೂ ಅಷ್ಟೇ, ಬಹಳ ಕಾಲ ಅರ್ಚನೆಯಲ್ಲಿಯೇ ತನ್ಮಯರಾಗಿಬಿಡುತ್ತಿದ್ದರು. ಕುಂಕುಮವೆಲ್ಲಾ ಮುಗಿದರೂ ಬೆರಳುಗಳು ಶ್ರೀಚಕ್ರದತ್ತ ಚಲಿಸಿ ಮುಗುಳಿನಂತೆ ಅರಳಿ ಮತ್ತೆ ಕುಂಕುಮ ಪಾತ್ರೆಗೆ ಹಿಂತಿರುಗುತ್ತಿದ್ದವು! ವಸ್ತ್ರವುಟ್ಟರೆ ಉಂಟು ಇಲ್ಲವಾದರೆ ಇಲ್ಲ. ಆಹಾರ ಸೇವನೆ ಮಾಡಿದರೆ ಮಾಡಿದರು, ಇಲ್ಲದಿದ್ದರೆ ಬಹುದಿನಗಳ ವರೆಗೆ ನಿರಾಹಾರ! ಹೀಗೆ ಎಷ್ಟೋ ತಿಂಗಳುಗಳು ಕಳೆದವು. ಅನೇಕರಿಗೆ

೧೦ ಶ್ರೀ ಶಂಕರ ಭಗವತ್ಪಾದರು ವಿವೇಕ ಚೂಡಾಮಣಿಯಲ್ಲಿ ಹೇಳಿರುವ ಜೀವನ್ಮುಕ್ತನ ಲಕ್ಷಣವನ್ನೂ [ಶ್ಲೋಕ ೪೨೪–೪೪೩] ಅವಧೂತನ ಲಕ್ಷಣವನ್ನೂ [ಶ್ಲೋಕ ೫೩೫–೫೪೧] ಶ್ರೀ ಚಂದ್ರಶೇಖರ ಭಾರತೀಯವರಲ್ಲಿ ಕಾಣಬಹುದಾಗಿತ್ತು.



ಗುರುದೇವರ ದೇಹಸ್ಥಿತಿಯ ಬಗ್ಗೆ ತುಂಬಾ ಕಳವಳ, ಚಿಂತೆ ಭೀತಿಗಳುಂಟಾದವು.

ಒಮ್ಮೆ ಇದ್ದಕ್ಕಿದ್ದಂತೆಯೇ ಗುರುಗಳು ಬಹಿರ್ಮುಖರಾದರು. ತಾವಾಗಿಯೇ ಹೊರಕ್ಕೆ ಬಂದರು. ಎಲ್ಲರನ್ನೂ ಎಂದಿನಂತೆ ಮಾತನಾಡಿಸಿದರು. ಸ್ನಾನಾಹ್ನಿಕಗಳನ್ನು ನೆರವೇರಿಸಿದರು. ಪೂಜಾದಿಗಳನ್ನು ಮಾಡಿದರು. ಹಿಂದಿನ ದಿನವಷ್ಟೇ ವಿಪರೀತವಾಗಿ ವರ್ತಿಸುತ್ತಿದ್ದವರು ಈ ದಿನ ಸಹಜವಾಗಿದ್ದುದನ್ನು ಕಂಡು ಎಲ್ಲರಿಗೂ ಆಶ್ಚರ್ಯ. ಆದರೂ ಜನಕ್ಕೆ ಭಯ. ಹತ್ತಿರವಿದ್ದ ಆಪ್ತರು ಮಾತ್ರ ಧೈರ್ಯವಾಗಿ ಓಡಾಡುತ್ತಿದ್ದರು. ಗುರುಗಳು ಎಂದಿನಂತೆ ತಮ್ಮ ಕಾರ್ಯಕ್ರಮಗಳನ್ನು ನಡೆಸಲಾರಂಭಿಸಿದುದನ್ನು ಕಂಡು ಬಹುಜನಕ್ಕೆ ಸಂತೋಷವಾಯಿತು.

ಈ ಅವಧೂತಾವಸ್ಥೆಗೆ ಬರುವ ಮುನ್ನ ಶ್ರೀಗುರುದೇವರು ಮಧ್ಯಾಹ್ನ ಭಿಕ್ಷೆಯ ನಂತರ ಸ್ವಲ್ಪಕಾಲ ಗ್ರಂಥಾವಲೋಕನ ಮಾಡುತ್ತಿದ್ದರು. ಆ ಬಳಿಕ ಹಲವು ಜನ ವಿದ್ವಾಂಸರೊಡನೆ ವೇದಾಂತ ಶಾಸ್ತ್ರ ವಿಚಾರ ಮಾಡುತ್ತಿದ್ದರು. ಅವರು ಬಹಿರ್ಮುಖರಾದ ನಂತರ ಎರಡು ಮೂರು ದಿನಗಳಾದರೂ ಯಾವ ಪಂಡಿತರೂ ಹತ್ತಿರ ಸುಳಿಯಲೇ ಇಲ್ಲ. ಬಹಿರ್ಮುಖರಾಗಿ ಹಲವಾರು ದಿನಗಳಾದವು. ಒಂದು ದಿನ ಗುರುದೇವರು ಶ್ರೀಕಂಠಶಾಸ್ತ್ರಿಗಳನ್ನು ಕರೆಸಿ "ಏಕೆ, ಪಂಡಿತರಾರೂ ನಮ್ಮಲ್ಲಿ ಬರುತ್ತಲೇ ಇಲ್ಲವಲ್ಲ?" ಎಂದು ಕೇಳಿದರು. ಶಾಸ್ತ್ರಿಗಳು "ಈ ದಿನ ಅವರಿಗೆ ಹೇಳಿಕಳಿಸುತ್ತೇನೆ" ಎಂದು ನುಡಿದರು.

ಶಾಸ್ತ್ರಿಗಳು ಹಲವಾರು ಜನ ಪಂಡಿತರನ್ನು ಕರೆದು ಗುರುದೇವರ ದರ್ಶನ ಮಾಡಬಹುದೆಂದು ತಿಳಿಸಿದರು. ಆದರೆ ಪಂಡಿತರಿಗೆ ಗುರುಗಳ ಬಳಿ ಹೋಗಲು ಭಯ. ಗುರುದೇವರನ್ನು ಬಾಲ್ಯದಿಂದ ಬಲ್ಲವರೂ, ಅವರ ವಿದ್ಯಾಗುರುಗಳೂ ಆಗಿದ್ದ ಆರಡೀಕೊಪ್ಪದ ಸುಬ್ರಹ್ಮಣ್ಯಶಾಸ್ತ್ರಿಗಳೊಬ್ಬರು ಮಾತ್ರ ದರ್ಶನಕ್ಕೆ ಬಂದರು. ಗುರುದೇವರೇನು ಮಾಡಿಬಿಡುತ್ತಾರೋ ಎಂದು ಅವರಿಗೂ ಸ್ವಲ್ಪ ಭಯವಿತ್ತು! ಆದ್ದರಿಂದ ಮುಂಜಾಗ್ರತೆ ವಹಿಸಿದ ಶಾಸ್ತ್ರಿಗಳು ಗುರುಗಳಿಗೆ ನಮಸ್ಕರಿಸಿ ಸ್ವಲ್ಪದೂರದಲ್ಲಿಯೇ ಕುಳಿತರು. ದೂರದಿಂದಲೇ ನಮಸ್ಕರಿಸಿ ಕುಳಿತ ಶಾಸ್ತ್ರಿಗಳನ್ನು ಕಂಡು ಗುರುದೇವರು ಹಸನ್ಮುಖದಿಂದ ಭಯ ಪಡಬೇಡಿ. ಹತ್ತಿರ ಬನ್ನಿ" ಎಂದರು. ಶಾಸ್ತ್ರಿಗಳು ತಮ್ಮ ಭಯಕ್ಕೆ ತಾವೇ ನಾಚಿಕೊಂಡು ತಲೆಬಾಗಿ ಮತ್ತೊಮ್ಮೆ ಅಡ್ಡಬಿದ್ದು ನಮಸ್ಕಾರ ಮಾಡಿ ಹತ್ತಿರದಲ್ಲಿಯೇ ಕುಳಿತರು.

ಗುರುದೇವರು ಶಾಸ್ತ್ರಿಗಳ ಯೋಗಕ್ಷೇಮ ವಿಚಾರಿಸಿದರು. ಶಾಸ್ತ್ರಿಗಳ ನೆಂಟರಿಷ್ಟರ, ಸ್ನೇಹಿತರ ಯೋಗಕ್ಷೇಮವನ್ನು ವಿಚಾರಿಸಿದರು. ಅನಂತರ

"ಶಾಸ್ತ್ರಿಗಳೇ, ಜನ ಏನೆನ್ನುತ್ತಾರೆ? ಎಂದರು. ಶಾಸ್ತ್ರಿಗಳಿಗೆ ಬೇಗ ಅರ್ಥವಾಗಲಿಲ್ಲ. "ಯಾವ ವಿಚಾರವಾಗಿ ಮಹಾಸ್ವಾಮಿ?" ಎಂದು ಕೇಳಿದರು. "ಅದೇ, ನಮ್ಮ ವಿಚಾರ" ಎಂದರು ಗುರುದೇವರು. ಶಾಸ್ತ್ರಿಗಳಿಗೆ ಒಂದು ಕ್ಷಣ ಮಾತೇ ಹೊರಡಲಿಲ್ಲ. "ಏಕೆ, ಸುಮ್ಮನಾದಿರಲ್ಲ?" ಎಂದರು ಗುರುಗಳು. ಜನ ಮಾತನಾಡಿಕೊಳ್ಳುವುದನ್ನು ಗುರುಗಳ ಮುಂದೆಯೇ ಹೇಳುವುದುಂಟೇ? ಎಂದು ಶಾಸ್ತ್ರಿಗಳು ಆಲೋಚನೆ ಮಾಡುತ್ತಿದ್ದರು. ಪರವಾಗಿಲ್ಲ, ಹೇಳಿ ಶಾಸ್ತ್ರಿಗಳೇ" ಎಂದು ಪುನಃ ಗುರುಗಳು ಒತ್ತಾಯಿಸಿದರು.

ವಿನಯ, ನಮ್ರತೆಗಳು ಮೈವೆತ್ತ ಧ್ವನಿಯಲ್ಲಿ ಶಾಸ್ತ್ರಿಗಳೆಂದರು. "ಜನರು ವಿಧವಿಧವಾಗಿ ಮಾತನಾಡಿಕೊಳ್ಳುತ್ತಾರೆ. ಸನ್ನಿಧಾನ ಅದನ್ನೆಲ್ಲಾ ಗಮನಿಸ ಬಾರದೆಂದು ನನ್ನ ಕೋರಿಕೆ" ಎಂದರು.

"ಹಾಗಾದರೆ ಜನದ ಅಭಿಪ್ರಾಯ ಬೇಡ. ನಿಮ್ಮ ಅಭಿಪ್ರಾಯವೇನು? ಹೇಳಿ" ಎಂದರು ಗುರುದೇವರು. ಶಾಸ್ತ್ರಿಗಳಿಗೆ ಕಷ್ಟಕ್ಕೆ ಬಂದಿತು. ಅವರೂ ಸಹ ಸಾಮಾನ್ಯ ಜನರಂತೆಯೇ ಭಾವಿಸಿದ್ದರಲ್ಲವೇ? ಮತಿವಿಕಲ್ಪವಾಗಿರ ಬಹುದೇನೋ ಎಂದು ಸಂಶಯ ಪಟ್ಟಿರಲಿಲ್ಲವೇ?

"ಏಕೆ ಶಾಸ್ತ್ರಿಗಳೇ, ಮೌನವಾದಿರಿ?"

"ನನಗೂ ವಿವಿಧವಾದ ಭಾವನೆಗಳು ಮೂಡಿದುವು ಮಹಾಸ್ವಾಮಿ"

"ಹೇಳಿ"

"ಸನ್ನಿಧಾನದ ಮಹಾಮಾತೃಶ್ರೀಯವರು ನಿಧನರಾದ ಸ್ವಲ್ಪದಿನಕ್ಕೇ ಗುರುದೇವರ ಪ್ರಕೃತಿ ಬದಲಾಯಿಸಿದುದರಿಂದ ತಾಯಿಯವರ ಮರಣಶೋಕವು ತೀವ್ರವಾಗಿ ಹಾಗಾಯಿತೇನೋ ಎನ್ನಿಸಿತು." [ಶ್ರೀ ಗುರುದೇವರ ಮಾತೃಭಕ್ತಿಯು ಶ್ರೀ ಶಾರದಾಂಬೆಯಲ್ಲಿ ಅವರು ತೋರುತ್ತಿದ್ದ ಭಕ್ತಿಯಂತೆಯೇ ಅತ್ಯಂತ ಶ್ರೇಷ್ಠವಾಗಿತ್ತು]

ತಲೆಯಲ್ಲಾಡಿಸಿ ನಕ್ಕುಬಿಟ್ಟ ಗುರುಗಳು "ಮತ್ತೆ ಏನೆನ್ನಿಸಿತು?" ಎಂದು ಕೇಳಿದರು.

"ಸನ್ನಿಧಾನವು ಯೋಗಾಭ್ಯಾಸ ನಿರತರಾಗಿ ಕಠಿಣ ತಪಶ್ಚರ್ಯೆಯಲ್ಲಿ ಮಗ್ನರಾಗಿದ್ದುದರಿಂದ, ಅದರಲ್ಲಿ ವ್ಯತ್ಯಾಸವಾಗಿ ಹಾಗಾಯಿತೇನೋ ಎನ್ನಿಸಿತು."

ಮೌನವಾಗಿಯೇ ತಲೆಯಾಡಿಸಿ ಅದು ಹಾಗಲ್ಲ ಎಂಬುದನ್ನು ಸ್ಪಷ್ಟ ಪಡಿಸಿದ ಗುರುಗಳು, "ಇನ್ನೇನೂ ಅನ್ನಿಸಲಿಲ್ಲವೇ?" ಎಂದು ಶಾಸ್ತ್ರಿಗಳನ್ನು ಕೇಳಿದರು.



"ಸನ್ನಿಧಾನವು ಅತ್ಯುಗ್ರಸಾಧನೆಯಲ್ಲಿ ನಿರತರಾಗಿ ಕಟ್ಟಕಡೆಯ ಹಂತವನ್ನೇರಿ ಪರಮೋಚ್ಚ ಸ್ಥಿತಿಗೆ, ಜೀವನ್ಮುಕ್ತ ಸ್ಥಿತಿಗೆ, ಅವಧೂತ ಸ್ಥಿತಿಗೆ ತಲುಪಿರಬಹು ದೆಂದೂ ಅನ್ನಿಸಿತು" ಎಂದು ಶಾಸ್ತ್ರಿಗಳು ನಮ್ರರಾಗಿ ನುಡಿದರು. ಆಗ ಗುರುದೇವರು ಪ್ರಸನ್ನರಾಗಿ "ಹಾಗೋ? ಹಾಗೂ ಅನ್ನಿಸಿತೋ?" ಎಂದು ನುಡಿದು ಮಂದಹಾಸವನ್ನು ಬೀರಿ ಸುಮ್ಮನಾದರು!

ಶಾಸ್ತ್ರಿಗಳಿಗೆ ಅಲ್ಲಿಯವರೆಗೂ ಇದ್ದ ಸಂಶಯಗಳೆಲ್ಲಾ ಹಾರಿಹೋಗಿ, ತಾವು ಮಹಾತಪಸ್ವಿಯ, ಮಹಾಯೋಗಿಯ, ಸಿದ್ಧಪುರುಷನೋರ್ವನ ದಿವ್ಯ ಸನ್ನಿಧಿಯಲ್ಲಿರುವ ಅಪೂರ್ವ ಅನುಭವವುಂಟಾಯಿತು. ಇಂತಹ ಮಹಾತ್ಮನನ್ನು, ಮಹಾನುಭಾವಿಯನ್ನು ಸಾಮಾನ್ಯರಂತೆ ತಾನೂ ತಪ್ಪಾಗಿ ಭಾವಿಸಿದ್ದೆನಲ್ಲಾ ಎಂದು ತೀವ್ರ ಪಶ್ಚಾತ್ತಾಪ ಉಂಟಾಯಿತು.

ಇದೆಲ್ಲಾ ಶ್ರೀಗುರುದೇವರು ಸಂಚಾರ ಹೊರಡುವ ಮೊದಲೇ ಜರುಗಿದುದು.

* * *

# ೨೨. ಅವಧೂತ ಗುರು

ಶ್ರೀಪಾತಂಜಲಿ ಪ್ರಣೀತ ಯೋಗದರ್ಶನ ಮಾರ್ಗದಲ್ಲಿ ಗುರುವರ್ಯರು ಕಠಿಣತಮ ಸಾಧನೆ ನಡೆಸಿ ಸಿದ್ಧಿ ಪಡೆದಿದ್ದರೆಂದು ಓದಿದೆವು. ಅಸಂಪ್ರಜ್ಞಾತ ಸಮಾಧಿಸ್ಥಿತಿಯಲ್ಲಿ ಅವರು ಅನೇಕ ದಿನಗಳಿರುತ್ತಿದ್ದರು. ಅವರು ಈ ಸ್ಥಿತಿಯಲ್ಲಿರುತ್ತಿದ್ದಾಗ ಬಾಹ್ಯ ವ್ಯಾಪಾರ ಪೂರ್ಣವಾಗಿ ಇಲ್ಲವಾಗಿ ಅವರನ್ನು ಕಂಡವರಿಗೆ ಅವರಿಗೇನು ಮಂಕು ಕವಿಯಿತೋ, ಹುಚ್ಚು ಹಿಡಿಯಿತೋ ಎನ್ನಿಸುವಷ್ಟು ಮಟ್ಟಿಗೆ ಗುರುವರ್ಯರ ಆಚರಣೆ, ನಡವಳಿಕೆ ಮಾತುಗಳೆಲ್ಲವೂ ವಿಪರೀತವೂ, ವಿಚಿತ್ರವೂ ಆಗಿರುತ್ತಿದ್ದವು.

ಈ ರೀತಿ ಅಂತರ್ಮುಖರಾಗುವುದು ಕ್ರಮೇಣ ಹೆಚ್ಚಾಯಿತು. ಮಠದ ಆಡಳಿತದಲ್ಲಿ ಸಲಹೆ ನೀಡುವುದು, ಕೆಲಸಕಾರ್ಯಗಳ ಪರಿಶೀಲನೆ ಇತ್ಯಾದಿಗಳು ಕಡಿಮೆಯಾಗುತ್ತ ಬಂದು ನಿಂತೇ ಹೋದುವು. ಶೃಂಗೇರಿ ಪೀಠದಂತಹ ದೊಡ್ಡ ಆಧ್ಯಾತ್ಮಿಕ ಸಂಸ್ಥೆಯ ಪೀಠಾಧಿಪತಿಯಾದವರು ಯಾರನ್ನೂ ನೋಡದೇ, ಯಾರಲ್ಲಿಯೂ ಮಾತನಾಡದೇ, ಯಾರಿಗೂ ಕಾಣಿಸಿಕೊಳ್ಳದೇ ತಿಂಗಳುಗಳ ಕಾಲ ಅದೃಶ್ಯರಾಗಿಬಿಡುತ್ತಿದ್ದುದು, ಲೋಕವ್ಯವಹಾರಗಳಲ್ಲಿ ಅನಾಸಕ್ತರಾಗಿ ಬಿಡುತ್ತಿದ್ದುದು ಬಹುಜನರಿಗೆ ಚಿಂತೆಯ ವಿಷಯವಾಯಿತು. ಮಠದ ಶಿಷ್ಯರೂ, ಭಕ್ತರೂ ಕಲೆತು ಚರ್ಚಿಸಿದರು. ಗುರುಗಳಿಗೆ ಬುದ್ಧಿವಿಕಲ್ಪವಾಗಿರಬಹುದೇ ಎಂದು ಯೋಚಿಸಿದರು. ಗುರುಗಳ ಅಂತರ್ಮುಖತೆ ನೂರಾರು ಊಹಾಪೋಹಗಳಿಗೆ ಅವಕಾಶ ಕೊಟ್ಟಿತು. ಕೆಲವರು ಮಠದ ಆಡಳಿತಗಾರರಲ್ಲಿ ಬೇಸರಹೊಂದಿ ಗುರುಗಳು ಅಂತರ್ಮುಖರಾಗಿದ್ದಾರೆಂದು ಭಾವಿಸಿದರು. ವಿಧವಿಧವಾದ ಸುದ್ದಿಗಳು ಹರಡುತ್ತಿದ್ದವು.

ನೆಲಮಾವು ಮಠದ ಶ್ರೀಕಮಲಾನಂದ ನರಸಿಂಹಭಾರತೀ ಸ್ವಾಮಿಗಳವರು ಶ್ರೀಗುರುದೇವರಲ್ಲಿ ವೇದಾಂತ ವಿದ್ಯಾಭ್ಯಾಸವನ್ನೂ, ಆಧ್ಯಾತ್ಮ ಮಾರ್ಗದರ್ಶನವನ್ನೂ ಪಡೆದುಕೊಂಡಿದ್ದವರು. ಗುರುದೇವರ ಶರೀರಸ್ಥಿತಿ ವ್ಯತ್ಯಾಸವಾಗಿ ಅವರಿಗೆ ಬುದ್ಧಿವಿಕಲ್ಪವಾಗಿದೆಯೆಂಬ ವರ್ತಮಾನ ತಿಳಿದ ಕೂಡಲೇ ಅವರು ತಮ್ಮ ದೂರದೇಶದ ಸಂಚಾರವನ್ನು ನಿಲ್ಲಿಸಿ ಶೃಂಗೇರಿಯತ್ತ ಧಾವಿಸಿ ಬಂದರು. ನರಸಿಂಹವನಕ್ಕೆ ಬಂದ ಅವರು ಚಿಲಕ ಹಾಕಿದ್ದ ಕೊಠಡಿಯನ್ನು ನೋಡಿದರು. ಕೊಠಡಿಯ ಬಾಗಿಲಿನಲ್ಲಿ ಒಬ್ಬ ಪರಿಚಾರಕನೂ ಇದ್ದನು. ಗುರುದೇವರನ್ನು ಸಂದರ್ಶಿಸುವ ತವಕದಿಂದ ಬಂದ ನೆಲಮಾವು ಸ್ವಾಮಿಗಳು ಅವನಿಗೆ ತಮ್ಮ ಅಭೀಪ್ಸೆಯನ್ನು ತಿಳಿಸಿದರು. ಆತನು ಚಿಲಕವನ್ನು ತೆಗೆಯುವಂತಿಲ್ಲವೆಂದೂ ಬೇಕಾದರೆ ಕಿಟಕಿಯನ್ನು ಸ್ವಲ್ಪ ಸರಿಸಿ ದರ್ಶನ ಮಾಡಬಹುದೆಂದೂ ತಿಳಿಸಿದನು. ಮೆಲ್ಲನೆ ಕಿಟಕಿಯನ್ನು ಪಕ್ಕಕ್ಕೆ ಓರೆಮಾಡಿ ಮರೆಯಾಗಿ ನಿಂತ ನೆಲಮಾವು ಸ್ವಾಮಿಗಳು ಕಿಟಕಿಯಲ್ಲಿ ಬಗ್ಗಿ ಜೀರ್ಣಕಾಯರಾಗಿ ಅವಧೂತರಂತೆ ಕಂಗೊಳಿಸುತ್ತಿದ್ದ ಗುರುಗಳನ್ನು ನೋಡಿದರು. ಕೇವಲ ಕೆಲವೇ ದಿನಗಳ ಮೊದಲು ಶ್ರೀಗುರುದೇವರ ಪಾದಸನ್ನಿಧಿಯಲ್ಲಿ ಕುಳಿತು ಭಾಷ್ಯಪ್ರವಚನವನ್ನು ಶ್ರವಣ ಮಾಡಿದ್ದ ನೆಲಮಾವು ಸ್ವಾಮಿಗಳಿಗೆ ಈಗ ಜೀರ್ಣಶೀರ್ಣಕಾಯರಾಗಿದ್ದ ಗುರುದೇವರನ್ನು ನೋಡಿದೊಡನೆಯೇ ದುಃಖ ಉಮ್ಮಳಿಸಿತು. ನಿಂತಲ್ಲಿಯೇ ಅಡ್ಡಬಿದ್ದರು ಆ ಅವಧೂತರೂಪೀ ಬ್ರಹ್ಮನಿಗೆ!

ನಮಸ್ಕರಿಸಿ ಎದ್ದುನಿಂತ ನೆಲಮಾವು ಸ್ವಾಮಿಗಳು ತಮ್ಮೆದುರು ಕಿಟಕಿಯ ಬಳಿಯಲ್ಲಿಯೇ ಗುರುದೇವರು ಬಂದು ದರ್ಶನವೀಯುತ್ತಿದ್ದುದನ್ನು ಕಂಡು ಅಚ್ಚರಿಗೊಂಡರು. ಅತೀವ ಹರ್ಷದಿಂದ ಅವರು ಮತ್ತೊಮ್ಮೆ ನಮಸ್ಕರಿಸಿ ಎದ್ದಾಗ "ಸಂಜೆ ನಾಲ್ಕು ಗಂಟೆಗೆ ಬನ್ನಿ" ಎಂದು ಗುರುದೇವರು ಒಳಗಿನಿಂದಲೇ ಆದೇಶವಿತ್ತರು.

ನೆಲಮಾವು ಸ್ವಾಮಿಗಳ ಉತ್ಸಾಹ ಸಂತೋಷಕ್ಕೆ ಪಾರವೇ ಇರಲಿಲ್ಲ. ಸಂಜೆ ಕ್ಲುಪ್ತ ಸಮಯಕ್ಕೆ ಸರಿಯಾಗಿ ದರ್ಶನಕ್ಕೆ ಹೋದಾಗ ಅವರು ದರ್ಶಿಸಿದ್ದು ವಿಭೂತಿ, ರುದ್ರಾಕ್ಷ, ಕಾಷಾಯ ವಿಭೂಷಿತರಾಗಿ ಪೀಠಸ್ಥರಾಗಿದ್ದ ಗುರುದೇವರನ್ನು. ನೆಲಮಾವು ಸ್ವಾಮಿಗಳಿಗೆ ಅಚ್ಚರಿಯಾಯಿತು. ಬೆಳಿಗ್ಗೆ ತಾವು ದರ್ಶನ ಮಾಡಿದ ಅವಧೂತನನ್ನೂ, ಈಗ ಕಾಣುತ್ತಿರುವ ಸಂತಶ್ರೇಷ್ಠರನ್ನೂ ಹೋಲಿಸಿಕೊಳ್ಳುತ್ತಾ ಸಾಷ್ಟಾಂಗ ಪ್ರಣಾಮ ಮಾಡಿದರು. ಗುರುಗಳು ಪ್ರಶ್ನೆ ಮಾಡಿದರು.

"ಈ ಬೆಳಿಗ್ಗೆ ಬಂದಿರಿ"

"ಹೌದು ಮಹಾಸ್ವಾಮಿ"

"ನೀವು ದೂರ ದೇಶ ಪ್ರವಾಸ ಮಾಡುತ್ತಿದ್ದಿರಿ ಅಲ್ಲವೇ?"

"ಹೌದು"

"ಇಲ್ಲಿಗೆ ಈಗ ಬರಲು ಕಾರಣ?"

"ಮಹಾಸ್ವಾಮಿಗಳ ಶರೀರವು ಸ್ವಸ್ಥವಾಗಿಲ್ಲವೆಂದು ಸುದ್ದಿ ಕೇಳಿದೆ. ಸ್ವತಃ ದರ್ಶನ ಮಾಡೋಣವೆಂದು ತಕ್ಷಣವೇ ಬಂದುಬಿಟ್ಟೆ"

"ಹಾಗೋ, ಒಳ್ಳೆಯದಾಯಿತು. ಆದರೆ ಈ ಕಾರಣಕ್ಕಾಗಿ ನೀವು ನಿಮ್ಮ ಸಂಚಾರವನ್ನು ನಿಲ್ಲಿಸಬೇಕಾಗಿರಲಿಲ್ಲ. ನೀವು ಈ ಶರೀರ ಸ್ವಸ್ಥವಾಗಿರಲಿಲ್ಲ

ವೆಂದಿರಿ. ಈ ಶರೀರವೇ ಆತ್ಮನಲ್ಲ ಮತ್ತು ಅದು ಆತ್ಮನಲ್ಲಿ ಇರಲೂ ಆಗದು. ಶರೀರದ ಸ್ವಭಾವವೇ ಆತ್ಮನಿಂದ ಹೊರಗಿರುವುದು. ಆದ್ದರಿಂದ ಅದು ಸ್ವಸ್ಥವಾಗಿಲ್ಲದಿರುವುದರಲ್ಲಿ, ಆತ್ಮನಲ್ಲಿ ಇಲ್ಲದಿರುವುದರಲ್ಲಿ ಆಶ್ಚರ್ಯವೇನೂ ಕಾಣದು. ಈ ತನುವಿಗೆ ಶರೀರ ಮತ್ತು ದೇಹ ಎಂಬೆರಡು ಹೆಸರುಗಳು ಇವೆ. 'ಶರೀರ' ಶಬ್ದವು ಜೀರ್ಣವಾಗುವುದನ್ನು ಸೂಚಿಸುತ್ತದೆ. 'ದೇಹ' ಶಬ್ದವು ಬೆಳೆಯುವುದನ್ನು ಸೂಚಿಸುತ್ತದೆ. ಹುಟ್ಟಿದ ಕ್ಷಣದಿಂದಲೇ ಸ್ನಾಯುಗಳು ದೊಡ್ಡವೂ, ಬಲಿಷ್ಠವೂ, ದೃಢವೂ ಆಗಿ ಬೆಳೆಯುವ ಸ್ಥಿತಿಯಲ್ಲಿ ತನುವು ದೇಹವೆನ್ನಿಸಿಕೊಳ್ಳುತ್ತದೆ. ಬೆಳವಣಿಗೆ ನಿಂತ ನಂತರ ಅದು ಕ್ರಮವಾಗಿ ನಶಿಸಲು ಆರಂಭಿಸುವ ಸ್ಥಿತಿಯಲ್ಲಿ ಅದನ್ನು ಶರೀರವೆನ್ನುತ್ತಾರೆ.

ಆದ್ದರಿಂದ ಈ ದೇಹವು ತನ್ನ ಬೆಳವಣಿಗೆಯ ಸ್ಥಿತಿಯ ನಂತರ ಜೀರ್ಣಸ್ಥಿತಿಗೆ ಹೊರಡುತ್ತದೆ. ಬೆಳವಣಿಗೆ ನಿಂತ ನಂತರ ಜೀರ್ಣವಾಗುವ ಶರೀರವು ತನ್ನ ಪೂರ್ವಾರ್ಜಿತ ಕರ್ಮಗಳಿಗನುಸಾರವಾಗಿ ಬಾಧೆಗಳನ್ನು ಅನುಭವಿಸುತ್ತದೆ. ಅದಕ್ಕಾಗಿ ಗಾಬರಿ ಪಡಬೇಕಾದ, ಖಿನ್ನರಾಗಬೇಕಾದ ಅವಶ್ಯಕತೆಯಿಲ್ಲ. ನನ್ನ ಬಗ್ಗೆ ಚಿಂತೆ ಮಾಡದೇ ನಿಮ್ಮ ಯಾತ್ರಾ ಕಾರ್ಯ ಮುಂದುವರೆಸಿ"

ಗುರುದೇವರ ದಿವ್ಯವಾಣಿಯನ್ನಾಲಿಸಿದ ನೆಲಮಾವು ಸ್ವಾಮಿಗಳು ಮನಸ್ಸಿನಲ್ಲಿಯೇ ಚಿಂತನ ಮಾಡುತ್ತಾ ತಮ್ಮ ಕಾರ್ಯಕ್ಷೇತ್ರಕ್ಕೆ ಹಿಂದಿರುಗಿದರು. ಗುರುದೇವರೂ ತಮ್ಮ ಏಕಾಂತವಾಸಕ್ಕೆ ಹಿಂದಿರುಗಿದರು.

ಗುರುಗಳು ಹೀಗೆ ಪರಾಙ್ಮುಖರಾಗಿದ್ದ ಮತ್ತೊಂದು ಸಂದರ್ಭದಲ್ಲಿ ಆಪ್ತ ಶಿಷ್ಯರೊಬ್ಬರು ತಮ್ಮ ತಮ್ಮನಿಗೆ ತುಂಬಾ ಕಾಯಿಲೆಯೆಂದೂ, ಗುರುವರ್ಯರ ಆಶೀರ್ವಾದ ರಕ್ಷೆ ಬೇಕೆಂದೂ ಬೇಡಿ ತಂತಿ ಕಳುಹಿಸಿದ್ದರು. ಆ ತಂತಿಯನ್ನು ಅಂಚೆಯಾಳಿನ ಮೂಲಕ ಸ್ವೀಕರಿಸಿದ ಮಠದ ಅಧಿಕಾರಿಗಳು "ಗುರುಗಳಿಗೆ ಬಾಹ್ಯದ ಅರಿವೇ ಇಲ್ಲದಿರುವಾಗ ಇದೆಲ್ಲಾ ಹೇಗೆ ತಿಳಿಯುತ್ತದೆ?" ಎಂದು ತಮ್ಮಲ್ಲೇ ಗೊಣಗಿಕೊಂಡರು.

ಕೆಲಸಮಯದ ಬಳಿಕ ಅಧಿಕಾರಿಗಳು ಅಕಸ್ಮಾತ್ ಗುರುಗಳು ಬಹಿರ್ಮುಖರಾಗಿದ್ದರೆ ತಂತಿಯ ವಿಷಯನ್ನು ಬಿನ್ನವಿಸೋಣವೆಂದುಕೊಂಡು ಗುರುಗಳು ಅಂತರ್ಮುಖಿಗಳಾಗಿದ್ದಾಗ ಇರುತ್ತಿದ್ದ ಸ್ಥಳಕ್ಕೆ ಹೋದರು. ಅದೃಷ್ಟವಶಾತ್ ಬಹಿರ್ಮುಖರಾಗಿದ್ದ ಗುರುಗಳೇ ಕೇಳಿದರು, "ಅದೇನು ನಿಮ್ಮ ಕೈಯಲ್ಲಿ?"

"ಶ್ರೀಯುತ      ರು ತಮ್ಮ ಅಣ್ಣನಿಗೆ ಕಾಯಿಲೆಯೆಂದೂ, ಆಶೀರ್ವದಿಸಬೇಕೆಂದೂ ಪ್ರಾರ್ಥಿಸಿಕೊಂಡಿದ್ದಾರೆ. ಈ ತಂತಿ ಸಮಾಚಾರ



ತಮ್ಮನಿಂದ ಬಂದಿದೆ"

"ಏನೆಂದಿರಿ? ತಮ್ಮನಿಗೆ ಸೌಖ್ಯವಿಲ್ಲವೆಂದು ಅಣ್ಣನಿಂದಲ್ಲವೇ ತಂತಿ ಬಂದಿರುವುದು?"

ಗುರುಗಳು ಮರುಪ್ರಶ್ನೆ ಕೇಳಿದಾಗಲೇ ಮಠದ ಅಧಿಕಾರಿಗಳು ತಮ್ಮ ತಪ್ಪನ್ನು ಅರಿತುಕೊಂಡು ತಂತಿಯನ್ನು ಮತ್ತೊಮ್ಮೆ ಓದಿ ತಮ್ಮನಿಗೆ ಅಸೌಖ್ಯವೆಂದೂ ಅಣ್ಣನವರು ತಂತಿ ಕೊಟ್ಟಿದ್ದಾರೆಂದೂ ಖಚಿತಪಡಿಸಿಕೊಂಡು ತಮ್ಮ ಮರೆವಿಗಾಗಿ ಕ್ಷಮೆ ಬೇಡಿದರು. ಗುರುಗಳು ನಗುತ್ತಾ ಹೇಳಿದರು.

"ನಾವು ಮರೆತರೂ ಮರೆಯಬಹುದು. ಆದರೆ ಇಂತಹ ವಿಷಯಗಳ ವಿವರವನ್ನು ನೀವು ಮರೆಯಬಾರದು ಅಲ್ಲವೆ?"

ತಂತಿಯನ್ನು ಸ್ವೀಕರಿಸಿದವರೂ ಓದಿಕೊಂಡವರೂ ಮಠದ ಅಧಿಕಾರಿ. ಗುರುಗಳು ತಂತಿಯನ್ನು ನೋಡಿರಲೂ ಇಲ್ಲ, ಓದಿರಲೂ ಇಲ್ಲ. ಆದರೂ ಸಹ ಅವರಿಗೆ ವಿಷಯ ಯಥಾವತ್ತಾಗಿ ತಿಳಿದಿತ್ತು. ಸರ್ವವ್ಯಾಪಿಯಾಗಿದ್ದ ಅವರ ಆತ್ಮ ಇಚ್ಛಿಸಿದಾಗ ಲೋಕವ್ಯವಹಾರವನ್ನು ಅರಿಯುವಂತಹುದಲ್ಲವೇ?

ಇಂತಹ ಅನೇಕ ಘಟನೆಗಳನ್ನು ಕೇಳಿದಾಗ ಮತ್ತು ಓದಿದಾಗ ಗುರುಗಳ ಪರಾಙ್ಮುಖತೆಯನ್ನು ಬುದ್ಧಿವಿಕಲ್ಪವೆನ್ನಲಾದೀತೇ? ನಮ್ಮ ಅಲ್ಪಮತಿಗೆ ಆ ಮಹಾನ್ ಆತ್ಮವನ್ನು ಅರಿಯಲಾಗದಿದ್ದರೆ ನಮಗೆ ತಿಳಿದಂತೆ ನಾವು ಅಳೆಯಲುಂಟೆ? ನಮ್ಮ ಹಿಡಿತಕ್ಕೆ ಸಿಲುಕುವಂತಹುದೆ ಅದು?

ಮತ್ತೊಂದು ಸಂದರ್ಭದಲ್ಲಿ ಮಳೆಗಾಲದ ಮಳೆಯ ಆರ್ಭಟ ಹೆಚ್ಚಾಗಿದ್ದಾಗ ಮಧ್ಯರಾತ್ರಿಯಲ್ಲಿ ಗುರುಗಳು ತಮ್ಮ ಪರಿಚಾರಕರನ್ನು ಕರೆದರು. "      .. ಬೀದಿಯಲ್ಲಿರುವ ಶ್ರೀಯುತರು ಜಾರಿ ಪ್ರಜ್ಞೆ ತಪ್ಪಿ ಬಿದ್ದಿದ್ದಾರೆ. ಕೂಡಲೇ ಹೋಗಿ ಅವರನ್ನು ಎಬ್ಬಿಸು" ಎಂದು ಅಣತಿಯಿತ್ತರು. ಪರಿಚಾರಕನು ಇದೆಲ್ಲಾ ಭ್ರಮೆ ಹುಚ್ಚು ಕಲ್ಪನೆ ಎಂದುಕೊಂಡು ಪಕ್ಕಕ್ಕೆ ಸರಿದು ಸುಮ್ಮನಾದನು. ಕೆಲವು ಕ್ಷಣಗಳ ನಂತರ ಗುರುಗಳ ಕೊಠಡಿಯಿಂದ ಪ್ರಶ್ನೆ ಕೇಳಿಬಂತು "ಹೋದೆಯಾ?"

ಗುರುಗಳು ಇದ್ದುದು ತುಂಗಾನದಿಯ ದಕ್ಷಿಣಕ್ಕಿದ್ದ ನೃಸಿಂಹವನದಲ್ಲಿ, ಶೃಂಗೇರಿಯ ಊರಿದ್ದುದು ತುಂಗಾನದಿಯ ಉತ್ತರದಲ್ಲಿ. ಅಲ್ಲಿಗಲ್ಲಿಗೆ ಮುಕ್ಕಾಲು ಮೈಲಿಗಿಂತಲೂ ದೂರ. ಮಧ್ಯರಾತ್ರಿ ಮಳೆ ಸುರಿಯುತ್ತಿದ್ದಾಗ ಪರಿಚಾರಕನು ಹೋಗಬೇಕಲ್ಲಾ, ಹೋಗದಿದ್ದರೆ ಗುರುಗಳಿಗೆ ಅಸಮಾಧಾನವಾಗುವುದಲ್ಲಾ ಎಂದು ಮನದಲ್ಲಿ ಗೊಣಗಿಕೊಂಡು ಊರಿಗೆ ಬಂದು ಆ ಗೃಹಸ್ಥರ ಮನೆಯ ಮುಂದೆ ನಿಂತನು. ಬಾಗಿಲು ಹಾಕಿತ್ತು. ಇಷ್ಟು ದೂರ ಬಂದು ಹಾಗೆಯೇ

ಹೋಗಬಾರದೆಂದೆಣಿಸಿ ಬಾಗಿಲು ತಟ್ಟಿದನು. ಆ ಗೃಹಸ್ಥರು ಬಾಗಿಲು ತೆರೆದು ಗುರುಗಳ ಪರಿಚಾರಕನು ತಮ್ಮ ಮನೆಗೆ ಬಂದಿರುವುದನ್ನು ಕಂಡು ಆಶ್ಚರ್ಯಚಕಿತರಾಗಿ ಆ ವೇಳೆಯಲ್ಲಿ ಬಂದುದೇಕೆಂದು ಕೇಳಿದರು. ಆತ ಗುರುಗಳು ತನ್ನನ್ನೆಬ್ಬಿಸಿ ಕಳುಹಿಸಿದುದನ್ನು ವಿವರವಾಗಿ ಹೇಳಿದನು.

ಅವರಿಗೆ ಆಶ್ಚರ್ಯವಾಯಿತು. ಅವರು ಹೇಳಿದರು "ಹೌದು, ಸ್ವಲ್ಪ ಸಮಯದ ಮೊದಲು ಜಲಶಂಕೆಗಾಗಿ ಹೊರಗೆ ಹೋಗಿದ್ದೆ. ಹತ್ತುವಾಗ ಮೆಟ್ಟಿಲು ಜಾರಿ ಬಿದ್ದೆ. ಕೆಲಕಾಲ ಪ್ರಜ್ಞೆ ತಪ್ಪಿದಂತಾಯಿತು. ನಂತರ ಎಚ್ಚರವಾಯಿತು. ಕೈಕಾಲು ತೊಳೆದುಕೊಂಡು ಒಳಗೆ ಬಂದೆ. ಗುರುದೇವರು ಇದನ್ನೆಂತು ಕಂಡರೋ ನನ್ನ ಅಲ್ಪಮತಿಗೆ ಗೋಚರವಾಗದು. ಅವರ ದಿವ್ಯಾನುಕಂಪಕ್ಕೆ ನಾನು ಚಿರಋಣಿ. ನಾನು ಸುಖವಾಗಿ ಎದ್ದು ಒಳಗೆ ಬಂದ ವಿಷಯವನ್ನು ಗುರುಗಳಲ್ಲಿ ಅರಿಕೆ ಮಾಡಿರಿ" ಎಂದು ತಿಳಿಸಿದರು. ಬಳಿಕ ತಮ್ಮಲ್ಲಿ ತಾವು "ನಾನು ಜಾರಿ ಬಿದ್ದುದನ್ನು ಕಂಡ ಅವರ ದಿವ್ಯದೃಷ್ಟಿಯು ನಾನು ಎದ್ದು ಒಳಗೆ ಹೋದುದನ್ನು ಕಂಡಿರಲಾರದೇ? ನಾನೆಂತಹ ಪೆದ್ದ" ಎಂದುಕೊಂಡು ಮನಸಾ ಶ್ರೀಗುರುಪಾದಕ್ಕೆ ನಮಸ್ಕಾರ ಮಾಡಿಕೊಂಡರು. ಶ್ರೀಚಂದ್ರಚೂಡರ ಲೀಲಾವಿಭೂತಿಯನ್ನರಿಯಲು ನಮಗಳವೇ? ಇಂತಹ ಘಟನೆಗಳು ಒಂದೇ, ಎರಡೇ, ನೂರಾರಿವೆ.

* * *



## ೨೩. ವೈದ್ಯರ ಸೋಜಿಗ

ಶ್ರೀಚಂದ್ರಚೂಡರ ಸಮಾಧಿಸ್ಥಿತಿಯನ್ನು ಒಬ್ಬೊಬ್ಬರು ಒಂದೊಂದು ವಿಧವಾಗಿ ತಿಳಿದಿದ್ದರು. ಬಹುಮಂದಿ ಬುದ್ಧಿವಿಕಲ್ಪವೆಂದೇ ತಿಳಿದುಕೊಂಡಿದ್ದರು. ಬಹುಮಂದಿ ಬುದ್ಧಿವಿಕಲ್ಪವೆಂದುಕೊಂಡಿದ್ದರೆ, ಹಲವು ಮಂದಿ ಮಠದ ಆಡಳಿತದಲ್ಲಿ ಬೇಸರ ಹೊಂದಿ ಗುರುಗಳು ಸದಾ ಅಂತರ್ಮುಖಿಗಳಾಗಿರುತ್ತಾರೆಂದುಕೊಂಡಿದ್ದರು. ಅಂತರ್ಮುಖಿಗಳಾಗಿದ್ದು ಸದಾ ಒಳಗಡೆಯೇ ಇದ್ದುಬಿಡುತ್ತಿದ್ದ ಗುರುಗಳು ಒಮ್ಮೊಮ್ಮೆ ಇದ್ದಕ್ಕಿದ್ದಂತೆ ಹೊರಗೆ ಬರುತ್ತಿದ್ದುದೂ ಉಂಟು. ಇಂತಹ ಸಂದರ್ಭಗಳಲ್ಲಿ ಅವರ ನಡೆನುಡಿ, ಮಾತುಕತೆಗಳಲ್ಲಿ ಯಾವ ವಿಧವಾದ ಸಂದೇಹವೂ ಸಂಶಯಗಳೂ ತೋರಿಬರುತ್ತಿರಲಿಲ್ಲ. ಕೆಲವೇ ಕ್ಷಣಗಳ ಮುನ್ನ ಅವರು ಮತಿಭ್ರಂಶರಂತೆ ಇದ್ದರೆಂದು ಯಾರಿಗೂ ಭಾಸವಾಗುತ್ತಿರಲಿಲ್ಲ. ದರ್ಶನಕ್ಕಾಗಿ ಹಲವಾರು ದಿನಗಳು ಕಾದು ಕಾದು ಹಿಂದೆ ಹೋದವರೂ ಉಂಟು, ಅಕಸ್ಮಾತ್ತಾಗಿ ಈ ರೀತಿ ದರ್ಶನ ಪಡೆದುಕೊಂಡವರೂ ಉಂಟು.

ಗುರುಗಳ ಆರೋಗ್ಯ ವಿಷಯದಲ್ಲೂ ಅಂತರ್ಮುಖತೆಯ ವಿಷಯದಲ್ಲೂ ಚಿಂತೆಗೊಳಗಾಗಿದ್ದವರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರೂ ಒಬ್ಬರು. ಈ ವಿಷಯವಾಗಿ ಬಹಳ ಯೋಚಿಸಿದ ಅವರು ಗುರುಗಳ ಮಾನಸಿಕ ಆರೋಗ್ಯವನ್ನು ಪರೀಕ್ಷಿಸಿ ವರದಿ ಮಾಡಲು ಮತ್ತು ಅವರ ಆರೋಗ್ಯವರ್ಧನೆಗೆ ಸೂಕ್ತ ಸಲಹೆ ನೀಡಲು ಸುಪ್ರಸಿದ್ಧ ಮನೋವೈದ್ಯರಾಗಿದ್ದ ಡಾ। ಗೋವಿಂದಸ್ವಾಮಿಯವರನ್ನು ನಿಯೋಜಿಸಿದರು.

ಯಾವ ಸದ್ದುಗದ್ದಲವೂ ಇಲ್ಲದೇ ಗೋವಿಂದಸ್ವಾಮಿ ಶೃಂಗೇರಿಗೆ ಬಂದರು. ಅವರು ಅಲ್ಲಿಗೆ ಬಂದಾಗ ಗುರುಗಳು ಅಂತರ್ಮುಖರಾಗಿಯೇ ಇದ್ದರು. ತಾವು ಪರೀಕ್ಷಿಸುವ ಮುನ್ನ ಗುರುಗಳಿದ್ದ ಸ್ಥಳವನ್ನು ಮತ್ತು ಸಾಧ್ಯವಾದರೆ ಗುರುಗಳನ್ನು ದೂರದಿಂದ ಒಮ್ಮೆ ಕಾಣಬೇಕೆಂಬ ಅಭಿಪ್ರಾಯದಿಂದ ಗೋವಿಂದಸ್ವಾಮಿಯವರು ನರಸಿಂಹವನಕ್ಕೆ ಬಂದರು. ಗೋವಿಂದಸ್ವಾಮಿ ನೃಸಿಂಹವನದಲ್ಲಿ ಅಡ್ಡಾಡುತ್ತಿರುವಾಗ ಇದ್ದಕ್ಕಿದಂತೆ ಗುರುಗಳೇ ಹೊರಗೆ ಬಂದರು. ಕೆಲಕ್ಷಣಗಳ ಮೊದಲು ಮತಿಭ್ರಾಂತರಂತೆ ಕಂಡುಬರುತ್ತಿದ್ದ ಗುರುಗಳು ಕೇವಲ ಕೆಲವೇ ನಿಮಿಷಗಳಲ್ಲಿ ಯಥಾಸ್ಥಿತಿಗೆ ಬಂದುದನ್ನು ಕಂಡು ಅಲ್ಲಿದ್ದವರೆಲ್ಲಾ ವಿಸ್ಮಿತರಾದರು. ಯಾಂತ್ರಿಕವಾಗಿ ಕೈಮುಗಿದ

ಗೋವಿಂದಸ್ವಾಮಿಯವರನ್ನು ಇತರರು ಪರಿಚಯ ಮಾಡಿಕೊಡುವ ಮೊದಲೇ ಗುರುಗಳು ಹಸನ್ಮುಖರಾಗಿ "ತಾವೇ ತಾನೇ ನನ್ನನ್ನು ಪರೀಕ್ಷಿಸಲು ಬಂದವರು?" ಎಂದು ಕೇಳಿದರು. ಈ ಪ್ರಶ್ನೆಯನ್ನು ಕೇಳಿದ ಕೂಡಲೇ ಗೋವಿಂದಸ್ವಾಮಿಯವರೂ, ಮಠದ ಅಧಿಕಾರಿಗಳೂ ತಬ್ಬಿಬ್ಬಾದರು. ಗೋವಿಂದಸ್ವಾಮಿಯವರು ಗುರುದೇವರ ಮಾನಸಿಕ ಸ್ಥಿತಿಯನ್ನು ಪರೀಕ್ಷಿಸಲು ಶೃಂಗೇರಿಗೆ ಬರುವ ವಿಷಯ ಕೇವಲ ಕೆಲವರಿಗೆ ಮಾತ್ರ ತಿಳಿದಿತ್ತು. ಈ ವಿಷಯವನ್ನು ಗುರುಗಳಿಗೆ ಯಾರೂ ತಿಳಿಸಿರಲಿಲ್ಲ. ಗಂಭೀರ ಮುಖಮುದ್ರೆಯುಳ್ಳ ಆ ತೇಜೋಮೂರ್ತಿಯನ್ನು ದರ್ಶಿಸಿ ವಿಸ್ಮಿತರಾಗಿದ್ದ ಗೋವಿಂದಸ್ವಾಮಿ ಈ ಪ್ರಶ್ನೆಯನ್ನು ಕೇಳಿದ ನಂತರ ಸ್ತಂಭೀಭೂತರಾದರು.

ಗುರುಗಳು ಹಸನ್ಮುಖರಾಗಿ ಗೋವಿಂದಸ್ವಾಮಿಯವರೊಡನೆ ಸಂಭಾಷಣೆ ನಡೆಸಿದರು. ಆ ಸಮಯದಲ್ಲಾಗಲೀ, ಆ ಬಳಿಕವೂ ಕೆಲದಿನಗಳು ಶೃಂಗೇರಿಯಲ್ಲಿಯೇ ಇದ್ದು ನಿತ್ಯವೂ ಗುರುದರ್ಶನ ಪಡೆಯುವಾಗಲೀ ಗೋವಿಂದಸ್ವಾಮಿಗಳಿಗೆ ಗುರುವರ್ಯರ ನಡವಳಿಕೆಯಲ್ಲಿ ವ್ಯತ್ಯಾಸ, ಮಾತುಕತೆಗಳಲ್ಲಿ ವೈಪರೀತ್ಯ ಇವಾವುದೂ ಕಾಣಲಿಲ್ಲ. ಬುದ್ಧಿಭ್ರಮಣೆ ಎಂಬ ಅನೇಕರ ಸಂದೇಹಕ್ಕೆ ಯಾವ ಪುಷ್ಟಿಯೂ ದೊರಕಲಿಲ್ಲ.

ಅದುವರೆಗೆ ಧಾರ್ಮಿಕ ವಿಷಯಗಳಲ್ಲಿಯೂ, ಆಧ್ಯಾತ್ಮಿಕ ತತ್ತ್ವಗಳಲ್ಲಿಯೂ ಶ್ರದ್ಧೆ ನಂಬಿಕೆಗಳನ್ನು ಗಳಿಸದಿದ್ದ ಗೋವಿಂದಸ್ವಾಮಿಗಳು ಗುರುಗಳಿಂದ ಪ್ರಭಾವಿತರಾಗಿ ಅವರ ಸನ್ನಿಧಿಯಲ್ಲೇ ಹೊಸಬೆಳಕನ್ನು ಕಂಡರು. ಆ ಮೊದಲು ಸಂಸ್ಕೃತವನ್ನು ಕಲಿತಿರದಿದ್ದ ಗೋವಿಂದಸ್ವಾಮಿಯವರು ಗುರುಗಳ ಉಪದೇಶದಂತೆ ಸಂಸ್ಕೃತವನ್ನು ಕಲಿತು, ಗೀತೆ, ಉಪನಿಷತ್ತುಗಳನ್ನು ಸಂಸ್ಕೃತಮೂಲದಲ್ಲಿಯೇ ಓದಿ ತಿಳಿಯುವಷ್ಟು ಜ್ಞಾನ ಸಂಪಾದಿಸಿದರು. ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರ ಉಪದೇಶಗಳಲ್ಲಿ ಹೊಸಬೆಳಕನ್ನು ಕಂಡ ಅವರು ತಮ್ಮ ವೈಜ್ಞಾನಿಕ ಮನೋವೃತ್ತಿಗೆ ಕೊರತೆಯಾಗಿದ್ದ ಆಧ್ಯಾತ್ಮಿಕ ಶ್ರದ್ಧೆ ನಂಬಿಕೆಗಳನ್ನು ಗಳಿಸಿಕೊಂಡರು. ಗುರುಗಳಿಂದ ಆಶೀರ್ವಾದ ಅನುಗ್ರಹಗಳನ್ನು ಪಡೆದು ಹಿಂದಿರುಗಿದ ಅವರು ಕೂಲಂಕಷವಾಗಿ ತಮ್ಮ ವರದಿಯನ್ನು ತಯಾರಿಸಿ ಮಹಾರಾಜರಿಗೆ ಒಪ್ಪಿಸಿದರು. ವರದಿಯಲ್ಲಿ ಅವರು "ಗುರುವರ್ಯರಲ್ಲಿ ಬುದ್ಧಿಭ್ರಮಣೆ ಎಂದು ಹೇಳಬಹುದಾದ ಯಾವ ಚಿಹ್ನೆಯೂ ಇಲ್ಲವೆಂದೂ, ಗುರುವರ್ಯರ ಮನಃಸ್ಥಿತಿಯು ವೈಜ್ಞಾನಿಕ ಸಾಧನಗಳ ಅಳತೆಗೆ ನಿಲುಕದೆಂದೂ" ವಿನಂತಿ ಮಾಡಿದ್ದರು.

ಗುರುಗಳ ದೈಹಿಕ ಮತ್ತು ಮಾನಸಿಕ ಆರೋಗ್ಯವನ್ನು ಪರೀಕ್ಷಿಸಲೆಂದೇ



ಬಂದಿದ್ದ ಮತ್ತೊಬ್ಬ ವೈದ್ಯರು ಸುಮಾರು ಹದಿನೈದು ದಿನಗಳ ಕಾಲ ಶೃಂಗೇರಿಯಲ್ಲಿಯೇ ಇದ್ದರು. ಪ್ರತಿದಿನವೂ ಗುರುಗಳ ದರ್ಶನವನ್ನು ಪಡೆಯುತ್ತಿದ್ದ ಅವರು, ಶ್ರೀಗಳವರನ್ನು ಪರೀಕ್ಷಿಸಲು ಇನ್ನೂ ಸಾಧ್ಯವಾಗಿಲ್ಲವೆಂದೂ, ಅವರ ಆರೋಗ್ಯದಲ್ಲಿ ಯಾವ ವ್ಯತ್ಯಾಸವೂ ಕಾಣುತ್ತಿಲ್ಲವೆಂದೂ ತಮ್ಮನ್ನು ತಪಾಸಣೆಗೆಂದು ಕಳುಹಿಸಿದ್ದ ಮಿತ್ರವೃಂದದವರಿಗೆ ನಿತ್ಯವೂ ವರದಿಯನ್ನು ಕಳುಹಿಸುತ್ತಿದ್ದರು.

ಅನೇಕ ದಿನಗಳು ಕಳೆದರೂ ಅವರಿಗೆ ಗುರುಗಳನ್ನು ಪರೀಕ್ಷಿಸುವ ಅವಕಾಶವೇ ದೊರೆಯಲಿಲ್ಲ. ವೃತ್ತಿಯಲ್ಲಿ ವೈದ್ಯರಾದವರು ಎಷ್ಟು ದಿನಗಳ ಕಾಲ ತಮ್ಮ ವೃತ್ತಿಯನ್ನು ಬಿಟ್ಟಿರಲು ಸಾಧ್ಯ? ಊರಿಗೆ ಹಿಂದಿರುಗುವ ಸಂಕಲ್ಪಮಾಡಿ, ಗುರುಗಳಲ್ಲಿ ನಿವೇದಿಸಿದರು "ಅಪ್ಪಣೆಯಾದರೆ ನಾನು ನಾಳೆ ಪ್ರಯಾಣ ಮಾಡುತ್ತೇನೆ"

ಶ್ರೀಗಳವರು ಮಂದಹಾಸದಿಂದ "ಏಕೆ, ತಾವು ಬಂದ ಕೆಲಸವಾಯಿತೇ?" ಎಂದು ಕೇಳಿದರು.

ವೈದ್ಯರು ಏನೆಂದು ಉತ್ತರ ಕೊಟ್ಟಾರು? ಆಯಿತೆಂದರೆ ಸುಳ್ಳು ಹೇಳಿದಂತಾಗುತ್ತದೆ. ಆಗಲಿಲ್ಲವೆಂದರೆ ಕೆಲಸವಾಗದೇ ಏಕೆ ಹೊರಡುತ್ತೀರೆಂದು ಗುರುಗಳು ಕೇಳಬಹುದು. ಕೆಲಕಾಲ ಆಲೋಚಿಸಿದ ವೈದ್ಯರು "ಊರಿನಲ್ಲಿ ತುಂಬಾ ಕೆಲಸ ನಿಂತುಹೋಗಿದೆ. ಅದಕ್ಕಾಗಿ ಪ್ರಯಾಣ ಮಾಡಬೇಕಾಗಿದೆ. ಮಹಾಸನ್ನಿಧಾನವು ಆಶೀರ್ವದಿಸಿ ಕಳಿಸಿಕೊಡಬೇಕು" ಎಂದು ನಮ್ರರಾಗಿ ನುಡಿದರು.

ಶ್ರೀಗಳವರು ವೈದ್ಯರಿಗೆ ಪ್ರಯಾಣ ಮಾಡಲು ಅನುಮತಿಯಿತ್ತು ಫಲಮಂತ್ರಾಕ್ಷತೆಯನ್ನು ಅನುಗ್ರಹಿಸಿದರು. ವೈದ್ಯರು ಸಾಷ್ಟಾಂಗವೆರಗಿ ಇನ್ನೇನು ಹೊರಡಬೇಕೆನ್ನುವಷ್ಟರಲ್ಲಿ "ತಮ್ಮ ತಾಯಿಯವರು ಆರೋಗ್ಯವಾಗಿದ್ದಾರೆಯೇ?" ಎಂದು ಗುರುಗಳು ಪ್ರಶ್ನಿಸಿದರು. ಆ ಪ್ರಶ್ನೆಯನ್ನು ಕೇಳಿದ ವೈದ್ಯರು ಅವಾಕ್ಕಾದರು.

ಬಹಳ ದಿನಗಳ ಹಿಂದೆ ವೈದ್ಯರ ತಾಯಿಗೆ ಹೊಟ್ಟೆನೋವು ಬಂದು ಆಕೆ ಬಹಳ ನರಳಿದ್ದರು. ಅನೇಕ ವೈದ್ಯರುಗಳು ಪರೀಕ್ಷಿಸಿ ಅತ್ಯಮೂಲ್ಯವಾದ ಔಷಧಿಗಳನ್ನು ಕೊಟ್ಟಿದ್ದರೂ ಆಕೆಯ ಹೊಟ್ಟೆನೋವು ಗುಣವಾಗಿರಲಿಲ್ಲ. ಆಗ ಆ ತಾಯಿ ತನ್ನ ಮಗನನ್ನು [ಈ ವೈದ್ಯರನ್ನು] ಕರೆದು ಶ್ರೀಚಂದ್ರಶೇಖರ ಭಾರತೀ ಸ್ವಾಮಿಗಳವರಲ್ಲಿ ತನ್ನ ರೋಗದ ವಿಷಯವಾಗಿ ಅರಿಕೆ ಮಾಡಿಕೊಂಡು ಅವರಿಂದ ಪ್ರಸಾದವನ್ನು ತರುವಂತೆ ಕಳುಹಿಸಿದ್ದರು. ಅದರಂತೆಯೇ ವೈದ್ಯರು ಶ್ರೀಗಳವರಿಂದ ಅನುಗ್ರಹಪೂರ್ವಕವಾದ ಭಸ್ಮವನ್ನು ಪಡೆದುಕೊಂಡು ತಮ್ಮ

ತಾಯಿಗೆ ನೀಡಿದ್ದರು. ಭಕ್ತಿ ಶ್ರದ್ಧೆಯಿಂದ ಅದನ್ನು ಸೇವಿಸಿದ ಆ ತಾಯಿ ಉದರವೇದನೆಯಿಂದ ಮುಕ್ತರಾಗಿ ಆರೋಗ್ಯದಿಂದಿದ್ದರು.

ಶ್ರೀಗಳವರು ತಮ್ಮ ತಾಯಿಯ ಆರೋಗ್ಯವನ್ನು ಕೇಳಿದೊಡನೆಯೇ ವೈದ್ಯರಿಗೆ ಮಿಂಚು ಹೊಳೆದಂತಾಯಿತು. ತನ್ನ ತಾಯಿಯ ಹೊಟ್ಟೆನೋವಿಗೆ ಔಷಧಿ ಕೊಡಲಾರದ ತಾನು ಶ್ರೀಗಳವರ ಆರೋಗ್ಯವನ್ನು ಪರೀಕ್ಷಿಸಲು ಮತ್ತು ಗುಣಪಡಿಸಲು ಬಂದುದು ಎಂತಹ ಮೂರ್ಖತನವೆಂದು ಅವರು ಅರಿತರು. ಶ್ರೀಗಳವರ ಸೂಕ್ಷ್ಮಬುದ್ಧಿಯೂ, ಉಜ್ವಲವಾದ ತಪಶ್ಶಕ್ತಿಯೂ ಅವರಿಗೆ ಅರ್ಥವಾಯಿತು. ಇಂತಹ ಮಹಾನುಭಾವರನ್ನು ಹುಚ್ಚನಿರಬಹುದೇ ಎಂದು ಶಂಕಿಸಿದೆನಲ್ಲಾ ಎಂದು ಪಶ್ಚಾತ್ತಾಪಪಟ್ಟ ವೈದ್ಯರು ಗುರುಗಳಿಗೆ ಮತ್ತೊಮ್ಮೆ ಪ್ರಣಾಮ ಮಾಡಿ ಅವರನ್ನೇ ಸ್ಮರಿಸುತ್ತಾ ತಮ್ಮ ಊರಿಗೆ ಪ್ರಯಾಣ ಬೆಳೆಸಿದರು.

ಗುರುವರ್ಯರ ಅಸ್ವಾಭಾವಿಕ ನಡೆನುಡಿಗಳನ್ನು ಕುರಿತು ಕೌತುಕಕ್ಕೊಳಗಾಗಿದ್ದ ಮಹನೀಯರೊಬ್ಬರು, ಗುರುಗಳು ಬಹಿರ್ಮುಖರಾಗಿ ತಮ್ಮ ನಿತ್ಯ ನೈಮಿತ್ತಿಕ ಕಾರ್ಯಗಳಲ್ಲಿ ತೊಡಗಿದ್ದು ಭೇಟಿ ಸಂದರ್ಶನಗಳನ್ನು ದಯಪಾಲಿಸುತ್ತಿದ್ದಾಗ, ಅವರ ಸನ್ನಿಧಿಗೆ ಬಂದರು. ಗುರುಗಳಿಗೆ ನಮಸ್ಕರಿಸಿ ಅವರ ಅಪ್ಪಣೆಯಂತೆ ಕುಳಿತರು. ಅವರ ಮನಸ್ಸಿನಲ್ಲಿ ಗುರುಗಳ ವಿಪರೀತ ಸ್ವಭಾವವು ಎಲ್ಲರೂ ಹೇಳುವಂತೆ ಬುದ್ಧಿಭ್ರಮಣೆಯಿಂದಾದುದೇ ಅಥವಾ ಬೇರಾವ ಕಾರಣವೇನಾದರೂ ಇರಬಹುದೇ ಎಂಬ ಶಂಕೆಯಿತ್ತು. ಅವರು ಕುಳಿತೊಡನೆಯೇ ಗುರುಗಳು ಅವರನ್ನು ಪ್ರಶ್ನಿಸಿದರು.

"ಒಂದು ಕೊಠಡಿಯಲ್ಲಿ ಹತ್ತು ಜನ ಇದ್ದಾರೆಂದು ಭಾವಿಸೋಣ. ಅವರಲ್ಲೊಬ್ಬನಿಗೆ ಮಾತ್ರ ಇತರರಾರಿಗೂ ಕಾಣದಂತಹ ದಿವ್ಯದೃಶ್ಯವೊಂದು ಕಾಣುತ್ತದೆ. ಅಂತಹವನನ್ನು ತಾನೇ ನೀವು ಹುಚ್ಚನೆಂದು ಕರೆಯುವುದು?"

ಗುರುಗಳ ಪ್ರಶ್ನೆಯಿಂದ ಅವಾಕ್ಕಾದ ಆ ಮಹನೀಯರು ಸ್ವಲ್ಪಕಾಲ ಸಾವರಿಸಿಕೊಂಡು ವಿನಯವಾಗಿ ಕೇಳಿದರು.

"ಯಾರೂ ಕಾಣದ ದೃಶ್ಯವನ್ನು ಆತನು ಹೇಗೆ ಕಾಣಲು ಸಾಧ್ಯ?"

"ಅವನು ಆ ದೃಶ್ಯವನ್ನು ಕಾಣುತ್ತಾನೆಂದು ಭಾವಿಸಿ ನನ್ನ ಪ್ರಶ್ನೆಗೆ ಉತ್ತರ ಕೊಡಿ" ಎಂದರು ಗುರುಗಳು.

"ಹಾಗೆ ಕಾಣುತ್ತೇನೆಂದುಕೊಂಡವನು ನಿಜವಾಗಿಯೂ ಹುಚ್ಚನೇ ಆಗಿರಬೇಕು. ಇಲ್ಲದಿದ್ದರೆ ಹೇಗೆ ತಾನೆ ಇಲ್ಲದ ದೃಶ್ಯವನ್ನು ಕಾಣಲು ಸಾಧ್ಯ? ಆ ದೃಶ್ಯ ಅವನ ಕಲ್ಪನೆಯಲ್ಲಿ ಮಾತ್ರ ಅಸ್ತಿತ್ವದಲ್ಲಿರಬೇಕು.ಅದು ಮನಸ್ಸಿನ ತೋರಿಕೆ ಮಾತ್ರ."



"ಇತರರು ಕಾಣದುದನ್ನು ಅವನು ಕಾಣುವುದರಿಂದ ಮಾತ್ರ ಹುಚ್ಚನೆಂದು ಭಾವಿಸಲ್ಪಡುತ್ತಾನೆ. ಅಲ್ಲವೇ?"

"ಅಷ್ಟೇ ಅಲ್ಲ. ಯಾವುದು ಅಸ್ತಿತ್ವದಲ್ಲಿಲ್ಲವೋ ಅದಿರುವುದೆಂದು ಭಾವಿಸಿ ಕಾಣುತ್ತಿರುವುದರಿಂದ ಅವನು ಹುಚ್ಚನೆಂದು ಕರೆಯಲ್ಪಡುತ್ತಾನೆ."

"ಎಂದರೆ ಇತರ ಒಂಭತ್ತು ಜನರ ದೃಷ್ಟಿಯಲ್ಲಿ ಅಸ್ತಿತ್ವದಲ್ಲಿರದ, ಇಲ್ಲವೆಂದು ಅವರಿಗೆ ತೋರುವ ದೃಶ್ಯವನ್ನು ಆತ ಕಾಣುತ್ತಾನೆಂದು ಅಲ್ಲವೇ ನಿಮ್ಮ ಅಭಿಪ್ರಾಯ?"

"ಹಾಗಲ್ಲ, ನಿಜವಾಗಿಯೂ ಅಸ್ತಿತ್ವದಲ್ಲಿ ಇಲ್ಲದಿರುವುದು ಎಂದು ನನ್ನ ಅಭಿಪ್ರಾಯ."

"ಆದರೆ ಆತನ ದೃಷ್ಟಿಯಲ್ಲಿ ಅದು ಇದ್ದೇ ಇರುತ್ತದಲ್ಲ."

"ಅದು ಅವನ ಭ್ರಮೆಯಿಂದ ಬಂದ ಕಲ್ಪನೆ."

"ಅವನ ಇತರ ಮಿತ್ರರು ತಮ್ಮ ಅನುಭವದಿಂದ ಕಾಣಲಾಗದ್ದನ್ನು ಅವನು ಕಂಡದ್ದರಿಂದ ತಾನೇ ಅವನನ್ನು ನೀವು ಹುಚ್ಚನೆನ್ನುವುದು?"

"ಹೌದು."

"ಹಾಗಾದರೆ ಆತನ ಹುಚ್ಚೋ, ಬುದ್ಧಿವಿಕಲ್ಪವೋ ಅವನ ಸ್ವಾನುಭವದಿಂದ ನಿರ್ಧರಿಸಲ್ಪಡದೇ ಆ ಅನುಭವವಿಲ್ಲದ ಇತರ ಜನಗಳ ಅಭಿಪ್ರಾಯದಿಂದ ನಿಷ್ಕರ್ಷಿಸಲ್ಪಡುತ್ತದೆಯೇ?"

"ಹೌದು, ಹಾಗೆಯೇ ಹೇಳಬಹುದು"

"ಬಹುಜನಾಭಿಪ್ರಾಯದಿಂದ ಆತನು ಕಾಣುತ್ತಿರುವ ದೃಶ್ಯವು ಇಲ್ಲವೇ ಇಲ್ಲವೆಂದು ತೀರ್ಮಾನಿಸಲ್ಪಟ್ಟಿದೆಯೆಂದು ಇಟ್ಟುಕೊಳ್ಳೋಣ. ಆ ನಿರ್ಧಾರದಿಂದ ಆತನು ಆ ದೃಶ್ಯದಲ್ಲಿ ತಲ್ಲೀನನಾಗುವುದನ್ನು ತಪ್ಪಿಸಲಾದೀತೇ?"

"ಹೇಗೆ? ಅವನು ಆ ದೃಶ್ಯವನ್ನು ನೋಡುವುದರಲ್ಲಿ ಮೊದಲಿನಂತೆಯೇ ಮಗ್ನನಾಗಿರುತ್ತಾನೆ"

"ಹಾಗಾದರೆ ಬಹುಜನಾಭಿಪ್ರಾಯಕ್ಕೆ ಬೆಲೆಯೇನು? ಅದು ಆತನ ಅನುಭವವನ್ನು ಹೊಂದಿಕೊಂಡೂ ಇಲ್ಲ. ಅಥವಾ ಆತನನ್ನು ಆ ಅನುಭವದಿಂದ ಬೇರ್ಪಡಿಸುವುದೂ ಇಲ್ಲ. ಆದ್ದರಿಂದ ಹುಚ್ಚೆನ್ನುವುದು ಊಹೆ ಅಥವಾ ಕಲ್ಪನೆ ಮಾತ್ರವಲ್ಲವೇ? ಆ ವಿಷಯಾನುಭವವಿಲ್ಲದವರ–ಹುಚ್ಚನೆಂದು ಕರೆಯಲ್ಪಡುವಾತನ ಅನುಭವವಿಲ್ಲದವರ– ಒಮ್ಮುಖದ ಭಾವನೆಯಲ್ಲವೇ?"

ತನ್ನ ಪ್ರಶ್ನೆಗೆ ತಾನು ಕೇಳದೆಯೇ ಉತ್ತರ ತನ್ನಿಂದಲೇ ದೊರಕಿತ್ತು. ಪ್ರಶ್ನೆಯಿಂದಲೇ ಉತ್ತರ ಹೊರಡಿಸುವ ಗುರುವರ್ಯರ ಕೌಶಲ್ಯವೂ, ವಿಷಯವನ್ನು ಬುದ್ಧಿಗೆ ಸ್ಪಷ್ಟವಾಗಿಸುವ ಗುರುದೇವರ ತರ್ಕಸರಣಿಯೂ ಅರಿವಾಯಿತು ಆ ಮಹನೀಯರಿಗೆ. ಬುದ್ಧಿವಿಕಲ್ಪವಾಗಿರುವವರ ಮಾತುಕತೆ ವಿಚಾರಸರಣಿ ಹೀಗೆ ತರ್ಕಬದ್ಧವಾಗಿರಲು ಜಾಡ್ಯೆಯಿಂದ ಕೂಡಿರಲು ಸಾಧ್ಯವೇ?

ಶ್ರೀಹಸ್ತಾಮಲಕರು ಲೋಕದ ದೃಷ್ಟಿಗೆ ಮೂಢರಂತೆಯೂ, ಜಡರಂತೆಯೂ ಇದ್ದರು. ಶ್ರೀಶಂಕರ ಭಗವತ್ಪಾದರು ಅವರನ್ನು ಕಂಡು 'ನೀನಾರು?' ಎಂದು ಕೇಳಿದಾಗ ಅವರಲ್ಲಡಗಿದ್ದ ಬ್ರಹ್ಮಜ್ಞಾನವು ಲೋಕವಿದಿತವಾಯಿತು. ಅವರು ಶಂಕರರ ಶಿಷ್ಯರಾದ ನಂತರವೂ ಸತೀರ್ಥ್ಯರಿಗೆ ಅವರಲ್ಲಿ ವಿಶ್ವಾಸ ಮೂಡಿರಲಿಲ್ಲ. ಅದನ್ನರಿತ ಪೂಜ್ಯಪಾದರು "ಹಸ್ತಾಮಲಕರು ಬ್ರಹ್ಮಸೂತ್ರ ಭಾಷ್ಯಕ್ಕೆ ವಾರ್ತಿಕ [ವಿಶಾಲವಾದ ವಿವರಣೆ] ಗಳನ್ನು ರಚಿಸಿದಲ್ಲಿ ಅವು ಅತ್ಯಂತ ಶ್ರೇಷ್ಠತಮವಾಗಿರುತ್ತವೆ. ಆದರೆ ಸದಾ ಆತ್ಮಧ್ಯಾನನಿರತರಾಗಿರತಕ್ಕ ಅವರನ್ನು ಆ ಔನ್ನತ್ಯದಿಂದ ಗ್ರಂಥಕರ್ತೃವಿನ ಮಟ್ಟಕ್ಕೆಳೆದು ತರುವುದೇ ಅಸಾಧ್ಯ"ಎಂದು ನುಡಿದಿದ್ದರು.

ಶ್ರೀ ಸದಾಶಿವ ಬ್ರಹ್ಮೇಂದ್ರರು ಕಾವೇರಿಯ ತೀರದಲ್ಲಿ ಹುಚ್ಚರಂತೆಯೇ ಅಲೆದಾಡುತ್ತಿದ್ದರು. ಮೈಮೇಲೆ ವಸ್ತ್ರವಿದ್ದರೆ ಇತ್ತು, ಇಲ್ಲದಿದ್ದರೆ ಇಲ್ಲ. ಸ್ನಾನ ಮಾಡಿದರೆ ಮಾಡಿದರು, ಇಲ್ಲದಿದ್ದರೆ ಇಲ್ಲ. ಹೊರಜಗತ್ತಿಗೂ ಅವರಿಗೂ ಯಾವ ಸಂಬಂಧವೂ ಇಲ್ಲದಂತೆ ನಿರ್ಲಿಪ್ತರಾಗಿರುತ್ತಿದ್ದರು. ಅವರ ಆ ಅವಸ್ಥೆಯನ್ನು ಕಂಡ ಕೆಲವರು ಅವರ ಗುರುಗಳಾಗಿದ್ದ ಶ್ರೀಪರಮಶಿವೇಂದ್ರ ಸರಸ್ವತಿಯವರಲ್ಲಿಗೆ ಹೋಗಿ "ಸದಾಶಿವರಿಗೆ ಹುಚ್ಚು ಹಿಡಿದಿದೆ. ವಿಚಿತ್ರ ಅವಸ್ಥೆಯಲ್ಲಿ ಮೈಮೇಲಿನ ಪ್ರಜ್ಞೆಯಿಲ್ಲದಂತೆ ಅಲೆದಾಡುತ್ತಿದ್ದಾರೆ" ಎಂದು ಹೇಳಲು ಆ ಗುರುಗಳು ಬಾಷ್ಪಲೋಚನರಾಗಿ ಕಂಪಿಸುವ ದನಿಯಲ್ಲಿ " ಆಹಾ, ಆ ಪುಣ್ಯ ನನಗಿಲ್ಲವಲ್ಲ. ಆ ಹುಚ್ಚು ನನಗೆ ಹಿಡಿಯಲಿಲ್ಲವಲ್ಲ" ಎಂದು ವ್ಯಥೆ ಪಟ್ಟರಂತೆ!

ಶ್ರೀರಾಮಕೃಷ್ಣ ಪರಮಹಂಸರು ಪುನಃ ಪುನಃ ನಿರ್ವಿಕಲ್ಪ ಸಮಾಧಿ ಹೊಂದುತ್ತಿದ್ದರು. ಅವರಿಗೆ ಅನೇಕ ಸಂದರ್ಭಗಳಲ್ಲಿ ಎಲ್ಲರಲ್ಲಿಯೂ, ಎಲ್ಲೆಲ್ಲಿಯೂ ಏಕಮಾತ್ರ ದೇವನು ಕಂಡು ಪೂಜೆಗೆ ಕುಳಿತಾಗ ತಮ್ಮನ್ನೇ ತಾವು ಹೂಗಳಿಂದ ಪೂಜಿಸಿಕೊಳ್ಳುತ್ತಿದ್ದರು. ಭಕ್ತ ಮಹನೀಯರ, ಸಂತರ, ಯೋಗಿಶ್ರೇಷ್ಠರ ಜೀವನಾನುಭವಗಳು ಸಾಧಾರಣರ ಜೀವನಾನುಭವಕ್ಕಿಂತ



ಬೇರೆಯಾಗಿರುತ್ತದೆ. ಉನ್ನತಮಟ್ಟದಲ್ಲಿರುತ್ತದೆ. ಅವಧೂತರಾಗಿದ್ದವರ ಸ್ಥಿತಿ ಲೋಕಕ್ಕೆ ವಿಪರೀತವಾಗಿಯೇ ಕಾಣುತ್ತದೆ. ಅವರನ್ನು ಅರಿಯಲಾಗದ ಜನ ಹುಚ್ಚು ಎಂದು ಭಾವಿಸಿಕೊಂಡು ಸುಮ್ಮನಾಗುತ್ತಾರೆ. ತಂತಮ್ಮ ಮಟ್ಟದಿಂದ ಅಳೆಯಲು ಯತ್ನಿಸಿ ವಿಫಲರಾಗುತ್ತಾರೆ.

* * *

# ೨೪. ಜ್ಞಾನಸ್ವರೂಪೀ ಗುರು

ಪರಬ್ರಹ್ಮನ ಸಾಕಾರರೂಪವೆಂದು ಭಾವಿಸಲ್ಪಡುವ ಶ್ರೀದಕ್ಷಿಣಾಮೂರ್ತಿಯು ಆನಂದ ಮತ್ತು ಜ್ಞಾನದ ಪ್ರತೀಕ. ಮೇಧಾ ಮತ್ತು ಪ್ರಜ್ಞೆಗಳನ್ನು ಕರುಣಿಸುವ ಈ ಯುವಗುರುವು ಸಂಸಾರವನ್ನು ಪ್ರತಿನಿಧಿಸುವ ವಟವೃಕ್ಷದಡಿಯಲ್ಲಿ ಕುಳಿತು ನಡೆಸುವ ಮೌನವ್ಯಾಖ್ಯಾನದಿಂದ ವೃದ್ಧರಾದ ಶಿಷ್ಯರಿಗೆ ಸಂದೇಹ, ಸಂಶಯಗಳು ದೂರವಾಗುತ್ತವೆ ಎಂದು ಶ್ರೀಶಂಕರ ಭಗವತ್ಪಾದರು ತಮ್ಮ ದಕ್ಷಿಣಾಮೂರ್ತಿ ಸ್ತೋತ್ರದಲ್ಲಿ ಸ್ತುತಿಸಿದ್ದಾರೆ.[೧೧]

ಶ್ರೀಮೇಧಾ ದಕ್ಷಿಣಾಮೂರ್ತಿ ಸ್ವರೂಪರಾದ ಶ್ರೀಚಂದ್ರಶೇಖರ ಭಾರತಿಯವರ ದರ್ಶನಮಾತ್ರದಿಂದಲೇ ಅನೇಕರಿಗೆ ತಮ್ಮ ಸಂಶಯಗಳೆಲ್ಲಾ ನಿವಾರಣೆಯಾಗುತ್ತಿದ್ದವು. ಅಂತರ್ಮುಖಿಗಳಾಗಿದ್ದ ಗುರುಗಳು ದರ್ಶನ ಕೊಡುವುದನ್ನೇ ಕಾಯುತ್ತಿದ್ದ ಶಿಷ್ಯರಿಗೆ ಗುರುವರ್ಯರ ಮಂದಹಾಸ, ನೇತ್ರದ್ವಯಗಳಲ್ಲಿ ಪ್ರಕಾಶವಾಗುತ್ತಿದ್ದ ದಿವ್ಯತೇಜಸ್ಸು, ಸಂಕರ್ಷಣಮೂರ್ತಿಯಾದ ಶ್ರೀನೃಸಿಂಹನನ್ನು ಹೋಲುವ ಅವರ ವದನಾರವಿಂದ ಇವು ಅನಂತ ತೃಪ್ತಿಯನ್ನೂ, ಶಾಂತಿಯನ್ನೂ ಕೊಡುತ್ತಿದ್ದವು. ಅವರ ಮೌನವು ಪ್ರವಚನಕ್ಕಿಂತಲೂ ಹೆಚ್ಚು ಅರ್ಥಪೂರ್ಣವಾಗಿರುತ್ತಿತ್ತು. ಅಂತರ್ಮುಖ ಸಾಧನೆ ಮತ್ತು ತಪಸ್ಸಿನಿಂದ ಅವರ ಶರೀರವು ಭೌತಿಕಾಂಶವನ್ನೆಲ್ಲಾ ಕಳೆದುಕೊಂಡು ಸ್ವಪ್ರಕಾಶನಾದ ಆತ್ಮನ ಪ್ರಭಾವಳಿಯಂತೆ ಕಂಗೊಳಿಸುತ್ತಿತ್ತು.

ಬೆಂಗಳೂರಿನ ಶಂಕರಮಠದ ಪ್ರೌಢಪಾಠಶಾಲೆಯಲ್ಲಿ ಪರೀಕ್ಷೆಗಳು ನಡೆಯುತ್ತಿದ್ದವು. ಮೀಮಾಂಸಾ ಶಾಸ್ತ್ರದಲ್ಲಿ ಮೌಖಿಕ ಪರೀಕ್ಷೆಯನ್ನು ಸ್ವತಃ ಗುರುವರ್ಯರೇ ನಡೆಸುತ್ತಿದ್ದರು. ಪ್ರತಿ ವಿದ್ಯಾರ್ಥಿಯನ್ನೂ ಸಂಸ್ಕೃತದಲ್ಲಿಯೇ ಪ್ರಶ್ನಿಸುವುದು, ವಿದ್ಯಾರ್ಥಿಯು ಉತ್ತರವನ್ನು ಒಪ್ಪಿಸುವುದು ಹೀಗೆ ನಡೆಯುತ್ತಿತ್ತು. ಗುರುಭಕ್ತರೂ, ಪ್ರಸಿದ್ಧ ವಕೀಲರೂ ಆಗಿದ್ದ ಶ್ರೀ ಆರ್. ಕೃಷ್ಣಸ್ವಾಮಿ ಅಯ್ಯರ್‌ರವರೂ ಅವರ ಜತೆಯಲ್ಲಿ ಮದರಾಸಿನ ಓರ್ವ ಚೆಟ್ಟಿಯಾರರೂ ನಿತ್ಯವೂ ಗುರುಸನ್ನಿಧಿಗೆ ಬರುತ್ತಿದ್ದು ಪರೀಕ್ಷಾ ಸಮಯದಲ್ಲಿ ಹಾಜರಿರುತ್ತಿದ್ದರು.

---

೧೧ ಶ್ರೀರಮಣ ಮಹರ್ಷಿಗಳ ಸನ್ನಿಧಿಯಲ್ಲಿಯೂ ಅನೇಕರು ಈ ಅನುಭವವನ್ನು ಪಡೆಯುತ್ತಿದ್ದರು. ಅನೇಕ ಸಂದೇಹ ಸಂಶಯಗಳನ್ನು ಮನಸ್ಸಿನಲ್ಲಿ ತುಂಬಿಕೊಂಡು ಸಂಶಯ ಪರಿಹಾರಕ್ಕಾಗಿಯೂ, ಮಾರ್ಗದರ್ಶನಕ್ಕಾಗಿಯೂ ಬಂದವರಿಗೆ ಶ್ರೀರಮಣ ಮಹರ್ಷಿಗಳೂ ಮೌನವಾಗಿಯೇ ಉಪದೇಶವನ್ನು ಅನುಗ್ರಹಿಸುತ್ತಿದ್ದರು.



ಒಂದು ದಿನ ಪರೀಕ್ಷಾನಂತರ ಇಬ್ಬರು ಶಿಷ್ಯರೂ ಹೊರಬರುತ್ತಿದ್ದಾಗ ಮಠದ ಅಧಿಕಾರಿಯೊಬ್ಬರು ಅವರನ್ನು ಸಂಧಿಸಿದರು. ಪರಸ್ಪರ ಕುಶಲ ಪ್ರಶ್ನೆಯಾದ ಮೇಲೆ "ತಾವೆಲ್ಲಿಂದ ಬರುತ್ತಿದ್ದೀರಿ?" ಎಂದು ಕೇಳಿದರು ಆ ಅಧಿಕಾರಿ.

"ಮಹಾಸನ್ನಿಧಾನದ ದರ್ಶನಕ್ಕಾಗಿ ಹೋಗಿದ್ದೆವು, ಈಗ ಅಲ್ಲಿಂದಲೇ ಬರುತ್ತಿದ್ದೇವೆ" ಎಂದರು ಅಯ್ಯರ್.

ಮಠದ ಅಧಿಕಾರಿಗೆ ಅಶ್ಚರ್ಯವಾಯಿತು.

"ಏನು ಗುರುಗಳ ಸನ್ನಿಧಿಯಿಂದ ಬರುತ್ತಿದ್ದೀರಾ? ಅಲ್ಲಿ ಈಗ ವೇದಾಂತ ಪರೀಕ್ಷೆಯು ನಡೆಯುತ್ತಿದೆ. ಗಾಢವೂ, ಗಹನವೂ ಅತ್ಯಂತ ಕಠಿಣವೂ ಆದ ವಿಷಯ ಮೀಮಾಂಸಾ ಶಾಸ್ತ್ರ. ನಿಮಗೇ ಅರ್ಥವಾಗುವುದು ಕಷ್ಟ. ಚೆಟ್ಟಿಯಾರರಿಗೆ ಶಾಸ್ತ್ರ ವಿಷಯವಿರಲಿ, ಸಂಸ್ಕೃತ ಭಾಷೆಯೂ ಬರದು. ಅಂತಹುದರಲ್ಲಿ ಅವರೇಕೆ ಪರೀಕ್ಷೆಯ ಸಮಯದಲ್ಲಿ ಕುಳಿತಿರುತ್ತಾರೆ, ಏನೂ ಅರ್ಥವಾಗದಿರುವಾಗ?" ಎಂದು ವಿಸ್ಮಯದಿಂದ ಕೇಳಿದರು.

ಅಯ್ಯರ್ ಉತ್ತರಿಸುವ ಮೊದಲೇ ಚೆಟ್ಟಿಯಾರರು "ನಿಮ್ಮ ಮಾತು ಕೇಳಿ ನನಗೆ ಆಶ್ಚರ್ಯವಾಗುತ್ತಿದೆ. ನಾವು ಮಹಾಸ್ವಾಮಿಯವರ ಸನ್ನಿಧಿಗೆ ಹೋಗುವುದು ಅವರ ಮುಖದಲ್ಲಿ ರಾರಾಜಿಸುವ ತೇಜಸ್ಸು, ಶಾಂತಿ, ಆನಂದಗಳನ್ನು ಅನುಭವಿಸುವುದಕ್ಕಾಗಿ. ಅಲ್ಲಿ ನಡೆಯುವ ಪರೀಕ್ಷೆಯ ವಿಷಯ ನಮಗೆ ಅರ್ಥವಾಗುವುದಾದಲ್ಲಿ ನಮ್ಮ ಮನಸ್ಸು ಆ ಭಾವಗಳತ್ತ ಹೋಗುವುದೇ ವಿನಾ ಶ್ರೀಗುರುದೇವರ ಮುಖಾರವಿಂದ ದರ್ಶನದಿಂದುಂಟಾಗುವ ಆನಂದವನ್ನು ಅನುಭವಿಸಲಾಗುವುದೇ? ನನಗೆ ಸಂಸ್ಕೃತ ಜ್ಞಾನವಿಲ್ಲವೆಂದು ನನಗೆ ಬೇಸರವಿಲ್ಲ. ಅದರಿಂದ ನನಗೆ ಗುರುವರ್ಯರ ಸನ್ನಿಧಿಯಲ್ಲಿ ಯಾವ ಅನ್ಯ ಆಕರ್ಷಣೆಯೂ ಇಲ್ಲದೇ ಶಾಂತಿಯನ್ನನುಭವಿಸುವ ಪೂರ್ಣಾವಕಾಶ ದೊರೆತಿದೆ" ಎಂದರು. ಮಠದ ಅಧಿಕಾರಿಯು ಚೆಟ್ಟಿಯಾರರ ಭಕ್ತಿ ಶ್ರದ್ಧೆಗೆ ಅವಾಕ್ಕಾದರು.

ಗುರುದೇವರ ಆಪ್ತಶಿಷ್ಯರೊಬ್ಬರು ಮಂತ್ರದೀಕ್ಷೆ ಪಡೆದು ಸಾಧನನಿರತರಾಗಿದ್ದರು. ಅವರು ಮೊದಲಿಗೆ ನಾಸ್ತಿಕರಾಗಿದ್ದು, ಸಮಾಜ ಸೇವೆಯೊಂದೇ ಜೀವಿತದ ಗುರಿಯೆಂದು ದೃಢವಾಗಿ ನಂಬಿದ್ದವರು. ಹೇಗೋ ಗುರುದೇವರ ದರ್ಶನ ಲಭಿಸಿ ಅವರ ಜೀವನದ ಗತಿಯೇ ಬದಲಾಗಿಬಿಟ್ಟಿತ್ತು. ಗುರುದೇವರ ಪರಮಾಪ್ತ ಶಿಷ್ಯರಾಗಿ ಅವರು ಆಧ್ಯಾತ್ಮ ಸಾಧನೆ ಮಾಡುತ್ತಿದ್ದರು.

ಅವರಿಗೊಂದು ಚಟವಿತ್ತು. ಕೈಗೆ ಸಿಕ್ಕ ವೇದಾಂತದ ಪುಸ್ತಕಗಳನ್ನೆಲ್ಲಾ ಓದುವುದು, ಅವುಗಳಲ್ಲಿ ಕಂಡುಬಂದ ಸಂದೇಹಗಳನ್ನು ಅರ್ಥಮಾಡಿಕೊಂಡು

ಬಿಡಿಸಲು ಪ್ರಯತ್ನ ಪಡುವುದು. ಅರ್ಥವಾಗದಿದ್ದರೆ ಮಾನಸಿಕವಾಗಿ ತೊಳಲಾಡಿ ಅಶಾಂತರಾಗುವುದು. ಅವರ ಆಧ್ಯಾತ್ಮಿಕ ಸಾಧನೆಗೆ ಇಂತಹ ವ್ಯಾಸಂಗದಿಂದ ಯಾವ ಸಹಾಯವೂ ದೊರಕದಿದ್ದರೂ, ಈ ಚಟದಿಂದ ಬಿಡುಗಡೆ ಹೊಂದಲು ಅವರಿಗೆ ಸಾಧ್ಯವಾಗಿರಲಿಲ್ಲ.

ಒಮ್ಮೆ ಹೀಗೆಯೇ ಮಂತ್ರಶಾಸ್ತ್ರದ ಪುಸ್ತಕವೊಂದನ್ನು ಓದಲು ಪ್ರಾರಂಭಿಸಿದರು. ಓದಿ ಓದಿ ತಲೆಕೆಟ್ಟಿತು. ಪುಸ್ತಕದಲ್ಲಿದ್ದ ವಿಷಯವು ತಾವು ಭಾವಿಸಿದ್ದ, ಅನುಸರಿಸುತ್ತಿದ್ದ ರೀತಿಗೆ ವಿರೋಧವಾಗಿ ಕಂಡಿತು. ತಾವು ಮಾಡುತ್ತಿರುವುದು ಸರಿಯೋ ತಪ್ಪೋ ಎಂಬ ಅನುಮಾನ ಮೂಡಿತು. ತಮ್ಮ ಸಂಶಯ ಪರಿಹಾರಕ್ಕೆಂದು ಶೃಂಗೇರಿಗೇ ಹೊರಟುಬಿಟ್ಟರು.

ಆಗ ಗುರುದೇವರು ಅಂತರ್ಮುಖರಾಗಿಯೇ ಇದ್ದರು. ಆದರೆ ಆ ದಿನ– ಈ ಶಿಷ್ಯ ಶೃಂಗೇರಿಗೆ ಬಂದ ದಿನ ಗುರುಗಳು ಬಹಿರ್ಮುಖರಾಗಿ ತಮ್ಮ ಸ್ನಾನಾಹ್ನಿಕಗಳನ್ನು ನೆರವೇರಿಸಿ, ಶ್ರೀಶಾರದಾ ದರ್ಶನಕ್ಕೆ ದಯಮಾಡಿಸಿದ್ದರು. ಅದೇ ತಾನೇ ಬಸ್ಸಿನಿಂದಿಳಿದು, ತುಂಗಾನದಿಯಲ್ಲಿ ಮಿಂದು, ಅಮ್ಮನವರ ದರ್ಶನಕ್ಕಾಗಿ ಈ ಶಿಷ್ಯರೂ ದೇವಾಲಯಕ್ಕೆ ಬಂದಿದ್ದರು. ಇದ್ದಕ್ಕಿದ್ದಂತೆ ಬಹಿರ್ಮುಖರಾದ ಗುರುದೇವರನ್ನು ಕಂಡು ಜನಸಂದಣಿ ಹೆಚ್ಚಾಯಿತು. ಅಮಿತ ಸಂಭ್ರಮ ಉತ್ಸಾಹಗಳಿಂದ ಜನ ಆಲಯಕ್ಕೆ ಬಂದರು. ಗುರುದೇವರು ಶ್ರೀಶಾರದಾಂಬಾ ದರ್ಶನ ಮುಗಿಸಿ, ನೇರವಾಗಿ ಈ ಶಿಷ್ಯನ ಬಳಿ ಬಂದು ನಿಂತು, "ನೀನು ಅಂತಹ ಪುಸ್ತಕಗಳನ್ನೇಕೆ ಓದುವುದು?" ನಾನು ಹೇಳಿದಷ್ಟನ್ನು ಮಾತ್ರ ಮಾಡು. ಅಷ್ಟು ಸಾಕು" ಎಂದು ನುಡಿದು ತಮ್ಮ ಆಶ್ರಮದತ್ತ ಹೊರಟುಬಿಟ್ಟರು. ಮತ್ತೆ ಸ್ವಲ್ಪ ಸಮಯಕ್ಕೆಲ್ಲಾ ಅಂತರ್ಮುಖರಾಗಿ ಆತ್ಮಾರಾಮ ಸ್ಥಿತಿಗೆ ತಲುಪಿಬಿಟ್ಟರು.

ಗುರುದೇವರು ನಂಜನಗೂಡಿನಲ್ಲಿದ್ದಾಗ ಅವರ ದರ್ಶನಕ್ಕಾಗಿ ಪ್ರತಿದಿನವೂ ಬಾಲಕನೊಬ್ಬನು ಬರುತ್ತಿದ್ದನು. ಪರಿಜನರು ಅವನನ್ನು ಒಳಗೆ ಬಿಡದೇ ತಡೆದುಬಿಡುತ್ತಿದ್ದರು. ಒಂದು ದಿನ ಆ ಬಾಲಕ ದುಃಖದಿಂದ ಅಳುತ್ತಾ, ಮಠದ ಕಂಬವೊರಗಿ ನಿಂತಿದ್ದನು. ಒಳಗೆಲ್ಲಾ ಜನಸಂದಣಿ. ಗುರುಗಳು ಇನ್ನೂ ಹೊರಗೆ ಬಂದಿರಲಿಲ್ಲ. ಹತ್ತಿರವಿದ್ದ ಪರಿಚಾರಕನನ್ನು ಕರೆದು "ಹೋಗು, ಹೊರಗೆ ಒಬ್ಬ ಬಾಲಕ ಅಳುತ್ತಾ ನಿಂತಿದ್ದಾನೆ. ಅವನನ್ನು ಕರೆದುತಾ" ಎಂದು ಅಪ್ಪಣೆ ಮಾಡಿದರು. ಪರಿಚಾರಕ ಓಡೋಡಿ ಬಂದು ಬಾಲಕನನ್ನು ಕರೆದ. ಬಾಲಕ ಹರ್ಷಪುಲಕಿತನಾಗಿ ಗುರುದೇವರತ್ತ ಧಾವಿಸಿ ಅಡ್ಡಬಿದ್ದ. ಮೃದುವಾಣಿಯಲ್ಲಿ ಗುರುಗಳು ಅವನ ಯೋಗಕ್ಷೇಮ ವಿಚಾರಿಸಿ, "ನಿನಗೇನು



ಬೇಕು?" ಎಂದು ಕೇಳಿದರು. ಅವನು ತನಗೆ ಯಾವುದಾದರೂ ಮಂತ್ರ ಉಪದೇಶಿಸಬೇಕೆಂದು ಬೇಡಿದ. "ಆಗಲಿ, ನಾಳೆ ಮಡಿಯುಟ್ಟು ಶುಚಿಯಾಗಿ ಬಾ" ಎಂದರು.

ಮಾರನೆಯ ದಿನ ಆ ಬಾಲಕ ಪ್ರಾತಃಕಾಲವೇ ಬಂದ. ಆ ದಿನ ಮೈಸೂರು ಮಹಾರಾಜರು ದರ್ಶನಕ್ಕೆ ಬರುವುದಿದ್ದುದರಿಂದ ಹೆಚ್ಚುಜನಕ್ಕೆ ಮಠದಲ್ಲಿ ಪ್ರವೇಶವಿರಲಿಲ್ಲ. ಈ ಬಾಲಕನಿಗೆ ಗುರುಗಳೇ ಕರೆಕಳುಹಿಸಿದರು. ಅವನು ಸಾಷ್ಟಾಂಗ ಪ್ರಣಾಮಮಾಡಿ ನಮ್ರನಾಗಿ ನಿಂತ. ಗುರುಗಳು "ಏನಪ್ಪಾ, ಶುಚಿಯಾಗಿ ಬರಬೇಕೆಂದು ನಾನು ಹೇಳಿರಲಿಲ್ಲವೇ? ಸ್ನಾನ, ಸಂಧ್ಯಾವಂದನೆಯನ್ನು ಮಾಡಿ ಆಹಾರವನ್ನೇನೂ ಸ್ವೀಕರಿಸದೇ ಬರಬೇಕಾಗಿತ್ತು" ಎಂದರು. ಆ ಬಾಲಕನು ತಲೆತಗ್ಗಿಸಿ "ಅಭ್ಯಾಸವಶನಾಗಿ ಸಂಧ್ಯಾವಂದನೆಯ ನಂತರ ತಂಗುಳನ್ನವನ್ನು ತಿಂದುಬಿಟ್ಟೆ ಮಹಾಸ್ವಾಮಿ. ಈಗ ಏನು ಮಾಡಲಿ?" ಎಂದು ಬೇಡಿದ. ಗುರುದೇವರು "ಚಿಂತೆಯಿಲ್ಲ, ನಾಳೆ ಬಾ. ಶುಚಿಯಾಗಿ ತಿಂಡಿತೀರ್ಥವನ್ನೇನೂ ತೆಗೆದುಕೊಳ್ಳದೇ ಬಾ" ಎಂದರು. ಮರುದಿನ ಆ ಬಾಲಕನು ಗುರುದೇವರು ಹೇಳಿದಂತೆ ಶುಚಿಯಾಗಿ ಬಂದು ಮಂತ್ರೋಪದೇಶ ವನ್ನು ಪಡೆದನು.

ತಮ್ಮಲ್ಲಿ ವಿದ್ಯಾರ್ಜನೆ ಮತ್ತು ಜ್ಞಾನಾರ್ಜನೆಗೆ ಬಂದವರನ್ನು ಗುರುಗಳು ಪರಮ ವಿಶ್ವಾಸದಿಂದ ಕಾಣುತ್ತಿದ್ದರು. ಪ್ರಾಮಾಣಿಕರೂ, ಶ್ರದ್ಧಾವಂತರೂ ಆದ ವಿದ್ಯಾರ್ಥಿಗಳಿಗೆ ತಾವೇ ಬ್ರಹ್ಮಸೂತ್ರ ಭಾಷ್ಯ ಪಾಠವನ್ನೂ, ವೇದಾಂತದ ಗಹನವಾದ ಭಾಗಗಳನ್ನೂ ಬೋಧಿಸುತ್ತಿದ್ದರು. ಅವರ ಬೋಧನಾಕ್ರಮವೂ ಸಹ ವಿಶಿಷ್ಟವೂ, ಇತರರಿಗೆ ಅನುಕರಣೀಯವೂ ಆಗಿದ್ದಿತು. ಪ್ರಶ್ನೆ ಕೇಳುವವನ ಮನಸ್ಸಿನ ಮೇಲೆ ಅಚ್ಚೊತ್ತಿದಂತೆ ಸಂಭಾಷಣಾ ಕ್ರಮದಲ್ಲಿಯೇ ಸ್ವಲ್ಪ ಸ್ವಲ್ಪವಾಗಿ ಬಿಡಿಸುತ್ತಾ ವಿವರಿಸಿ, ಹೃದ್ಯವಾಗುವಂತೆ ಪಾಠ ಹೇಳುವ ಕೌಶಲ್ಯ ಗುರುಗಳಿಗೆ ಕರತಲಾಮಲಕವಾಗಿತ್ತು.

ಪಾಠದ ಯಾವುದಾದರೊಂದು ಭಾಗ ಅರ್ಥವಾಗಲಿಲ್ಲವೆಂದರೆ ಶಿಷ್ಯನಿಗೆ ಆ ಭಾಗವನ್ನು ಮತ್ತೊಮ್ಮೆ ಉಚ್ಚ ಸ್ವರದಲ್ಲಿ ಓದುವಂತೆ ಹೇಳುತ್ತಿದ್ದರು. ತಾನು ಓದುತ್ತಿರುವ ಭಾಗ ಪೂರ್ಣವಾಗುವ ಮೊದಲೇ ಅದರ ಅರ್ಥ ಅವನಿಗೆ ಹೃದ್ಗತವಾಗಿ ಬಿಡುತ್ತಿತ್ತು. ಕೆಲವು ಸಂದರ್ಭಗಳಲ್ಲಿ ಗುರುಗಳು ತಾವೇ ಆ ಭಾಗವನ್ನು ಓದಿ ವಿವರಣೆಯಿಲ್ಲದೆಯೇ ಅರ್ಥವಾಗುವಂತೆ ಮಾಡಿಬಿಡುತ್ತಿದ್ದರು. ಓದುತ್ತಿದ್ದಾಗ ಅವರ ಮುಖಭಾವ, ಸ್ವರಸಂಚಾರ, ಕರಮುದ್ರೆ ಇತ್ಯಾದಿಗಳೇ ಅರ್ಥಗ್ರಹಣ ಮಾಡಿಕೊಳ್ಳಲು ಸಾಕಾಗುತ್ತಿದ್ದವು.

ಯಾವುದೇ ಗ್ರಂಥವಾಗಲಿ ಪಾಠ ಹೇಳಲು ಇಷ್ಟೇ ದಿನಗಳು ಎಂದು ಕಾಲಮಿತಿಯನ್ನು ಹಾಕುತ್ತಿರಲಿಲ್ಲ. ಅಧ್ಯಯನದಲ್ಲಿ ಶ್ರದ್ಧೆಗೆ ಹೆಚ್ಚು ಪ್ರಾಮುಖ್ಯ ನೀಡುತ್ತಿದ್ದರೇ ವಿನಾ ಅವಶ್ಯಕತೆಗೆ ಮೀರಿದ ವ್ಯಾಸಂಗಕ್ಕೆ ಗಮನ ಕೊಡುತ್ತಿರಲಿಲ್ಲ. ವಿದ್ಯೆಯು ಮಾನವನ ಸರ್ವೋನ್ನತಿಗೆ ಕಾರಣವೆಂದು ಬಗೆದಿದ್ದ ಗುರುವರ್ಯರು ಅನುಷ್ಠಾನಕ್ಕೆ ಹೆಚ್ಚು ಬೆಲೆ ನೀಡುತ್ತಿದ್ದರು. **ಪೂರ್ವದ ಮಹರ್ಷಿಗಳು ವೇದದಲ್ಲಿ ಸಾರಭೂತವಾದುದನ್ನು ಕೆಲವೇ ವಾಕ್ಯಗಳಲ್ಲಿ ಸಂಗ್ರಹಿಸಿ ಹಿಡಿದಿಟ್ಟಿಲ್ಲವೇ? ಅವುಗಳನ್ನು ಗ್ರಹಿಸಿ ಅದರಂತೆಯೇ ನಡೆಯುವವನಿಗೆ ನೂರಾರು ಗ್ರಂಥಗಳ ಅಧ್ಯಯನದ ಗೊಡವೆಯೇಕೆ? ಕಲಿತುದನ್ನು ಜೀವನದಲ್ಲಿ ಪ್ರಾಮಾಣಿಕವಾಗಿ ಆಚರಿಸಿ ಅನುಭವಕ್ಕೆ ತಂದುಕೊಳ್ಳುವುದೇ ಅಲ್ಲವೇ ಬೇಕಾಗಿರುವುದು?**

ವಿದ್ಯಾರ್ಥಿಯ ಮನಸ್ಸಿನ ಪರಿಪಾಕ, ಬುದ್ಧಿಶಕ್ತಿ, ಸಂಸ್ಕಾರ ಮುಂತಾದುವನ್ನು ಕ್ಷಣಮಾತ್ರದಲ್ಲಿ ಗ್ರಹಿಸುತ್ತಿದ್ದ ಗುರುವರ್ಯರು ಆಯಾ ವಿದ್ಯಾರ್ಥಿಯ ಅಧಿಕಾರ, ಅರ್ಹತೆಗಳನ್ನು ಪರಿಗಣಿಸಿ ಅವರವರ ಗ್ರಹಣಶಕ್ತಿಗನುಸಾರವಾಗಿಯೇ ಪಾಠ ಹೇಳುತ್ತಿದ್ದರು. ಎಲ್ಲರಿಗೂ ಒಂದೇ ರೀತಿಯ ಪಾಠಕ್ರಮ ಇರುತ್ತಿರಲಿಲ್ಲ. ಧರ್ಮದ ಮಹತ್ವ ಮತ್ತು ಅದ್ವೈತ ತತ್ತ್ವಗಳನ್ನು ಉಪಮಾನಗಳ ಮತ್ತು ಯೋಗ್ಯ ದೃಷ್ಟಾಂತಗಳ ಮೂಲಕ ಅತ್ಯಂತ ಮಂದಬುದ್ಧಿಯವನಿಗೂ ಗ್ರಾಹ್ಯವಾಗುವಂತೆ ತಿಳಿಸುತ್ತಿದ್ದರು.

ಆಧ್ಯಾತ್ಮಿಕ ತತ್ತ್ವಗಳಲ್ಲಿ ಯಾವುದಾದರೂ ಸಂಶಯವಿದ್ದರೆ ಅಥವಾ ಅವುಗಳನ್ನು ಪಾಂಡಿತ್ಯ ಪ್ರತಿಭೆಯಿಂದಲೋ, ಬುದ್ಧಿ ಚಮತ್ಕಾರದಿಂದಲೋ ಪ್ರದರ್ಶಿಸಬೇಕಾದರೆ ಹಲವಾರು ಗ್ರಂಥಗಳ ಅಧ್ಯಯನ ನಡೆಸಬೇಕು. ಆಧ್ಯಾತ್ಮಿಕ ಸತ್ಯದಲ್ಲಿ ಯಾವ ಸಂದೇಹವೂ ಇಲ್ಲದಿದ್ದಾಗ ಅದನ್ನು ಜೀವನದ ಅನುಭವಕ್ಕೆ ತಂದುಕೊಳ್ಳಲು ನೂರಾರು ಗ್ರಂಥಗಳ ಅಧ್ಯಯನವಾಗಲೀ, ಹೆಚ್ಚಿನ ಪಾಂಡಿತ್ಯವಾಗಲೀ ಅನವಶ್ಯಕ. ಶ್ರದ್ಧೆಯಿಂದ ಆ ಮಾರ್ಗದಲ್ಲಿ ನಡೆದು ಸಾಧನೆ ನಡೆಸಬೇಕು. ತರ್ಕ, ಯುಕ್ತಿ, ವಾದ, ಚರ್ಚೆಗಳನ್ನೆಲ್ಲಾ ವಿದ್ವಾಂಸರಿಗೆ ಬಿಟ್ಟು ಆತ್ಮ ಸಾಕ್ಷಾತ್ಕಾರ ಮಾರ್ಗದಲ್ಲಿ ತಾನು ನಡೆಯಬೇಕು. ಸತ್ಯ, ಧರ್ಮ, ಶಾಂತಿಗಳನ್ನು ಕುರಿತು ಉದ್ದುದ್ದ ಘೋಷಣೆಗಳನ್ನು ಮಾಡುವುದರಿಂದಾಗಲೀ, ವಿದ್ವತ್ಪೂರ್ಣ ಚರ್ಚೆ ನಡೆಸುವುದರಿಂದಾಗಲೀ ಯಾವ ಪ್ರಯೋಜನವೂ ಇಲ್ಲ. ಸನಾತನ ಧರ್ಮದ ತತ್ತ್ವಗಳನ್ನು ಜೀವನದಲ್ಲಿ ಅನುಷ್ಠಾನಕ್ಕೆ ತರುವುದರಲ್ಲಿಯೇ ಅದರ ಪ್ರಯೋಜನವನ್ನು ಕಾಣಬಹುದು ಎಂದು ಗುರುದೇವರು ಒತ್ತಿ ಒತ್ತಿ ಹೇಳುತ್ತಿದ್ದರು.



ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಇತ್ಯಾದಿ ಶಾಸ್ತ್ರಗಳಲ್ಲಿ ಅನೇಕ ಪಂಡಿತರನ್ನೂ, ವಿದ್ವಾಂಸರನ್ನೂ ನಾವು ನೋಡುತ್ತೇವೆ. ಅವರೆಲ್ಲರೂ ತಂತಮ್ಮ ಮಾರ್ಗದಲ್ಲಿಯೇ ನಡೆದು ಸತ್ಯಸಾಕ್ಷಾತ್ಕಾರ ಮಾಡಿಕೊಂಡಿದ್ದಾರೆಯೇ? ವೇದ ಪ್ರಣೀತವಾದ ಯಾವುದಾದರೊಂದು ತತ್ತ್ವವನ್ನು ಗ್ರಹಿಸಿ ಅದರ ಸಾಕ್ಷಾತ್ಕಾರಕ್ಕೆ ಪ್ರಯತ್ನಿಸಿ ಶ್ರದ್ಧೆ, ಪ್ರಾಮಾಣಿಕತೆಗಳಿಂದ ಸಾಧನೆ ನಡೆಸಿದರೆ ಆಗ ಖಂಡಿತವಾಗಿಯೂ ಪ್ರಯತ್ನಕ್ಕೆ ಪ್ರತಿಫಲ ದೊರೆಯುವುದು. ಧರ್ಮ, ಸತ್ಯ ಇತ್ಯಾದಿ ಉನ್ನತ ವಿಷಯಗಳನ್ನು ಕುರಿತು ವ್ಯರ್ಥ ಚರ್ಚೆ ಮಾಡಿ ಅವುಗಳನ್ನು ಸಾಧಾರಣ ಮಟ್ಟಕ್ಕೆ ಎಳೆತರುವುದರಿಂದ ಯಾವ ಪ್ರಯೋಜನವೂ ಇರದೇ ಅನೇಕ ಸಂದರ್ಭಗಳಲ್ಲಿ ಅವುಗಳ ದುಷ್ಪರಿಣಾಮ ಆಗುವುದುಂಟು.

ಸಾಮೂಹಿಕವಾದ, ಸಾರ್ವತ್ರಿಕವಾದ ಧರ್ಮಪ್ರಚಾರವನ್ನು ಮಾಡಲು, ಗೂಢ, ಗಹನ ವಿಷಯಗಳನ್ನು ಕುರಿತು ಉಪದೇಶಗಳನ್ನು ಕೊಡಲು ಆಚಾರ್ಯರು ಒಪ್ಪುತ್ತಿರಲಿಲ್ಲ. ರಾಷ್ಟ್ರಕ್ಕೆ ಕಲ್ಯಾಣವಾಗಬೇಕಾದರೆ ವ್ಯಕ್ತಿಗೆ ಕಲ್ಯಾಣವಾಗಬೇಕೆಂದು ಗುರುಗಳು ಹೇಳುತ್ತಿದ್ದರು. ಸಾಮೂಹಿಕ ಪ್ರಚಾರ ದಿಂದಾಗಲೀ, ಸಾರ್ವತ್ರಿಕ ಉಪದೇಶದಿಂದಾಗಲೀ ವ್ಯಕ್ತಿಯ ಕಲ್ಯಾಣವಾಗದು. ಮೊದಲು ವ್ಯಕ್ತಿಯಿಂದ ಶುದ್ಧೀಕರಣ ಆರಂಭವಾಗಬೇಕು, ಸಾಮೂಹಿಕವಾಗಿ ಯಲ್ಲ. ಒಬ್ಬೊಬ್ಬ ವ್ಯಕ್ತಿಯು ಶುದ್ಧನಾಗುತ್ತಾ ಬಂದರೆ, ತನ್ನ ನಡೆ, ನುಡಿ, ಭಾವಶುದ್ಧಿಯನ್ನು ಮಾಡಿಕೊಳ್ಳುತ್ತಾ ಬಂದರೆ ಸಾಮೂಹಿಕ ಶುದ್ಧಿ ತಾನಾಗಿಯೇ ಆಗುತ್ತದೆ. ಪ್ರತಿಯೊಬ್ಬನೂ ಈ ನಿಟ್ಟಿನಲ್ಲಿ ಪ್ರಯತ್ನಿಸಬೇಕೇ ವಿನಾ ಸಾರ್ವಜನಿಕವಾಗಿ ಈ ಕೆಲಸ ನಡೆಯದು. ವ್ಯಕ್ತಿಯ ಜೀವನ ಶುದ್ಧವಾದರೆ ರಾಷ್ಟ್ರ ಜೀವನವೂ ಶುದ್ಧವಾದೀತು. ವ್ಯಕ್ತಿಜೀವನದಲ್ಲಿ ಶಾಸ್ತ್ರಗಳ ಅನುಸಾರವಾಗಿ ಎಂದರೆ ಸತ್ಯಾಚರಣೆ, ನ್ಯಾಯ, ಧರ್ಮ ಪರಿಪಾಲನೆ, ಪ್ರಾಮಾಣಿಕತೆಗಳಿಗೆ ಪ್ರಾಮುಖ್ಯ ಬಂದು ಅದರಂತೆ ನಡೆದರೆ ರಾಷ್ಟ್ರ ಜೀವನವೂ ಹಸನಾದೀತು. ಲೌಕಿಕ ಪ್ರಗತಿಗಿಂತ ಹೆಚ್ಚಿನ ಪ್ರಾಮುಖ್ಯ ನೈತಿಕಾಚರಣೆಗೂ, ಆಧ್ಯಾತ್ಮಿಕ ಅಭ್ಯುದಯಕ್ಕೂ ಬರಬೇಕು. ನೈತಿಕ ತತ್ತ್ವಗಳ ಆಧಾರದ ಮೇಲೆಯೇ ಲೌಕಿಕ ಪ್ರಗತಿಯನ್ನು ಸಾಧಿಸಬೇಕು. ಇಲ್ಲವಾದರೆ ರಾಷ್ಟ್ರಜೀವನ ಪತನಕ್ಕೆ ಬೀಳುತ್ತದೆ. ನೂರಾರು ಉಪನ್ಯಾಸಗಳ ಆದರ್ಶಕ್ಕಿಂತ ಒಂದೇ ಒಂದು ಆದರ್ಶದ ಪಾಲನೆ ಹೆಚ್ಚು ಬೆಲೆಯುಳ್ಳದ್ದೆಂದು ಶ್ರೀ ಗುರುವರ್ಯರ ನಂಬಿಕೆಯಾಗಿತ್ತು.

* * *

# ೨೫. ನುಡಿಗಿಂತ ನಡೆ ಮುಖ್ಯ

ವಿದ್ವತ್ಪ್ರೌಢಿಮೆಯ ಪ್ರದರ್ಶನ, ಸ್ವಮತ ಪ್ರಶಂಸೆ, ಅನ್ಯಮತ ದೂಷಣೆ, ಪರಮತಾಚಾರ್ಯರನ್ನು ಕುರಿತು ಟೀಕೆ, ಡಂಭಾಚರಣೆ ಇತ್ಯಾದಿಗಳನ್ನು ಗುರುದೇವರು ಸಹಿಸುತ್ತಿರಲಿಲ್ಲ. ಗುರುಗಳು ಪಾಂಡಿತ್ಯವೊಂದೇ ಪರಮಾರ್ಥ ವೆಂದು ಭಾವಿಸಿದವರ ಭ್ರಾಂತ ತಿಳಿವಳಿಕೆಯನ್ನು ಸರಿಪಡಿಸಿ ಸರಿಯಾದ ಅನುಷ್ಠಾನ ಪಥವನ್ನು ತೋರಿಸಿಕೊಡುತ್ತಿದ್ದರು.

ಆತ್ಮೋನ್ನತಿಯ ಮಾರ್ಗದಲ್ಲಿ ನಡೆಯದೆ, ಕೇವಲ ಗ್ರಂಥಗಳ ರಚನೆಯಿಂದ, ತರ್ಕ, ವಾದಗಳಿಂದ, ಉಪನ್ಯಾಸ, ಭಾಷಣಗಳಿಂದ ಏನು ಪ್ರಯೋಜನ? ತಾನು ಹೇಳುವ ತತ್ತ್ವವನ್ನು ಸ್ವಲ್ಪವೂ ಆಚರಿಸದ ಮನುಷ್ಯನಿಗೆ ಎಷ್ಟು ವಿದ್ಯೆ ಇದ್ದರೆ ತಾನೇ ಉಪಯೋಗ? ತನ್ನ ಆತ್ಮೋನ್ನತಿಗೆ ಉಪಯೋಗಿಸದೇ ಕೇವಲ ಪ್ರದರ್ಶನಕ್ಕೆ ಬಳಸುವ ವಿದ್ಯೆಯಿಂದ ಯಾವ ಪುರುಷಾರ್ಥ ಸಾಧನೆಯಾಗುತ್ತದೆ? ಜಂಭ, ಅಹಂಕಾರ ಇವೇ ಅಲ್ಲವೇ ಆತನ ಸಾಧನೆ? ತಾನು ವಿದ್ವಾಂಸನೆಂಬ ಹೆಮ್ಮೆಯಲ್ಲಿ ಮುಳುಗಿರುವವನಿಗೆ ತನ್ನನ್ನು ಮೀರಿಸುವ ಮತ್ತೊಬ್ಬನಿಂದ ಸೋತುಹೋಗುವೆನೆಂಬ ಭಯ, ಭೀತಿ. ತತ್ಪರಿಣಾಮವಾಗಿ ದ್ವೇಷಾಸೂಯೆಗಳು ಮೂಡುತ್ತವೆ. ಇಂತಹ ವಿದ್ವಾಂಸನ ಸ್ಥಿತಿ ತನಗಿಂತ ಹಿರಿಯ ಅಧಿಕಾರಿಯನ್ನು ಕಂಡು ಕರುಬುವ ಕೆಳನೌಕರನಂತೆ, ತನಗಿಂತ ಶ್ರೀಮಂತನಾಗಿರುವವನನ್ನು ಕಂಡು ಕರುಬುವ ಬಡವನಂತೆ ಕಂಡುಬರುತ್ತದೆ. ಇಂತಹ ವಿದ್ಯಾವಂತರೆನ್ನಿಸಿಕೊಂಡವರು ಪರಸ್ಪರ ದೂಷಣೆ, ಖಂಡನೆಗಳಲ್ಲಿ ತೊಡಗುತ್ತಾರೆ. ಈ ತೋರಿಕೆಯ ವಿದ್ಯೆಯಿಂದ ಆತ್ಮ ಕಲ್ಯಾಣವಿರಲಿ, ಆತ್ಮನಾಶವೇ ಅಗಬಹುದು.

ಹಲವಾರು ಶಾಸ್ತ್ರಗಳ ಅಧ್ಯಯನ ಮಾಡಿ ಪಾಂಡಿತ್ಯಗಳಿಸಿದ್ದವರೊಬ್ಬರು ಗುರುವರ್ಯರಲ್ಲಿ ಬಂದು ತಾವು ರಚಿಸಿರುವ ಹಲವು ವೇದಾಂತ ಗ್ರಂಥಗಳನ್ನು ಪರಾಮರ್ಶೆ ಮಾಡಬೇಕೆಂದು ಕೇಳಿಕೊಂಡರು.

"ಅದರಿಂದ ನಿಮಗೆ ಪ್ರಯೋಜನವೇನು?"

"ತಮ್ಮ ಅನುಗ್ರಹದಿಂದ ದೊರೆಯಬಹುದಾದ ಆನಂದ."

"ನಿಮ್ಮ ಕಾರ್ಯ ಬಹಳ ಶ್ಲಾಘನೀಯವಾದದ್ದು. ನೀವು ಬಹಳ ಬುದ್ಧಿಯನ್ನೂ, ಕಾಲವನ್ನೂ ವ್ಯಯಿಸಿ ಶ್ರಮಪಟ್ಟು ಗ್ರಂಥ ರಚಿಸಿದ್ದೀರಿ. ನಿಮ್ಮ ಪ್ರಯತ್ನ ಸಾರ್ಥಕವಾಗಿದ್ದಲ್ಲಿ, ನಿಮ್ಮ ಯತ್ನ ಈಶ್ವರನಿಗೆ ಪ್ರೀತಿಯಾಗಿದ್ದಲ್ಲಿ ನಿಮಗೆ ಆನಂದ ದೊರಕೇ ದೊರೆಯುತ್ತದೆ" ಎಂದು ಗುರುಗಳು ಅಪ್ಪಣೆ ಕೊಡಿಸಿದರು. ಆದರೆ ಗ್ರಂಥಾವಲೋಕನ ಮಾಡಲು ಒಪ್ಪಲಿಲ್ಲ.

ಕಾರಣ? ಇಂದು ರಚಿಸಲ್ಪಡುತ್ತಿರುವ ಅನೇಕ ಭಾಷ್ಯ, ವ್ಯಾಖ್ಯಾನಾದಿಗಳೆಲ್ಲ ಇತರ ಗ್ರಂಥಕರ್ತರ ಗ್ರಂಥಟೀಕೆಯನ್ನೂ, ವಿಮರ್ಶೆಯನ್ನೂ ಒಳಗೊಂಡು ತಮ್ಮ ಕೃತಿಯೇ ಸರ್ವೋತ್ತಮವೆಂದು ಪ್ರಶಂಸೆ ಮಾಡಿಕೊಳ್ಳುವಂಥವು. ಇತರ ಭಾಷ್ಯಾದಿಗಳಲ್ಲಿ ತಮಗೆ ಕಂಡುಬರುವ ಕೊರತೆಗಳನ್ನು ತಾವು ಸರಿಪಡಿಸಿ ಪೂರ್ಣಮಾಡಿರುವೆವೆಂದು ಕರೆದುಕೊಳ್ಳುವಂಥವು. ಇಂತಹ ಗ್ರಂಥಗಳನ್ನು ಓದಿ ಗುರುಗಳು ಮೆಚ್ಚಿಕೊಳ್ಳಲು ಸಾಧ್ಯವೇ? ಮೆಚ್ಚದೆ ಅವುಗಳಲ್ಲಿರುವ ದೋಷಗಳನ್ನು ವಿಮರ್ಶೆ ಮಾಡಿದರೆ, ಆ ಗ್ರಂಥಕರ್ತನಿಗೆ ನೋವಾಗುತ್ತದೆ. ಆದ್ದರಿಂದ ಆ ಗ್ರಂಥವನ್ನು ಪರಿಶೀಲಿಸುವ ಕಾರ್ಯವನ್ನೇ ಒಪ್ಪಿಕೊಳ್ಳದಿದ್ದ ರಾಯಿತಲ್ಲ. ಮುಮುಕ್ಷುಗಳಿಗೆ ಸನ್ಮಾರ್ಗದಲ್ಲಿ ನಡೆಯಲು ಇಂತಹ ಗ್ರಂಥಗಳ ಅವಶ್ಯಕತೆ ಇಲ್ಲವೆಂದೇ ಗುರುಗಳು ಭಾವಿಸಿದ್ದರು. ಪೂರ್ವದ ಮಹಾಪುರುಷರು ರಚಿಸಿರುವ ಅನೇಕ ಉದ್ಗ್ರಂಥಗಳಲ್ಲಿ ಧರ್ಮಮಾರ್ಗದಲ್ಲಿ ನಡೆಯಬೇಕೆಂಬ ನಿಜವಾದ ಅಪೇಕ್ಷೆಯುಳ್ಳವರಿಗೆ ನೂರಾರು ಮಾರ್ಗಗಳು ತೆರೆಯಲ್ಪಟ್ಟಿರುವಾಗ, ಸ್ವಪ್ರಕಾಶವಾಗಿರುವ ಸೂರ್ಯದೇವನ ಬೆಳಕಿಗೆ ಪಂಜಿನ ನೆರವೇಕೆ? ಇನ್ನೂ ಒಂದು ಮಾತು. ಬುದ್ಧಿವಂತಿಕೆಯ ಚಮತ್ಕಾರದಿಂದ ಕಲಿತಿರುವುದನ್ನೆಲ್ಲಾ ಪ್ರದರ್ಶಿಸಿ, ಮೆಚ್ಚುಗೆ ಪಡೆಯಬೇಕೆಂಬ ಗ್ರಂಥಕರ್ತನ ಕೀರ್ತಿಲಾಲಸೆಯಿಂದ ರಚಿತವಾದ ಇಂಥ ಗ್ರಂಥಗಳಲ್ಲಿ ವಿದ್ವತ್ತು, ಪ್ರೌಢಿಮೆ ಇರಬಹುದೇ ವಿನಾ ಅನುಭವದ ಲವಲೇಶವೂ ಇರುವುದಿಲ್ಲ. ಇವುಗಳಿಂದಾಗುವ ಪ್ರಯೋಜನ ಆಯಾ ವಿಷಯಗಳಲ್ಲಿರುವ ತರ್ಕವಿತರ್ಕಗಳ, ವಾದವಿವಾದಗಳ ಗೊಂದಲವೇ ವಿನಾ 'ಇದಮಿತ್ಥಮ್' ಎಂದು ಹೇಳಬಹುದಾದ ಅನುಭವಸಿದ್ಧವಾದ ನಿರ್ಣಯವೇನಲ್ಲ. ತಾನು ನಂಬಿದ ಮಾರ್ಗದಲ್ಲಿ ಶ್ರದ್ಧೆಯಿಂದ ನಡೆಯುವ ಸಾಧಕನಿಗೆ ಇವೆಲ್ಲಾ ಏಕೆ? ಇಂತಹವುಗಳಿಂದ ಅವನು ಸರಿತಪ್ಪುಗಳನ್ನು ನಿರ್ಣಯಿಸಲಾರದೇ ಧರ್ಮಸಂಕಟಕ್ಕೆ ಸಿಲುಕುವುದಿಲ್ಲವೇ?

ಘನವಿದ್ವಾಂಸರೊಬ್ಬರು ಗುರುದೇವರ ದರ್ಶನಕ್ಕೆ ಬಂದರು. ಮೊದಲಿನಿಂದಲೂ ಅವರನ್ನು ಬಲ್ಲವರಾಗಿದ್ದ ಗುರುಗಳು ಅವರ ಯೋಗಕ್ಷೇಮ ವಿಚಾರಿಸಿದ ನಂತರ "ಆಚಾರ್ಯರ ಭಾಷ್ಯಗಳನ್ನೂ, ಶಾಸ್ತ್ರವಿಷಯಗಳನ್ನೂ ಕುರಿತು ಈಗಲೂ ವ್ಯಾಖ್ಯಾನಗಳನ್ನೂ, ಉಪನ್ಯಾಸಗಳನ್ನೂ ನಡೆಸುತ್ತಿದ್ದೀರಿ ತಾನೇ?" ಎಂದು ಪ್ರಶ್ನಿಸಿದರು.

"ತಮ್ಮ ಆಶೀರ್ವಾದದಿಂದ ನಡೆಸಿಕೊಂಡು ಬರುತ್ತಿದ್ದೇನೆ" ಎಂದರು ಆ ಪಂಡಿತ ಶ್ರೇಷ್ಠರು.

"ಹಾಗೆಯೇ ನಿತ್ಯವೂ ಔಪಾಸನೆ[12]ಯನ್ನು ಆಚರಿಸುತ್ತಿದ್ದೀರಲ್ಲವೇ? ಗುರುಗಳು ಮರುಪ್ರಶ್ನೆ ಕೇಳಿದರು.

"ಕ್ಷಮಿಸಬೇಕು, ನಿತ್ಯವೂ ಔಪಾಸನೆಯನ್ನು ಮಾಡಲು ಅನುಕೂಲ ವಾಗುತ್ತಿಲ್ಲ" ಎಂದು ತಪ್ಪಿತಸ್ಥರಂತೆ ನುಡಿದ ಆ ಪಂಡಿತರು ತಮ್ಮ ಮಾತನ್ನು ಪುಷ್ಟೀಕರಿಸಲು "ನಾನಿರುವುದು ದೊಡ್ಡ ನಗರವಾದ್ದರಿಂದ ಅಲ್ಲಿ ಔಪಾಸನೆಗೆ ಬೆರಣಿ ದೊರೆಯುವುದೇ ಅಸಾಧ್ಯವಾಗಿದೆ" ಎಂದರು.

ಗುರುಗಳು ಅಸಮಾಧಾನದಿಂದ "ನಿಮ್ಮೂರಿನಲ್ಲಿರುವ ಹಸುಗಳು ಕಾಫಿಗಾಗಿ ಹಾಲನ್ನು ಮಾತ್ರ ಕೊಡುತ್ತವೆ, ಬೆರಣಿಗಾಗಿ ಸಗಣಿ ಹಾಕುವುದಿಲ್ಲವೇ?" ಎಂದು ಪ್ರಶ್ನಿಸಿದರು.

ಆದರೆ ಪ್ರಾಮಾಣಿಕರಾಗಿದ್ದು ಯಾವುದಾದರೂ ತೊಂದರೆಗೆ ಒಳಗಾಗಿ ಇಂತಹ ವೈದಿಕ ಕರ್ಮಗಳನ್ನು ನಡೆಸಲಾರದವರ ವಿಷಯದಲ್ಲಿ ಗುರುದೇವರು ಸಹಾನುಭೂತಿ ತೋರಿ ಸಹಾಯ ಮಾಡುತ್ತಿದ್ದರು.

ಒಂದು ಸಲ ಹಿರಿಯ ಪಂಡಿತರೊಬ್ಬರು ಗುರುದೇವರ ದರ್ಶನಕ್ಕೆ ಬಂದರು. ಯೋಗಕ್ಷೇಮ ವಿಚಾರಿಸಿದ ಗುರುಗಳು "ನಿಮ್ಮ ಅನುಷ್ಠಾನ ಹೇಗೆ ನಡೆಯುತ್ತಿದೆ?" ಎಂದು ಕೇಳಿದರು. ಪಂಡಿತರು "ಸನ್ನಿಧಾನದ ಕೃಪೆಯಿಂದ ಅಡ್ಡಿಯೇನೂ ಕಾಣುತ್ತಿಲ್ಲ" ಎಂದರು.

"ಔಪಾಸನೆಯನ್ನು ತಪ್ಪದೇ ಮಾಡುತ್ತಿದ್ದೀರಿ ತಾನೆ?" ಎಂದು ಕೇಳಿದರು ಗುರುಗಳು. ಪಂಡಿತರು ತಪ್ಪುಮಾಡಿದವರಂತೆ ತಲೆತಗ್ಗಿಸಿ, "ಇಲ್ಲ ಸ್ವಾಮಿ, ಏನೋ ತಾಪತ್ರಯಗಳಿಂದ ಔಪಾಸನೆಯನ್ನು ಮಾಡಲಾಗುತ್ತಿಲ್ಲ" ಎಂದು ಕ್ಷಮೆಕೋರುವ ಧ್ವನಿಯಲ್ಲಿ ಹೇಳಿದರು. ಆ ಪಂಡಿತರು ಆರ್ಥಿಕ ಕಷ್ಟದಲ್ಲಿ ಸಿಕ್ಕಿ ಅಡಚಣೆಗಳಿಂದ ಕುಗ್ಗಿದ್ದಾರೆಂದು ಅರಿತ ಗುರುಗಳು ಅವರ ಕಷ್ಟನಿವಾರಣೆಗೆ ಸೂಕ್ತ ಸಹಾಯದ ಏರ್ಪಾಟು ಮಾಡಿದರು. ತಮಗೆ ತಿಳಿಯದಂತೆಯೇ ಬಂದ ಆರ್ಥಿಕ ಸಹಾಯವನ್ನು ಕಂಡು ಅಚ್ಚರಿ ಪಟ್ಟ ಪಂಡಿತರು ಗುರುದೇವರ ಕೃಪೆಗೆ ಕೃತಜ್ಞತೆ ತೋರಿಸಿ, ಪುನಃ ಶಾಸ್ತ್ರಜ್ಞರ ನೆರವಿನಿಂದ ಔಪಾಸನೆಯನ್ನು ಆರಂಭಿಸಿದರು.

ಭಾರತೀಯ ಸಂಸ್ಕೃತಿ, ನಾಗರಿಕತೆ, ಭವ್ಯಪರಂಪರೆ, ತತ್ತ್ವವೇದಾಂತ ಗಳನ್ನೂ, ಸಾಹಿತ್ಯ ಇತಿಹಾಸಗಳನ್ನೂ ಕುರಿತು ಉದ್ದುದ್ದ ಭಾಷಣಗಳನ್ನು ಮಾಡುವುದೂ, ಆಚಾರ್ಯರ ಉದ್ಗ್ರಂಥಗಳನ್ನು ಕುರಿತು ವ್ಯಾಖ್ಯಾನ

12 ಗೃಹಸ್ಥಾಶ್ರಮಿಯಾದವನು ನಿತ್ಯವೂ ಎರಡು ಹೊತ್ತಿನಲ್ಲಿಯೂ ನಡೆಸಬೇಕಾದ ಧಾರ್ಮಿಕವಿಧಿ, ಹವನ.



ಮಾಡುವುದೂ, ಗ್ರಂಥ ರಚನೆ ಮಾಡುವುದೂ ಮುಖ್ಯವಲ್ಲ. ಆ ತತ್ತ್ವಗಳ ಅನುಷ್ಠಾನ ಮುಖ್ಯವೆಂಬುದೇ ಗುರುಗಳ ಅಭಿಪ್ರಾಯವಾಗಿತ್ತು. ಶ್ರದ್ಧೆಯಿಂದ ಮತತತ್ತ್ವಗಳ ಪರಿಪಾಲನೆ ನಡೆಯಬೇಕೆಂದು ಗುರುವರ್ಯರು ಬೋಧಿಸುತ್ತಿದ್ದರು.

ತಾನು ಹೇಳಿದುದನ್ನು ತಾನೇ ಆಚರಿಸದೇ ಇತರರಿಗೆ ಉಪದೇಶ ಮಾಡುವುದು ಆತ್ಮದ್ರೋಹಕಾರ್ಯವಲ್ಲವೇ? ತಾನು ಯಾವ ತತ್ತ್ವವನ್ನು ನಂಬಿರುವನೋ ಅದನ್ನು ಕಟ್ಟುನಿಟ್ಟಾಗಿ ಪಾಲಿಸಿ ಸ್ವಾನುಭವಕ್ಕೆ ತಂದುಕೊಂಡು ಆ ಬಳಿಕ ಬೇರೆಯವರಿಗೆ ಅದರ ಮಹತ್ವ ಕುರಿತು ಹೇಳಲಿ. ಆಗ ಆ ಮಾತುಗಳಿಗೆ ತೂಕವಿರುತ್ತದೆ. ಅದು ಬಿಟ್ಟು ಬರಿಯ ಒಣ ಉಪದೇಶಗಳಿಂದ ಆಗುವ ಪ್ರಯೋಜನವೇನು?

ಅದ್ವೈತವೇ ಲೋಕತಾರಕವಾಗಿದ್ದರೂ ಇತರ ಮತತತ್ತ್ವಗಳ ಖಂಡನೆ, ನಿಂದನೆ, ಟೀಕೆ ಇತ್ಯಾದಿಗಳು ಗುರುವರ್ಯರಿಗೆ ನೋವುಂಟುಮಾಡುತ್ತಿದ್ದವು. ಅವರು ಅನ್ಯಮತ ಸಹಿಷ್ಣುವೂ, ಎಲ್ಲರಲ್ಲಿಯೂ ಸಮಾನ ವಿಶ್ವಾಸವುಳ್ಳವರೂ ಆಗಿದ್ದರು. ಅವರ ಆಪ್ತಶಿಷ್ಯರಾಗಿ ಅವರಿಂದ ಉಪದೇಶಗಳನ್ನೂ, ಬುದ್ಧಿವಾದಗಳನ್ನೂ ಪಡೆದವರಲ್ಲಿ ವೈಷ್ಣವರೂ, ಶ್ರೀವೈಷ್ಣವರೂ, ಅನೇಕ ಹಿಂದುವೇತರರೂ ಇದ್ದರು. ಪ್ರತಿಯೊಬ್ಬನಿಗೂ ತನ್ನ ಮತವೇ ಶ್ರೇಷ್ಠವೆಂಬ ನಂಬಿಕೆಯಿದ್ದರೂ ಸಹ ತನ್ನ ಮತದಲ್ಲಿರತಕ್ಕ ಪ್ರೇಮಾದರ ಭಾವನೆಗಳು, ಇತರ ಮತಗಳಲ್ಲಿ ದ್ವೇಷಾಸೂಯೆಗಳನ್ನು ಮೂಡಿಸಬೇಕಾಗಿಲ್ಲ. ತನ್ನ ಮತವನ್ನು ಇತರರು ನಿಂದಿಸಿದರೆ, ತನ್ನ ಮತದ ಅಗ್ಗಳಿಕೆಯನ್ನು ತೋರಿಸಿಕೊಡಬಹುದೇ ವಿನಾ ಅನ್ಯಮತಗಳ ದೋಷವನ್ನೆತ್ತಿ ತೋರಿಸಿ ಟೀಕಿಸುವುದರಿಂದ ಪ್ರಯೋಜನವಿಲ್ಲ. ಇತರ ಮತಗಳ, ಇತರ ತತ್ತ್ವಗಳ, ಬೇರೆಯ ಮತಗಳ, ಇತರ ವ್ಯಕ್ತಿಗಳ ಟೀಕೆ, ಆರೋಪ, ನಿಂದೆಗಳನ್ನು ಗುರುವರ್ಯರು ಸರ್ವಥಾ ಒಪ್ಪುತ್ತಿರಲಿಲ್ಲ. ಇವೆಲ್ಲವೂ ಧರ್ಮಾಚರಣೆಗೆ ವಿರುದ್ಧವೆಂದು ಸ್ಪಷ್ಟವಾಗಿ ತಿಳಿಯಹೇಳುತ್ತಿದ್ದರು.

ಅದ್ವೈತ ಶಾಸ್ತ್ರದ ಉದ್ದಾಮ ಪಂಡಿತರೊಬ್ಬರು, ದ್ವೈತಮತ ಖಂಡನೆಯ ಗ್ರಂಥವೊಂದನ್ನು ರಚಿಸಿದರು. ಅವರು ಕೇವಲ ದ್ವೈತಮತವನ್ನು ಟೀಕಿಸಲು ಆ ಗ್ರಂಥವನ್ನು ರಚಿಸಿರಲಿಲ್ಲ. ಅದ್ವೈತ ವೇದಾಂತವನ್ನು ಟೀಕಿಸಿ, ದ್ವೈತಮತದ ಸ್ವಾಮಿಗಳೊಬ್ಬರು ರಚಿಸಿದ್ದ ಪುಸ್ತಕಕ್ಕೆ ಉತ್ತರವಾಗಿ ಆ ಗ್ರಂಥವನ್ನು ರಚಿಸಿ ದ್ವೈತಮತ ಖಂಡನೆ ಮಾಡಿದ್ದರು. ಅದು ಸ್ವಯಂಸ್ಫೂರ್ತಿಯಿಂದ ರಚಿಸಲ್ಪಡದೇ ಪ್ರಚೋದನೆಯಿಂದ ರಚಿಸಿದುದಾಗಿತ್ತು. ಆ ವಿದ್ವಾಂಸರು ಗುರುಗಳಲ್ಲಿ ಆ

ಗ್ರಂಥವನ್ನು ತಂದರು. ಆದರೆ ಗುರುಗಳು ಬಹಳ ನೋವಿನಿಂದ **“ಜೀವಿತದ ಗುರಿಯನ್ನು ತಲುಪಲು ಇಂತಹ ಗ್ರಂಥಗಳು ಮಾರ್ಗದರ್ಶಿಗಳೆಂದು ಶ್ರೀಶಂಕರ ಭಗವತ್ಪಾದರು ಎಲ್ಲಾದರೂ ಹೇಳಿದ್ದಾರೆಯೇ? ಇಂತಹ ಕಾರ್ಯದಲ್ಲಿ ನಿಮ್ಮ ಶಕ್ತಿಯನ್ನೂ, ಕಾಲವನ್ನೂ ಏಕೆ ವ್ಯರ್ಥಮಾಡಿದಿರಿ? ದ್ವೇಷದಿಂದ ಮೂಡಿದ ಈ ಗ್ರಂಥವು ದ್ವೇಷವನ್ನೇ ಪ್ರಚೋದಿಸುವುದಲ್ಲವೇ? ಶ್ರೀಶಂಕರ ಭಗವತ್ಪಾದರು ರಾಗದ್ವೇಷಗಳನ್ನು ಸಂಪೂರ್ಣವಾಗಿ ವರ್ಜಿಸಬೇಕೆಂದು ಉಪದೇಶಿಸಿರುವಾಗ ನೀವು ಅವುಗಳಿಗೂ ಧಾರ್ಮಿಕ ಕ್ಷೇತ್ರದಲ್ಲಿ ಸ್ಥಾನಕೊಡಲು ಯತ್ನಿಸುತ್ತಿದ್ದೀರಿ. ಇದು ಸರಿಯೇ?”**ಎಂದು ಆ ವಿದ್ವಾಂಸರಿಗೆ ಹಿತವಚನಗಳನ್ನು ನೀಡಿದರು.

ಅವರಂತೆಯೇ ಮತ್ತೊಬ್ಬ ಭಕ್ತರು –ಉತ್ತರದೇಶದವರು– ತಮ್ಮದೇ ಸರ್ವೋತ್ತಮ ಮತವೆಂದೂ ಚತುರಾಮ್ನಾಯ ಪೀಠಗಳು ಶಿಷ್ಯಮಠಗಳೆಂದೂ ಪ್ರಚಾರ ಮಾಡುತ್ತಿದ್ದ ಸ್ಮಾರ್ತ ಮತವೊಂದರ ಪೊಳ್ಳುವಾದವನ್ನು ವಿಮರ್ಶಿಸಿ, ಖಂಡಿಸಿ ಪುಸ್ತಕವೊಂದನ್ನು ರಚಿಸಿದ್ದರು. ಗುರುಗಳ ಬಳಿ ಅದನ್ನವರು ತಂದಾಗ, ಶ್ರೀಗಳವರು ಅದನ್ನು ಕಣ್ಣೆತ್ತಿಯೂ ನೋಡಲಿಲ್ಲ. “ಅವರು ಏನಾದರೂ ಬರೆದುಕೊಳ್ಳಲಿ. ನಿನ್ನ ಆತ್ಮಸಾಧನೆಗೆ ಇಂತಹ ಪ್ರಯತ್ನ ಅನಗತ್ಯ” ಎಂದು ಆತನಿಗೆ ಬುದ್ಧಿಮಾತು ಹೇಳಿಕಳುಹಿಸಿದರು.

ಅನ್ಯರ ಮನಸ್ಸಿಗೆ ನೋವಾಗುವಂತೆ ಸಹ ವರ್ತಿಸದ ಗುರುಗಳು ಒಂದು ಮತವನ್ನೇ ಖಂಡಿಸಿ ರಚಿಸಿದ ಗ್ರಂಥವನ್ನು ಒಪ್ಪುವರೇ? ಅದರಿಂದ ಎಷ್ಟು ಮಂದಿಯ ಮನಸ್ಸು ನೋಯುವುದಿಲ್ಲ? ಮನುಷ್ಯನು ಯಾವ ಕೆಲಸವನ್ನೇ ಮಾಡಿದರೂ, ಐಹಿಕ ಆಮುಷ್ಮಿಕ ಪ್ರಯೋಜನವಿರಬೇಕು. ಇಂತಹ ಮತಖಂಡನೆಯ ಗ್ರಂಥಗಳಿಂದ ಇಹಕ್ಕೆ ಧಾರಾಳವಾಗಿ ದ್ವೇಷ, ವಿದ್ವೇಷಗಳ ಪ್ರತಿಫಲ ದೊರೆತರೆ ಪರಕ್ಕೆ ದೊರೆಯುವುದು ಅತೃಪ್ತಿ, ಅಶಾಂತಿಗಳು ಮಾತ್ರ.

* * *



# ೨೬. ಜಗದ್ಗುರು ಎಂದರೆ ಯಾರು?

ಶೃಂಗೇರಿಯ ಪೀಠಾಚಾರ್ಯರನ್ನು ಜಗದ್ಗುರು ಎಂಬ ಗೌರವಸೂಚಕವಾದ ಬಿರುದಿನಿಂದ ಸಂಬೋಧಿಸುವುದು ಶ್ರೀಮದಾದಿಶಂಕರರ ಕಾಲದಿಂದ ವಾಡಿಕೆಯಾಗಿದೆ. ಶ್ರೀಚಂದ್ರಶೇಖರ ಭಾರತೀ ಮಹಾಸ್ವಾಮಿಗಳಿಗೆ 'ಯೋಗಾನುಷ್ಠಾನನಿಷ್ಠ' ಎಂಬ ಸಂಬೋಧನೆಯು ಹೇಗೆ ಸಾರ್ಥಕವಾಗಿತ್ತೋ ಹಾಗೆಯೇ ಜಗದ್ಗುರುವೆಂಬ ಸಂಬೋಧನೆಯೂ ಸಹ ಸಾರ್ಥಕವಾಗಿತ್ತು. **ಜಗದ್ಗುರು ಎಂದರೆ ಜಗತ್ತಿಗೇ ಗುರು ಎಂದರ್ಥ. ಜಗತ್ತಿನಲ್ಲಿರುವ ಯಾವ ಮತಾನುಯಾಯಿಯೇ ಆಗಲಿ, ಉಪದೇಶಕ್ಕಾಗಿ ಬಂದಾಗ ಆತನಿಗೆ ಆಯಾ ಮತಾನುಸಾರವಾಗಿ ಉಪದೇಶವನ್ನಿತ್ತು, ಆತ ತನ್ನ ಮತದ ನೀತಿ, ನಿಯಮ, ತತ್ತ್ವಗಳಿಗನುಸಾರವಾಗಿ ಬೆಳಕನ್ನು ಕಾಣಲು ಸಹಾಯ ಮಾಡುವವರು ಮತ್ತು ಮಾರ್ಗದರ್ಶನ ಮಾಡುವವರೇ ಜಗದ್ಗುರು.** ಕತ್ತಲನ್ನು ನಾಶಪಡಿಸಿ, ಬೆಳಕನ್ನು ನೀಡುವವರು ಗುರು. ಶ್ರೀಚಂದ್ರಶೇಖರ ಭಾರತಿಯವರಲ್ಲಿ ಬೆಳಕಿಗಾಗಿ ಬಂದವರು ತಮ್ಮ ತಮ್ಮ ಮತದ ನೀತಿನಿಯಮಗಳ ಆಯಕಟ್ಟಿನಲ್ಲಿಯೇ ಬೆಳಕನ್ನು ಪಡೆಯುತ್ತಿದ್ದರು. ಪ್ರತಿವ್ಯಕ್ತಿಯೂ ಅವನು ಯಾವ ಮತದಲ್ಲಿ ಜನಿಸಿರುವನೋ, ಆ ಮತದಲ್ಲಿಯೇ ಗುರಿಯನ್ನು ಅನುಸರಿಸುವಂತೆ ಮಾರ್ಗದರ್ಶನ ಮಾಡುವುದು ಗುರುದೇವರ ವೈಶಿಷ್ಟ್ಯವಾಗಿತ್ತು. ವೈಷ್ಣವನನ್ನು ಸ್ಮಾರ್ತನಾಗು ಎಂದಾಗಲೀ, ಕ್ರೈಸ್ತನನ್ನು ಹಿಂದುವಾಗು ಎಂದಾಗಲೀ ಅವರು ಹೇಳುತ್ತಿರಲಿಲ್ಲ. ಹಾಗೆಯೇ ಪರಮತಕ್ಕೆ ಸೇರುವ ಇಚ್ಛೆಯನ್ನು ಹೊಂದಿದವರೂ ಸಹ ಗುರುದೇವರ ಅನುಗ್ರಹದಿಂದ ತಮ್ಮ ಮತಗಳಲ್ಲಿಯೇ ಶ್ರದ್ಧೆ ನಂಬಿಕೆಗಳನ್ನು ಪಡೆದು ಕೃತಜ್ಞತೆಯಿಂದ ಹಿಂದಿರುಗುತ್ತಿದ್ದರು.

ಯಾವ ಮತಧರ್ಮದವರೇ ಆಗಲಿ, ಯಾವ ವರ್ಣದವರೇ ಆಗಿರಲಿ ಗುರುದೇವರಲ್ಲಿ ಬಂದಾಗ ತಮ್ಮ ಅರ್ಹತೆಗೆ ತಕ್ಕಂತೆ ಉಪದೇಶ ಪಡೆಯುತ್ತಿದ್ದರು. ಆಯಾ ಮತದ ಆಚಾರ್ಯರು ಏನನ್ನು ಉಪದೇಶಿಸಿದ್ದಾರೆಯೋ ಅದನ್ನೇ ಗುರುದೇವರು ಅವರಿಗೆ ಉಪದೇಶಿಸುತ್ತಿದ್ದರು. ವೈಷ್ಣವ, ಶ್ರೀವೈಷ್ಣವ, ಶೈವರು ತಮ್ಮ ಪಂಗಡದಲ್ಲಿ ಶ್ರದ್ಧೆ, ನಂಬಿಕೆಗಳನ್ನು ಕಳೆದುಕೊಂಡು ಸಂಶಯ ನಿವೃತ್ತಿಗೆಂದು ಗುರುಗಳ ಬಳಿ ಬಂದಾಗ, ಗುರುಗಳು ಅವರಿಗೆ ಸೂಕ್ತವಾಗಿ ಉಪದೇಶವಿತ್ತು ಅವರೆಲ್ಲರೂ ತಂತಮ್ಮ ಮತಗಳಲ್ಲಿಯೇ ಬೆಳಕು ಕಾಣಲು ಮತ್ತು ಮುಕ್ತಿಮಾರ್ಗ ಪಡೆಯಲು ದಾರಿ ತೋರುತ್ತಿದ್ದರು.

ಒಮ್ಮೆ ಶಿವಮೊಗ್ಗೆಯಿಂದ ಹಲವಾರು ಜನ ಭಕ್ತರು ಗುರುದೇವರ ದರ್ಶನಕ್ಕಾಗಿ ಶೃಂಗೇರಿಗೆ ಬಂದರು. ಎಲ್ಲರೂ ತುಂಗಾನದಿಯಲ್ಲಿ ಮಿಂದು ಅವರವರ ಮತಧರ್ಮಕ್ಕೆ ತಕ್ಕಂತೆ ಸಂಧ್ಯಾವಂದನೆ, ಪ್ರಾರ್ಥನೆಗಳನ್ನು ನೆರವೇರಿಸಿ ಶ್ರೀ ಶಾರದಾಮ್ಮನವರ ದರ್ಶನ ಮಾಡಿದರು. ಅನಂತರ ನರಸಿಂಹವನಕ್ಕೆ ತೆರಳಿ ಶ್ರೀಗುರುದೇವರ ದರ್ಶನಕ್ಕೆಂದು ಕಾದು ಕುಳಿತರು. ಆ ಗುಂಪಿನಲ್ಲಿದ್ದವರಲ್ಲಿ ಶ್ರೀ ಎಸ್.ವಿ. ಕೃಷ್ಣಮೂರ್ತಿರಾಯರೂ ಒಬ್ಬರು. ಗುರುದೇವರು ಆಗಮಿಸಿ ಎಲ್ಲರ ಭಕ್ತಿ, ಶ್ರದ್ಧೆಯನ್ನು ಹಸನ್ಮುಖದಿಂದ ಸ್ವೀಕರಿಸಿದರು. ಪ್ರತಿಯೊಬ್ಬರಿಗೂ ಗುರುದೇವರ ದರ್ಶನದಿಂದ ಹರ್ಷ, ಸಂತೋಷಗಳೂ, ಅವರು ತಮ್ಮವರೇ ಎಂಬ ಆತ್ಮೀಯ ಭಾವನೆಯೂ ಮೂಡಿದವು. ತೀರ್ಥ ವಿನಿಯೋಗ ಮಾಡುತ್ತಿದ್ದ ಗುರುಗಳು ಪ್ರತಿಯೊಬ್ಬರ ಯೋಗಕ್ಷೇಮ ವಿಚಾರಿಸಿ ಒಂದೆರಡು ಮಾತುಗಳಲ್ಲಿಯೇ ಅನುಗ್ರಹಿಸುತ್ತಿದ್ದರು. ಕೃಷ್ಣಮೂರ್ತಿರಾಯರ ಸರದಿ ಬಂದಾಗ ರಾಯರು ತಲೆಬಾಗಿ ನಮಸ್ಕರಿಸಿ ಕೈಚಾಚಿದರು. ಗುರುದೇವರು ತಲೆಯೆತ್ತಿ ಅವರನ್ನೊಮ್ಮೆ ನೋಡಿ ಮೆಲ್ಲನೆ "ತಾವೇನು ಸ್ಮಾರ್ತ ಸಂಪ್ರದಾಯಕ್ಕೆ ಸೇರಿದವರೋ?" ಎಂದರು.

ರಾಯರ ಮೈ ಬೆವರಿ ಮುಖದಲ್ಲಿ ತಪ್ಪುಮಾಡಿದ ಭಾವನೆ ವ್ಯಕ್ತವಾಯಿತು. "ಅಲ್ಲ, ನಾನು ಸ್ಮಾರ್ತ ಸಂಪ್ರದಾಯಕ್ಕೆ ಸೇರಿದವನಲ್ಲ" ಎಂದರು. ರಾಯರು ಮಾಧ್ವ ಸಂಪ್ರದಾಯಕ್ಕೆ ಸೇರಿದವರಾಗಿದ್ದು ಆ ದಿನ ತಮ್ಮ ಸ್ಮಾರ್ತ ಮಿತ್ರರ ಜೊತೆಯಲ್ಲಿ ಸೇರಿ ತಾವೂ ಭಸ್ಮಧಾರಣೆ ಮಾಡಿಕೊಂಡು ಬಂದುಬಿಟ್ಟಿದ್ದರು. ಗುರುದೇವರು ನೀವು ಭಸ್ಮ ಧರಿಸಿ ಬಂದರೆ ನನಗೆ ಹತ್ತಿರವಾಗುವುದಿಲ್ಲ, ಮುದ್ರೆ, ಗೋಪೀಚಂದನ ಧರಿಸಿ ಬಂದರೆ ದೂರವೂ ಆಗುವುದಿಲ್ಲ. ನಿಮ್ಮ ಸಂಪ್ರದಾಯವನ್ನು ನೀವು ಪಾಲಿಸಬೇಕಾದುದು ಧರ್ಮ. ಅದೇ ನಿಮಗೆ ಶ್ರೇಯಸ್ಕರ. ಇತರರನ್ನು ಮೆಚ್ಚಿಸುವುದಕ್ಕಾಗಿ ನೀವು ಭಸ್ಮಧಾರಣೆ ಮಾಡಿಕೊಳ್ಳಬಾರದು. ನಿಮ್ಮ ಮತಧರ್ಮದಂತೆಯೇ ನಡೆಯಿರಿ" ಎಂದು ಮೃದುವಾಗಿ ನುಡಿದರು. ರಾಯರು ಈ ಉಪದೇಶದಿಂದ ತುಂಬಾ ಪ್ರಭಾವಿತರಾದರು. ಶ್ರೀಗುರುದೇವರ ಉಪದೇಶವನ್ನು ಆಗಾಗ ಸ್ಮರಿಸಿಕೊಳ್ಳುತ್ತಿದ್ದರು. ಗುರುದೇವರ ಸಮದೃಷ್ಟಿ, ಪರಮತಗಳಲ್ಲಿರುವ ಗೌರವಭಾವನೆ, ತಪ್ಪುಮಾಡಿದವರನ್ನು ತಿದ್ದಿ ಸನ್ಮಾರ್ಗ ತೋರಿಸಿಕೊಡುವ ರೀತಿ ಇವುಗಳಿಂದ ಬಹುಜನ ಪ್ರಭಾವಿತರಾಗಿದ್ದರು.[13]

ಶ್ರೀವೈಷ್ಣವರೊಬ್ಬರು ಬ್ರಹ್ಮಸೂತ್ರ ಭಾಷ್ಯವನ್ನು ಕಲಿಯಲೆಂದು ಶೃಂಗೇರಿಗೆ

13 ಮೈಸೂರಿನ ಶ್ರೀವೈಷ್ಣವ ಭಕ್ತರೊಬ್ಬರು ಭಸ್ಮ ಧರಿಸಿ ಬಂದಾಗ ಶ್ರೀ ಅಭಿನವ ವಿದ್ಯಾತೀರ್ಥರು ಹೀಗೆಯೇ ಅವರಿಗೆ ಬುದ್ಧಿಮಾತು ಹೇಳಿದ್ದರು.



ಬಂದಾಗ ಅವರಿಗೆ ಶ್ರೀರಾಮಾನುಜರ ಶ್ರೀಭಾಷ್ಯವನ್ನು ಕಲಿಯುವಂತೆ ಪ್ರೇರೇಪಿಸಿ, ಅದರಂತೆ ಜೀವನವನ್ನು ರೂಪಿಸಿಕೊಳ್ಳಬೇಕೆಂದು ಸಲಹೆಯಿತ್ತಿದ್ದರು.

ಹಾಗೆಯೇ ಅನ್ಯಮತೀಯರೂ ಸಹ ಆಚಾರ್ಯರಿಂದ ಸಲಹೆ ಸಹಾಯಗಳನ್ನು ಪಡೆದು ಹೆಚ್ಚಿನ ಶ್ರದ್ಧೆ, ಆಸ್ಥೆಗಳಿಂದ ತಮ್ಮ ಮತಗಳಲ್ಲಿ ಸಾಧನೆ ಮಾಡುತ್ತಿದ್ದರು. ಗುರುದೇವರು ಯಾವ ಮತವನ್ನೂ ಹಳಿಯುತ್ತಿರಲಿಲ್ಲ. ದೂಷಿಸುತ್ತಿರಲಿಲ್ಲ. ಕ್ಷುಲ್ಲಕವಾಗಿ ಕಾಣುತ್ತಿರಲಿಲ್ಲ. **"ಏಕಂ ಸತ್ ವಿಪ್ರಾಃ ಬಹುಧಾ ವದಂತಿ"** ಎಂಬುದನ್ನು ತಮ್ಮಲ್ಲಿಗೆ ಬಂದವರಿಗೆ ಮನದಟ್ಟು ಮಾಡಿಕೊಡುತ್ತಿದ್ದರು. ಜಗದ್ಗುರುವಿನಲ್ಲಿರಬೇಕಾದ ಅಪಾರವಾದ ಜ್ಞಾನ, ಆಳವಾದ ಅನುಭವ, ಹೃದಯ ವೈಶಾಲ್ಯ, ಪರಮತ ಸಹಿಷ್ಣುತೆ ಮುಂತಾದವು ಆಚಾರ್ಯರಲ್ಲಿ ನೆಲಸಿ ಸಾರ್ಥಕತೆ ಪಡೆದಿದ್ದವು.

ಒಮ್ಮೆ ಐರೋಪ್ಯ ಗೃಹಸ್ಥರೊಬ್ಬರು ಗುರುಗಳ ದರ್ಶನಕ್ಕೆ ಬಂದರು. ಆತ ವೇದಾಂತದ ಬಗ್ಗೆ ಹಲವಾರು ಪುಸ್ತಕಗಳನ್ನು ಓದಿ ಹಿಂದೂ ಮತದ ವಿಚಾರವಾಗಿ ಬಹಳ ಆಸಕ್ತಿ ತಳೆದಿದ್ದರು. ಅವರಿಗೂ, ಅವರ ಹಲವಾರು ಜನ ಮಿತ್ರರಿಗೂ ತಾವು ಹಿಂದೂಗಳಾಗಿ ಪರಿವರ್ತನೆ ಹೊಂದಬೇಕೆಂಬ ಅಪೇಕ್ಷೆಯೂ ಇತ್ತು. ತಮ್ಮ ಆಸೆಯನ್ನು ಈಡೇರಿಸಿಕೊಳ್ಳಲು ಗುರುದೇವರ ಸಹಾಯ ದೊರಕಬಹುದೆಂಬ ನಿರೀಕ್ಷೆಯೂ ಅವರಿಗೆ ಇತ್ತು.

ಗುರುದೇವರು ಅವರ ಮಾತುಗಳನ್ನು ಆಲಿಸಿ "ಹಿಂದೂಮತವು ಬುದ್ಧಿಯುಳ್ಳವರನ್ನೆಲ್ಲಾ ಆಕರ್ಷಿಸುತ್ತದೆಯೆಂಬುದು ವಾಸ್ತವ. ಆದರೆ ಹಿಂದೂ ಮತದಲ್ಲಿ ಸಾಮಾಜಿಕ ಮತ ಪರಿವರ್ತನೆಗೆ ಅವಕಾಶವಿಲ್ಲ. ಅಂತಹ ಮತ ಪರಿವರ್ತನೆಯ ಅಗತ್ಯವೂ ಇಲ್ಲ. ಏಕೆಂದರೆ ಪ್ರಪಂಚದಲ್ಲಿ ಇರುವವರೆಲ್ಲಾ ಈ ಸನಾತನ ಧರ್ಮಕ್ಕೆ ಸೇರಿದವರೇ ಆಗಿದ್ದಾರೆ. ಹಿಂದುವೆನಿಸಿಕೊಳ್ಳಲು ಇಷ್ಟ ಪಡುವವನೂ, ಇಷ್ಟ ಪಡದವನೂ ಎಲ್ಲರೂ ಹಿಂದುಗಳೇ ಆಗಿದ್ದಾರೆ" ಎಂದು ವಿವರಿಸಿದರು.

ಆ ಗೃಹಸ್ಥರು "ಸ್ವಾಮಿ, ಪ್ರಪಂಚದಲ್ಲಿ ಇರುವವರೆಲ್ಲರೂ ಹಿಂದೂಗಳೇ ಎಂದು ತಾವು ಹೇಳಿಬಿಟ್ಟಿರಿ. ಆದರೆ ಪ್ರಪಂಚದಲ್ಲಿ ಹಿಂದೂಮತವಲ್ಲದೇ ಅನೇಕ ಮತಗಳಿವೆಯಲ್ಲಾ" ಎಂದರು.

ಗುರುದೇವರು "ಪ್ರಪಂಚದ ಇತರ ಮತಗಳೆಲ್ಲಾ ಹಿಂದೂಧರ್ಮದ ನಾನಾ ರೂಪಗಳು. ಅಧಿಕಾರ ಅರ್ಹತೆಗೆ ತಕ್ಕಂತೆ ಮತಗಳಿವೆ. ಎಲ್ಲೆಲ್ಲಿಯೂ ಕಂಡುಬರುವ ಮಾನವನ ಮನೋಧರ್ಮದ ವೈವಿಧ್ಯತೆಯೇ, ವಿವಿಧ ಮತಗಳ ಅವಶ್ಯಕತೆಯನ್ನು ನಿಶ್ಚಯಿಸಿದೆ. ಇಂತಹ ಮತ ಉತ್ಕೃಷ್ಟ, ಇಂತಹುದು

ನಿಕೃಷ್ಟ ಎಂದು ನಿಶ್ಚಯಿಸಲು ಪ್ರಯತ್ನಮಾಡುವುದು ತಪ್ಪು. ಪ್ರತಿಯೊಂದು ಮತವೂ ಆಯಾ ಕಾಲದೇಶಕ್ಕನುಗುಣವಾಗಿ ಸೃಷ್ಟಿಯಾಗಿದೆ. ಮತಮತಗಳ ತುಲನೆಯೂ ತಪ್ಪು. ನಿಮ್ಮ ನಿಮ್ಮ ಹಿರಿಯರು ತೋರಿಸಿಕೊಟ್ಟಿರುವ ಮಾರ್ಗದಲ್ಲಿ ನೀವು ನಡೆಯಬೇಕು.” ಎಂದರು.

ಆ ಗೃಹಸ್ಥರು “ನನ್ನ ಬುದ್ಧಿಯನ್ನೆಲ್ಲಾ ಉಪಯೋಗಿಸಿ ಕ್ರೈಸ್ತಮತವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಪಟ್ಟೆ. ಅನೇಕ ಸಂದೇಹಗಳು ನನ್ನನ್ನು ಬಾಧಿಸಿದವು. ನನ್ನ ಸಂಶಯವನ್ನು ನಿವಾರಣೆ ಮಾಡುವವರಾರೂ ದೊರೆಯಲಿಲ್ಲ. ಆದ್ದರಿಂದ ನಾನು ಅನ್ಯಮತಗಳನ್ನು ತಿಳಿಯಲು ಪ್ರಯತ್ನಪಟ್ಟೆ” ಎಂದರು.

“ನೀವು ವ್ಯಾಪಾರ ವ್ಯವಹಾರಗಳಿಗಾಗಿ ಸಹಸ್ರಾರು ಮೈಲಿ ಪ್ರಯಾಣ ಮಾಡುತ್ತೀರಿ. ಕಷ್ಟಪಡುತ್ತೀರಿ. ಆದರೆ ನಿಮ್ಮ ಧರ್ಮಗುರುವೇ ನಿಮ್ಮನ್ನು ಹುಡುಕಿಕೊಂಡುಬರಬೇಕೆಂದು ಅಪೇಕ್ಷಿಸುತ್ತೀರಿ. ನೀವೇ ಶ್ರದ್ಧೆಯಿಂದ, ಕಳಕಳಿಯಿಂದ ಹುಡುಕಿದರೆ ಸರಿಯಾದ ಗುರುಗಳು ಸಿಕ್ಕಿಯೇ, ಸಿಗುತ್ತಾರೆ. ನಿಮಗೆ ನೆರವಾಗುತ್ತಾರೆ. ಕ್ರೈಸ್ತಮತದಲ್ಲಿ ಅಂತಹ ಗುರುಗಳು ಇದ್ದೇ ಇರಬೇಕು” ಎಂದು ಬೋಧಿಸಿದರು ಗುರುಗಳು.

ಆತನು ಅತ್ಯಂತ ವಿನೀತನಾಗಿ “ಸ್ವಾಮಿ, ತಮ್ಮ ಈ ಬೋಧನೆಗೆ ನಾನು ಎಷ್ಟು ವಂದಿಸಿದರೂ ಸಾಲದು. ತಮ್ಮ ಸನ್ನಿಧಿಯಿಂದ ಹಿಂತಿರುಗುವಾಗ ನಾನು ಉತ್ತಮ ಕ್ರೈಸ್ತನಾಗುವುದರಲ್ಲಿ ಮೊದಲಿಗಿಂತಲೂ ಹೆಚ್ಚು ಶ್ರದ್ಧಾವಂತನಾಗುವೆನೆಂದು ಗ್ರಹಿಸಿರಲಿಲ್ಲ. ಕ್ರೈಸ್ತ ಧರ್ಮೀಯರನ್ನು ಶ್ರೇಷ್ಠ ಕ್ರೈಸ್ತನನ್ನಾಗಿಯೂ, ಹಿಂದೂ ಧರ್ಮೀಯನನ್ನು ಉತ್ತಮ ಹಿಂದುವನ್ನಾಗಿಯೂ ಮಾಡುವುದೇ ತಮ್ಮಂತಹ ಧರ್ಮಬೋಧಕರ ಉದ್ದೇಶವಾಗಿದ್ದರೆ, ತಮ್ಮ ಸನಾತನ ಧರ್ಮವು ವಿಶ್ವವ್ಯಾಪಕವಾದುದೆಂಬುದರಲ್ಲಿ ಸಂದೇಹವೇ ಇಲ್ಲ” ಎಂದು ಮನದುಂಬಿ ನುಡಿದನು.

ಹೀಗೆ ಶ್ರೀಗುರುದೇವರು ತಮ್ಮಲ್ಲಿ ಯಾರೇ ಬರಲಿ, ವೈಷ್ಣವ, ಶ್ರೀವೈಷ್ಣವ, ಸ್ಮಾರ್ತ, ಕ್ರೈಸ್ತ, ಮುಸಲ್ಮಾನ ಮುಂತಾದವರೆಲ್ಲರಿಗೂ ಅವರವರ ಮತತತ್ತ್ವಗಳ ದಿಗ್ದರ್ಶನ ಮಾಡಿಸುತ್ತಿದ್ದರು. ಅವರವರ ಮತದಲ್ಲಿ ಶ್ರದ್ಧೆ, ಭಕ್ತಿಗಳನ್ನು ಮೂಡಿಸುತ್ತಿದ್ದರು. ಜಗದ್ಗುರು ಎಂಬ ಅಭಿದಾನಕ್ಕೆ ತಕ್ಕಂತೆ ಜಗತ್ತಿನಲ್ಲಿರುವ ಯಾವ ಮತದವರು ಬಂದರೂ, ಅವರವರ ಅಧಿಕಾರ, ಅರ್ಹತೆಗೆ ತಕ್ಕಂತೆ ಉಪದೇಶವಿತ್ತು, ಅವರ ಧರ್ಮಸಾಧನೆಗೆ ಸಹಾಯಮಾಡುತ್ತಿದ್ದರು.

* * *



# ೨೭. ಮಾರ್ಗದರ್ಶಕ

ವಿಶ್ವವ್ಯಾಪಿಯಾದ ಹಿಂದೂಧರ್ಮವು ಸಾಧಕನ ಅರ್ಹತೆಗೆ ತಕ್ಕಂತೆ ಆತ್ಮಸಾಕ್ಷಾತ್ಕಾರದ ಮಾರ್ಗವನ್ನೂ, ಅಭ್ಯುದಯದ ಮಾರ್ಗವನ್ನೂ ಸೂಚಿಸುತ್ತದೆ. ಪ್ರತಿಯೊಬ್ಬನೂ ತನ್ನತನ್ನ ಸಂಸ್ಕಾರ, ಯೋಗ್ಯತೆ, ಮನಃಪರಿಪಾಕಗಳಿಗೆ ತಕ್ಕಂತೆ ತನ್ನ ಸಾಧನಮಾರ್ಗವನ್ನು ಅರಸಿಕೊಂಡು ಮುಂದುವರೆಯಬೇಕು. ಈ ಸಾಧನಾ ಮಾರ್ಗದತ್ತ ಕೊಂಡೊಯ್ಯುವವನು ಮತ್ತು ಆ ಸಾಧನಮಾರ್ಗದಲ್ಲಿ ಬರುವ ಎಡರುತೊಡರುಗಳನ್ನು ನಿವಾರಿಸಲು ಸಹಾಯವೆಸಗುವವನು ಗುರು. ನಮಗೆ ಯಾವುದರಲ್ಲಿ ಅರ್ಹತೆಯಿದೆ, ಯೋಗ್ಯತೆಯಿದೆ ಎಂಬುದನ್ನು ನಮಗಿಂತಲೂ ಚೆನ್ನಾಗಿ ಬಲ್ಲವನು ಗುರು. ಜ್ಞಾನ, ಭಕ್ತಿ, ಕರ್ಮ, ಯೋಗ, ವೈರಾಗ್ಯ ಮುಂತಾದ ಅನೇಕ ಮಾರ್ಗಗಳಲ್ಲಿ ಸಾಧನೆಯನ್ನು ಮುಂದುವರೆಸಬೇಕೆಂದು ಸಂಕಲ್ಪಿಸಿದವನು ತನ್ನದೇ ಮಾರ್ಗದಲ್ಲಿ ನಡೆಯಬೇಕೇ ವಿನಾ ತನಗೆ ಅರ್ಹತೆಯಿರದ ಮಾರ್ಗದಲ್ಲಿ ಹೋಗಲು ಅವನಿಗೆ ಅಧಿಕಾರವಿರುವುದಿಲ್ಲ. ಆದರೆ ಈ ರೀತಿಯ ಸೌಲಭ್ಯ ಇತರ ಮತಗಳಲ್ಲಿ, ಇತರ ಮತಾಚಾರ್ಯರ ಬೋಧನೆಗಳಲ್ಲಿ ಕಂಡುಬರುವುದಿಲ್ಲ. ಅಲ್ಲಿ ಅರ್ಹತೆಯ ಪ್ರಶ್ನೆಯಿಲ್ಲ. ಎಲ್ಲರಿಗೂ ಒಂದೇ ಮಾರ್ಗ. ಅದನ್ನು ತ್ಯಜಿಸಿ ಬೇರೆ ಹೋಗಲಾಗುವುದಿಲ್ಲ. ಆದರೆ ಹಿಂದೂ ಧರ್ಮದಲ್ಲಿರುವ ಪ್ರತಿಯೊಬ್ಬರೂ ಸಹ ಭಿನ್ನ ಭಿನ್ನ ಮಾರ್ಗಗಳ ಮೂಲಕ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧ್ಯ.

ಪರಮತೀಯರು ತಮ್ಮಲ್ಲಿ ಉಪದೇಶ ಪಡೆಯಲು ಬಂದಾಗ ಅವರಿಗೆ ತಮ್ಮ ಮತದಲ್ಲಿಯೇ ಬೆಳಕು ಕಾಣುವಂತೆ ಗುರುದೇವರು ಉಪದೇಶಿಸುತ್ತಿದ್ದರೆಂದು ಬಲ್ಲೆವಷ್ಟೆ. ಅವರ ಅಭಿಪ್ರಾಯದಲ್ಲಿ ವಿಶ್ವವ್ಯಾಪಿಯಾದ ಹಿಂದೂಧರ್ಮವು ಸನಾತನವೂ, ಶಾಶ್ವತವೂ, ಅನಂತವೂ ಆಗಿದೆ. **ಜೈನ, ಬೌದ್ಧ, ಕ್ರೈಸ್ತ, ಇಸ್ಲಾಂ ಮತಗಳಿಗಿಂತ ಮೊದಲಿನಿಂದಲೂ ಜಗತ್ತಿನಲ್ಲಿ ವ್ಯಾಪಿಸಿದ್ದುದು ಹಿಂದೂಧರ್ಮವೊಂದೇ. ಆದ್ದರಿಂದ ಜಗತ್ತಿನಲ್ಲಿರುವವರೆಲ್ಲರೂ ಅವರೊಪ್ಪಲಿ, ಬಿಡಲಿ, ಸನಾತನಧರ್ಮಕ್ಕೆ ಸೇರಿದವರಾಗಿಯೇ ಇದ್ದಾರೆ.** ಸನಾತನ ಧರ್ಮದ ತತ್ತ್ವಗಳೇ ಇತರ ಮತಗಳಲ್ಲಿಯೂ ಇರುವುದರಿಂದ ಆ ಮತೀಯರು ಶ್ರದ್ಧೆಯಿಂದ ನಿಷ್ಠೆಯಿಂದ ತಮ್ಮ ಮತಬೋಧನೆಯಂತೆ ನಡೆಯಲೇಬೇಕು. ಬೆಳಕನ್ನು ಕಾಣಬೇಕು. ಅನ್ಯಮತಕ್ಕೆ ಕೈಚಾಚಬಾರದು ಎಂದು ಗುರುಗಳು ತಿಳಿವನ್ನು ಹೇಳುತ್ತಿದ್ದರು.

ಹಿಂದೂಧರ್ಮದಲ್ಲಿಯೇ ಇದ್ದು ಪ್ರತ್ಯೇಕವಾದ ಉಪದೇಶಗಳನ್ನು ಪಡೆದು ಸಾಧನೆಮಾಡಬೇಕೆನ್ನುವವರಿಗೂ ಅಷ್ಟೇ, ಉಪದೇಶವು ಆ ವ್ಯಕ್ತಿಗೆ ಅವಶ್ಯಕವೇ ಎಂದು ಪರೀಕ್ಷಿಸಿ ನಿರ್ಧರಿಸುತ್ತಿದ್ದರು. ತಾವು ನೀಡಿದ ಮಂತ್ರೋಪದೇಶವನ್ನು ಆತನು ಶ್ರದ್ಧೆಯಿಂದ ಪುನಶ್ಚರಣೆ ಮಾಡುತ್ತಾನೆಂಬ ನಂಬಿಕೆ ಬಂದರೆ ಮಾತ್ರ ಉಪದೇಶ ನೀಡುತ್ತಿದ್ದರು. ಅವರು ನೀಡುತ್ತಿದ್ದ ಬೋಧನೆ, ಉಪದೇಶಗಳು ಆ ವ್ಯಕ್ತಿಗೆ ಮಾತ್ರ ಅನ್ವಯವಾಗುತ್ತಿತ್ತು. ಬೇರಾರೂ ಅದನ್ನು ಅನುಷ್ಠಾನ ಮಾಡುವಂತಿರಲಿಲ್ಲ. ಇದಕ್ಕೆ ಕಾರಣ ಅಧಿಕಾರ ಭೇದ. ಮತ್ತೊಬ್ಬ ವ್ಯಕ್ತಿಯು ತಾನು ಅದೇ ಸ್ಥಿತಿಯಲ್ಲಿರುವುದರಿಂದ ತನಗೂ ಆ ಉಪದೇಶವೇ ಅನ್ವಯಿಸುತ್ತದೆಂದು ಭಾವಿಸುವುದು ತಪ್ಪಾಗುತ್ತಿತ್ತು. ಅಂತಹವನಿಗೆ ಬೇರೊಂದು ಮಂತ್ರೋಪದೇಶ ನೀಡುತ್ತಿದ್ದರು. ಬಾಯಾರಿದವನು ತಣ್ಣೀರನ್ನು ಕುಡಿದು ದಾಹ ಶಮನ ಮಾಡಿಕೊಳ್ಳುತ್ತಾನೆಂದು ಜ್ವರದಿಂದ ಬಳಲುವವನಿಗೂ ಬಾಯಾರಿಕೆ ಇರುತ್ತದೆಂದು ತಣ್ಣೀರು ಕೊಡುವುದುಂಟೆ? ಗುರುಗಳು ವೈಯಕ್ತಿಕ ಮಾರ್ಗದರ್ಶನದಲ್ಲಿ ಹೆಚ್ಚು ನಂಬಿಕೆಯಿಟ್ಟಿದ್ದರೇ ವಿನಾ ಸಾಮೂಹಿಕ, ಸಾರ್ವತ್ರಿಕ ಉಪದೇಶ, ಬೋಧನೆಗಳಿಂದ ದೊರಕುವ ಫಲ ಅತ್ಯಲ್ಪವೆಂದು ತಿಳಿದಿದ್ದರು. ಎಲ್ಲರಿಗೂ ಒಂದೇ ರೀತಿಯ ಉಪದೇಶ ನೀಡುವುದರಿಂದ ಏನೂ ಪ್ರಯೋಜನವಾಗದೆಂದು ಅವರು ಅರಿತಿದ್ದರು. ಮತಪ್ರಸಾರ, ಧರ್ಮಪ್ರಸಾರ ಮಾಡಬಾರದೆಂದಿಲ್ಲ. ಆದರೆ ಸಾಮೂಹಿಕವಾಗಿ ನಡೆವ ಕಾರ್ಯಗಳು ಪರಿಣಾಮಕಾರಿಯಾಗಲಾರವು.ಉಪದೇಶ ನೀಡುವವನಿಗೂ, ತೆಗೆದುಕೊಳ್ಳುವವನಿಗೂ ಪ್ರಯೋಜನಾಗುವುದು ಕಡಿಮೆ.

ಮಂತ್ರೋಪದೇಶಕ್ಕೆಂದು ಯಾರಾದರೂ ಬಂದರೆ ಆತನ ಅರ್ಹತೆ, ಯೋಗ್ಯತೆಗಳನ್ನು ಒರೆ ಹಚ್ಚಿದ ಮೇಲೆಯೇ ಗುರುದೇವರು ಉಪದೇಶ ನೀಡುತ್ತಿದ್ದರೆಂದು ನಾವು ಬಲ್ಲೆವಷ್ಟೆ. ಗುರುಗಳು ಹಾಗೆ ಬಂದ ವ್ಯಕ್ತಿಯ ಒಳಹೊರಗೆಲ್ಲವನ್ನೂ ತಮ್ಮ ದಿವ್ಯದೃಷ್ಟಿಯಿಂದ ಅರಿತುಬಿಡುತ್ತಿದ್ದರು.

ಒಮ್ಮೆ ಹಲವಾರು ಜನ ಪರಸ್ಥಳದಿಂದ ಬಂದವರು ಗುರುಗಳನ್ನು ಸಂದರ್ಶಿಸಿ ಮಂತ್ರೋಪದೇಶಕ್ಕಾಗಿ ಪ್ರಾರ್ಥಿಸಿದರು. ಶ್ರೀಗಳವರು ಪ್ರತಿಯೊಬ್ಬರನ್ನೂ ಪರೀಕ್ಷಿಸಿ ಅವರವರ ಅರ್ಹತೆಗೆ ತಕ್ಕಂತೆ ಉಪದೇಶವೀಯುತ್ತಿದ್ದರು. ಹೀಗೆ ಒಬ್ಬಾತ ಶ್ರೀಗಳಲ್ಲಿ ಬಂದು ತನಗೂ ಉಪದೇಶ ಕೊಡಬೇಕೆಂದು ನಮ್ರನಾಗಿ ಪ್ರಾರ್ಥಿಸಿದ.

“ಮಹಾಸ್ವಾಮಿಯವರು ನನಗೂ ಯಾವುದಾದರೂ ಮಂತ್ರ ಉಪದೇಶಿಸಬೇಕು.”



“ನಿಮಗೆ ಯಾವ ಮಂತ್ರದ ಉಪದೇಶ ಬೇಕು?”

“ಸನ್ನಿಧಾನವು ಯಾವ ಮಂತ್ರ ಉಪದೇಶಿಸಿದರೂ ಸರಿಯೇ, ನಾನು ಸಿದ್ಧನಿದ್ದೇನೆ.”

“ನಿಮ್ಮ ಉಪನಯನ ಕಾಲದಲ್ಲಿ ನಿಮ್ಮ ತಂದೆಯವರಿಂದ ಗಾಯತ್ರೀ ಮಂತ್ರೋಪದೇಶವಾಗಿದೆಯಲ್ಲವೇ?”

“ಹೌದು ಮಹಾಸ್ವಾಮಿ.”

“ನಿಮ್ಮ ತಂದೆ ನಿಮಗೆ ಗಾಯತ್ರಿಯನ್ನಷ್ಟೇ ಅಲ್ಲದೇ ಶಿವ ಪಂಚಾಕ್ಷರಿಯನ್ನೂ ಉಪದೇಶಿಸಿದ್ದಾರೆ.”

“ಹೌದು.”

“ಬೇರೊಬ್ಬ ಗುರುವನ್ನೂ, ಬೇರೊಂದು ಮಂತ್ರವನ್ನೂ ಏಕೆ ಬಯಸುತ್ತೀರಿ? ನಿಮ್ಮ ತಂದೆ ನಿಮಗೆ ಗುರುವಿಗಿಂತಲೂ ಹೆಚ್ಚಾಗಿದ್ದಾರೆ. ಅವರಲ್ಲಿ ವಿಧೇಯರಾಗಿ ನಡೆದುಕೊಂಡು, ಅವರ ಉಪದೇಶವನ್ನು ಶ್ರದ್ಧಾಭಕ್ತಿಗಳಿಂದ ಪರಿಪಾಲಿಸಿ. ನಿಮಗೆ ಕಲ್ಯಾಣವಾಗುತ್ತದೆ” ಎಂದು ಹಿತವಚನ ನೀಡಿದರು ಗುರುಗಳು.

ಗುರುದೇವರು ಸಂಚಾರದಲ್ಲಿದ್ದಾಗ ಅನೇಕರು ಅವರಲ್ಲಿಗೆ ಬಂದು ಮಂತ್ರೋಪದೇಶಗಳನ್ನು ಪಡೆದಿದ್ದರು. ಹೀಗೆ ಬಂದವರಲ್ಲಿ ಗುರುವರ್ಯರು ತಂಗಿದ್ದ ಗ್ರಾಮಕ್ಕೂ, ಗುರುಗಳಿಗೂ ಹೊಸಬರಾದ ವ್ಯಕ್ತಿಯೊಬ್ಬರಿದ್ದರು. ಆತ ಗುರುಗಳ ದರ್ಶನದಿಂದ ಹರ್ಷಿತರಾಗಿ “ಯಾವುದೋ ವ್ಯವಹಾರ ನಿಮಿತ್ತ ಅದೃಷ್ಟವಶಾತ್ ಇಲ್ಲಿಗೆ ಬರಬೇಕಾಯಿತು. ಹಾಗೆಯೇ ತಮ್ಮ ದರ್ಶನಲಾಭವೂ ಆಯಿತು. ಇದು ನನ್ನ ಭಾಗ್ಯವೆಂದೇ ಎಣಿಸುತ್ತೇನೆ” ಎಂದು ನುಡಿದರು. ಆತನ ಪ್ರಾಮಾಣಿಕತೆಯಿಂದ ಹರ್ಷಿತರಾದ ಗುರುಗಳು ಹಸನ್ಮುಖದಿಂದ ಅವರನ್ನು “ನಿಮ್ಮನ್ನು ಭಗವಂತನು ಅನುಗ್ರಹಿಸಲಿ” ಎಂದು ಆಶೀರ್ವದಿಸಿದರು. ಆ ಬಳಿಕ ಆತ ಮುಂದುವರೆದು “ಯಾವುದಾದರೂ ಮಂತ್ರೋಪದೇಶದಿಂದ ನನ್ನನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತೇನೆ. ನನ್ನಲ್ಲಿ ಕೃಪೆ ಮಾಡಬೇಕು” ಎಂದು ನಮ್ರರಾಗಿ ನುಡಿದರು. ಈ ಮಾತುಗಳನ್ನು ಕೇಳಿದ ಕೂಡಲೇ ಗುರುದೇವ ಮುಖದಲ್ಲಿ ಅಸಮಾಧಾನದ ಗೆರೆಗಳು ಮೂಡಿದವು. ಅವರು ಸ್ವಲ್ಪ ಕಟುವಾಗಿ ಕೇಳಿದರು.

“ಮಾತೃ ದೇವೋ ಭವ ಎಂಬ ಉಪನಿಷದ್ವಾಕ್ಯವನ್ನು ಕೇಳಿದ್ದೀರೋ?”

“ಹೌದು, ಕೇಳಿದ್ದೇನೆ” ಆತ ವಿನೀತನಾಗಿ ನುಡಿದ.

“ಅದರ ಮುಂದಿನ ವಾಕ್ಯ ಪಿತೃ ದೇವೋ ಭವ ಎಂಬುದನ್ನೂ

ಕೇಳಿದ್ದೀರೋ?"

"ಅಹುದು, ಕೇಳಿದ್ದೇನೆ" ನಮ್ರವಾಗಿ ಬಂದಿತು ಉತ್ತರ.

"ಅದರ ಮುಂದಿನ ಅಣತಿ ಆಚಾರ್ಯ ದೇವೋ ಭವ ಎಂಬುದನ್ನೂ ಕೇಳಿದ್ದೀರೋ?" ಗುಡುಗಿನಂತೆ ಬಂತು ಪ್ರಶ್ನೆ.

"ಹೌದು ಮಹಾಸ್ವಾಮಿ, ಕೇಳಿದ್ದೇನೆ" ಎಂದು ನುಡಿದನಾತ ಭಯಭಕ್ತಿ ಮಿಶ್ರಿತ ಧ್ವನಿಯಲ್ಲಿ.

"ನೀವು ಇಷ್ಟೆಲ್ಲಾ ಅಣತಿಗಳನ್ನೂ ಕೇಳಿದ್ದೇ ಆದ ಪಕ್ಷದಲ್ಲಿ ಅವುಗಳನ್ನು ಅರ್ಥ ಮಾಡಿಕೊಂಡಂತೆ ಕಾಣುವುದಿಲ್ಲ. ಮೊದಲ ಎರಡು ಅಣತಿಗಳನ್ನೂ ಪಾಲಿಸಿ ಆ ಬಳಿಕ ನನ್ನಲ್ಲಿ ಉಪದೇಶಕ್ಕೆ ಬನ್ನಿ" ಎಂದರು ಗುರುಗಳು.

ಅವರ ಗಡಸು ಮಾತಿನಿಂದ ತಲೆಬಾಗಿದ ಆತ ದೈನ್ಯನಾಗಿ ಕಣ್ಣೀರು ಸುರಿಸುತ್ತಾ

"ನನ್ನ ಮಾತಾಪಿತರನ್ನು ಒಲಿಸಲು ಎಷ್ಟೋ ಪ್ರಯತ್ನ ಪಡುತ್ತಿದ್ದೇನೆ. ಆದರೆ ಅವರು ನನ್ನಲ್ಲಿ ಸಹಾನುಭೂತಿಯುಳ್ಳವರಾಗಿಲ್ಲ" ಎಂದು ನುಡಿದ.

ಗುರುಗಳು "ವೇದದ ಆಜ್ಞೆಗಳು ನಿಮ್ಮನ್ನು ಕುರಿತಾಗಿ ಹೇಳಲ್ಪಟ್ಟಿವೆಯೇ ವಿನಾ ನಿಮ್ಮ ಮಾತಾಪಿತರು ನಿಮ್ಮಲ್ಲಿ ಸಹಾನುಭೂತಿಯುಳ್ಳವರಾದರೆ ಮಾತ್ರ ನೀವು ಅವರನ್ನು ಸೇವಿಸಬೇಕೆಂದು, ಗೌರವಿಸಬೇಕೆಂದು ಹೇಳಿಲ್ಲ. ನೀವು ನಿಮ್ಮ ಕರ್ತವ್ಯವನ್ನು ಶ್ರದ್ಧೆಯಿಂದ ಮಾಡಿ. ಅವರ ಪ್ರೀತ್ಯಾದರಗಳನ್ನು ಖಂಡಿತ ಗಳಿಸುತ್ತೀರಿ. ಕರ್ತವ್ಯಪ್ರಜ್ಞೆ ಮೊದಲೆಂಬುದನ್ನು ನೆನಪಿನಲ್ಲಿಡಿ" ಎಂದು ಉಪದೇಶಿಸಿದರು. ಗುರುವಾಣಿಯಿಂದ ತನ್ನ ಕರ್ತವ್ಯವೇನೆಂಬುದನ್ನು ಅರಿತ ಆ ಮಹನೀಯನು "ಗುರುದೇವ, ಮತ್ತೊಮ್ಮೆ ತಮ್ಮ ಸನ್ನಿಧಿಗೆ ಬರಬೇಕಾದರೆ ತಕ್ಕ ಯೋಗ್ಯತೆಯ್ನೂ ಅರ್ಹತೆಯನ್ನೂ ಪಡೆದೇ ಬರುತ್ತೇನೆ. ನನ್ನನ್ನು ಅನುಗ್ರಹಿಸಿ" ಎಂದು ಸಾಷ್ಟಾಂಗವೆರಗಿ ಆಶೀರ್ವಾದ ಪಡೆದು ಹಿಂದಿರುಗಿದನು.[14]

ವೃದ್ಧರಾದ ತಾಯಿತಂದೆಯನ್ನು ದೂರಮಾಡಿ ತನ್ನ ಕರ್ತವ್ಯದಲ್ಲಿ ಲೋಪಮಾಡಿಕೊಂಡ ಆತನಿಗೆ ಉಪದೇಶವೇಕೆ? ಗುರುದೇವರು ಅಂತಹವರಿಗೆ ಅವರವರ ತಪ್ಪನ್ನು ತಿಳಿಸಿಕೊಟ್ಟು ಅವರು ತಮ್ಮ ಲೋಪದೋಷಗಳನ್ನು ತಿದ್ದಿಕೊಂಡು ಯಾವ ಮಾರ್ಗದಲ್ಲಿ ನಡೆಯಬೇಕೆಂಬುದನ್ನು ತೋರಿಸಿ

14 ಗುರುದೇವರ ಅಪ್ಪಣೆಯಂತೆ ಆತನು ತನ್ನ ತಂದೆತಾಯಿಯನ್ನು ಒಲಿಸಿ, ಮೆಚ್ಚಿಸಿದುದಲ್ಲದೇ ವೃದ್ಧ ಮಾತೆಯೊಡನೆ ಶೃಂಗೇರಿಗೆ ಬಂದು ಗುರುದೇವರಿಂದ ಉಪದೇಶವನ್ನೂ ಪಡೆದನು.



ಕೊಡುತ್ತಿದ್ದರು. ಆ ಬಳಿಕ ಎಂದರೆ ಉಪದೇಶಕ್ಕೆ ಅರ್ಹತೆ ಪಡೆದ ಬಳಿಕ ತಮ್ಮಲ್ಲಿಗೆ ಬರಬೇಕೆಂಬುದನ್ನು ಮನದಟ್ಟು ಮಾಡಿಕೊಡುತ್ತಿದ್ದರು. ಅವರು ಸಾರ್ವತ್ರಿಕವಾಗಿ ಕೊಡುತ್ತಿದ್ದ ಉಪದೇಶಗಳು ರೂಪಕ ಕತೆಗಳಂತಿದ್ದು ಸುಲಭವಾಗಿ ಗ್ರಾಹ್ಯವೂ, ಹೃದ್ಯವೂ ಆಗಿರುತ್ತಿದ್ದವು. ಅವರು ಎಲ್ಲರಿಂದಲೂ ಆಚರಿಸಲ್ಪಡಬಹುದಾದ ಧರ್ಮತತ್ತ್ವಗಳನ್ನು ರಸವತ್ತಾಗಿ ಬೋಧಿಸುತ್ತಿದ್ದರು. ಪ್ರತಿಯೊಬ್ಬರೂ ತಮ್ಮ ಧರ್ಮಾಚರಣೆಯಲ್ಲಿ ನಡೆನುಡಿಗಳಲ್ಲಿ ಇತರರಿಗೆ ನೋವಾಗದಂತೆ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಬೋಧನೆ ಮಾಡುತ್ತಿದ್ದರು.

"ಸದಾ ದೇವರನ್ನು ಧ್ಯಾನಿಸಿ. ನಿಮ್ಮ ಕರ್ತವ್ಯವನ್ನು ಶ್ರದ್ಧೆಯಿಂದ ಪಾಲಿಸಿ. ಐಹಿಕ ಸುಖಭೋಗಗಳಲ್ಲಿ ಯದೃಚ್ಛಾಲಾಭ ಸಂತುಷ್ಟರಾಗಿ. ಐಶ್ವರ್ಯ, ಅಧಿಕಾರಪ್ರಾಪ್ತಿಗಾಗಿ ಅತ್ಯಾಸೆ ಪಡಬೇಡಿ. ಎಲ್ಲ ವಿಷಯಗಳಲ್ಲಿಯೂ ನಿರ್ಲಿಪ್ತರಾಗಿರಿ" ಇವುಗಳು ಗುರುಗಳ ಉಪದೇಶ ಸಾರವಾಗಿದ್ದವು.

"ದೇವರನ್ನು ಸದಾ ಧ್ಯಾನಿಸಿರೆಂದರೆ ನಿಮಗೆ ವಿಸ್ಮಯವಾಗಿ ಕಾಣಬಹುದು. ನೀವು ಉನ್ನತ ಸ್ಥಾನಗಳಲ್ಲಿದ್ದೀರಿ. ಹೆಚ್ಚು ಕಲಿತವರೂ ಆಗಿದ್ದೀರಿ. ನಿಮ್ಮಂತಹವರಿಗೆ ಸದಾ ದೇವರನ್ನು ಧ್ಯಾನಿಸಬೇಕೆಂದು ಹೇಳುವುದು ಅನುಚಿತವಲ್ಲವೇ? ನೀವು ದೇವರ ಅಸ್ತಿತ್ವವನ್ನು ಅನುಭವಿಸುತ್ತಿರುವಾಗ ನಾನು ಹಾಗೆ ಹೇಳುವುದು ಅನುಚಿತವಾದೀತು. ಆದರೆ ಇಷ್ಟೊಂದು ಕೋರ್ಟು ಕಚೇರಿಗಳೂ, ವ್ಯವಹಾರ ಪತ್ರಗಳೂ, ಆ ಪತ್ರಗಳನ್ನು ದಾಖಲೆ ಮಾಡಿಕೊಳ್ಳುವ ಸಬ್‌ರಿಜಿಸ್ಟ್ರಾರರ ಕಚೇರಿಗಳೂ ನಿಮ್ಮ ಪ್ರತಿಯೊಂದು ಚಲನ ವಲನವೂ ಸಹ ನೀವು ದೇವರನ್ನು ನೆನೆಯುತ್ತಿಲ್ಲವೆಂಬುದನ್ನು, ಅಷ್ಟೇ ಅಲ್ಲದೇ ಆವನ ಅಸ್ತಿತ್ವವನ್ನೇ ಪೂರ್ಣವಾಗಿ ಮರೆತಿದ್ದೀರೆಂಬುದನ್ನು ಸಾರುತ್ತಿವೆ. ನಿಮ್ಮ ಜೀವನವನ್ನೇಕೆ ವ್ಯರ್ಥ ಕಾರ್ಯಗಳಲ್ಲಿ ಕಳೆಯುತ್ತೀರಿ? ಸದ್ಗುಣಗಳನ್ನು ಬೆಳಸಿಕೊಳ್ಳಿ. ಉತ್ತಮವೂ, ಉನ್ನತವೂ ಆದ ಜೀವನವನ್ನು ನಡೆಸಿ."

ಭೌತಿಕ ಜಗತ್ತಿನ ಮೇಲೆ ಅಧಿಕಾರವನ್ನೂ, ಸ್ವಾಮಿತ್ವವನ್ನೂ ಗಳಿಸಿ ಕೊಂಡಿರುವ ಮಾನವನು ಧರ್ಮವನ್ನು ಅಲ್ಲಗಳೆದಿರುವುದನ್ನೂ, ಕಡೆಗಣಿಸಿರು ವುದನ್ನೂ ಕಂಡ ಗುರುಗಳು ಧರ್ಮವನ್ನು ಮರೆಯಬಾರದೆಂದು ಎಚ್ಚರಿಸು ತ್ತಿದ್ದರು.

"ಭೂಮಿಯನ್ನು ಸಾವಿರಾರು ಅಡಿಗಳಷ್ಟು ಆಳಕ್ಕೆ ಕೊರೆದು ಅದರಲ್ಲಿರುವ ಖನಿಜಗಳನ್ನು ತೆಗೆದುಕೊಂಡು ಉಪಯೋಗ ಪಡೆಯುತ್ತೇವೆ. ಯಂತ್ರಚಾಲನೆಗೆ ಬೇಕಾದ ಪೆಟ್ರೋಲನ್ನು, ದೀಪಕ್ಕೆ ಬೇಕಾದ ಎಣ್ಣೆಯನ್ನು ಪಡೆಯುತ್ತೇವೆ. ಜಲಶಕ್ತಿಯಿಂದ ಯಂತ್ರಚಾಲನೆಯನ್ನಷ್ಟೇ ಅಲ್ಲದೇ ಕುಳಿತಲ್ಲಿಯೇ ತಿರುಪು

ತಿರುಗಿಸಿದೊಡನೆಯೇ ನೀರು ಬರುವಂತೆ ವ್ಯವಸ್ಥೆ ಮಾಡಿಕೊಂಡಿದ್ದೇವೆ. ಅಗ್ನಿಶಕ್ತಿ ಉಪಯೋಗದಿಂದ ಗುಂಡಿಯನ್ನು ಅದುಮಿದೊಡನೆಯೇ ಬೆಳಕಿನ ಪ್ರವಾಹವೂ, ಶಾಖವೂ ಉಂಟಾಗುವಂತೆ ಮಾಡಿಕೊಂಡಿದ್ದೇವೆ. ಹಾಗೆಯೇ ಚಲನೆಯೇ ಸ್ವಭಾವವಾಗಿರುವ ವಾಯುಶಕ್ತಿಯನ್ನು ಸಹ ವಿದ್ಯುತ್ ಚಾಲಿತ ಬೀಸಣಿಗೆಯನ್ನಾಗಿ ಮಾಡಿಕೊಂಡು, ಹೆಚ್ಚು ಗಾಳಿ ಬರುವಂತೆ ಮಾಡಿಕೊಂಡಿದ್ದೇವೆ. ಆಕಾಶದ ಮೂಲಕ ದೂರ ದೂರದ ಶಬ್ದ ತರಂಗಗಳನ್ನು ರೇಡಿಯೋ ಯಂತ್ರ ಚಾಲನೆಯ ಮೂಲಕ ಕೇಳುವಂತೆ ಮಾಡಿಕೊಂಡಿದ್ದೇವೆ. ಹೀಗೆ ವಿಜ್ಞಾನವನ್ನು ನಮ್ಮ ಸುಖೋಪಭೋಗಗಳಿಗಾಗಿ ಹೆಚ್ಚುಹೆಚ್ಚಾಗಿ ಬಳಸಿಕೊಳ್ಳುತ್ತಿದ್ದೇವೆ. ಆದರೆ ಎಲ್ಲಕ್ಕೂ ಆಧಾರವಾದ ಧರ್ಮವನ್ನೇ ಮರೆತುಬಿಟ್ಟಿದ್ದೇವೆ. ಇದೆಲ್ಲವೂ, ಈ ಭೌತಿಕ ಕ್ರಿಯೆಗಳೆಲ್ಲವೂ ಭಗವಂತನ ಅಪಾರ ಕರುಣೆಯಿಂದ ಬಂದುದೆಂಬುದನ್ನು ಅರಿಯದೇ ಅಹಂಕಾರಾದಿಗಳನ್ನು ಬೆಳಸಿಕೊಳ್ಳುತ್ತಿದ್ದೇವೆ. ಇದರಿಂದ ಪ್ರಯೋಜನವೇನು? ಪರಸ್ಪರ ಸಂಶಯದೃಷ್ಟಿ, ಅಸೂಯೆ. ದ್ವೇಷ, ವಿದ್ವೇಷಗಳು. ಧರ್ಮವನ್ನು ಮರೆತರೆ ಲೋಕಕ್ಕೆ ಕ್ಷೇಮವೇ? ವೈಜ್ಞಾನಿಕ ಶಕ್ತಿಯೇ ಆಗಲಿ, ಮತ್ತಾವುದೇ ಆಗಲಿ ಎಲ್ಲವೂ ಭಗವತ್ಕೃಪೆಯೆಂಬುದನ್ನು ಮರೆಯದೇ ಧರ್ಮಮಾರ್ಗದಲ್ಲಿ ನಡೆದರೆ ಮಾತ್ರ ಶ್ರೇಯಸ್ಸು ಮತ್ತು ಪ್ರೇಯಸ್ಸು ದೊರಕುವುದು.

* * *



# ೨೮. ಶಾಸ್ತ್ರದಲ್ಲಿ ಸುಧಾರಣೆಗಳು

ಧಾರ್ಮಿಕ ಆಧ್ಯಾತ್ಮಿಕ ಸಮಸ್ಯೆಗಳನ್ನು ಪರಿಹರಿಸಿ ಮಾರ್ಗದರ್ಶನ ಮಾಡುತ್ತಿದ್ದಂತೆಯೇ ಗುರುದೇವರು ತಮ್ಮದೇ ಆದ ವೈಶಿಷ್ಟ್ಯಪೂರ್ಣವಾದ ರೀತಿಯಲ್ಲಿ ಸಾಮಾಜಿಕ ಸಮಸ್ಯೆಗಳಿಗೂ ಪರಿಹಾರ ಸೂಚಿಸುತ್ತಿದ್ದರು.

ಭರತ ಖಂಡದ ಜನಜೀವನವು ಲೌಕಿಕ ವಿಚಾರಗಳಲ್ಲಿಯೂ ಶಾಸ್ತ್ರಗಳನ್ನೇ ಅವಲಂಬಿಸಿದೆಯಲ್ಲವೇ? ಅಂತಹ ಲೌಕಿಕ ಸಮಸ್ಯೆಗಳು ಎದುರಾದಾಗ, ಅವುಗಳನ್ನು ಬಗೆಹರಿಸಲು ಅಸಾಧ್ಯವೆಂದು ತೋರಿದಾಗ, ಸಮಾಜ ಸುಧಾರಕರು ಈ ಲೌಕಿಕ ಸಮಸ್ಯೆಗಳಿಗೆ ಶಾಸ್ತ್ರಗಳೇ ಮೂಲಕಾರಣವೆಂದು ವಾದಿಸುತ್ತಾರೆ.

ಹೀಗೆ ಸುಧಾರಣೆಯಲ್ಲಿ ವಿಶ್ವಾಸವಿದ್ದವರೊಬ್ಬರು ಗುರುದೇವರ ದರ್ಶನಕ್ಕೆ ಬಂದರು. ಅವರು ಬ್ರಾಹ್ಮಣರಲ್ಲಿ ಮದುವೆಗಾಗಿ ಆಗುತ್ತಿದ್ದ ವಿಪರೀತ ಖರ್ಚುವೆಚ್ಚಗಳಿಗೆಲ್ಲಾ ಶಾಸ್ತ್ರಗಳೇ ಕಾರಣವೆಂದೂ, ಆದ್ದರಿಂದ ನಾಲ್ಕೈದು ದಿನಗಳ ಕಾಲ ನಡೆಯುವ ಶಾಸ್ತ್ರೋಕ್ತವಾದ ಮದುವೆಯನ್ನು ಒಂದೇ ದಿನದಲ್ಲಿ ಮಾಡಿ ಮುಗಿಸಿಬಿಡಬಹುದೆಂದೂ ತಮ್ಮ ಅಭಿಪ್ರಾಯ ಸೂಚಿಸಿ ಗುರುದೇವರ ಸಮ್ಮತಿಯನ್ನು ಕೇಳಿದರು.

ಗುರುದೇವರು, “ವಿವಾಹದ ಹೆಸರಿನಲ್ಲಿ ವಿಪರೀತ ಹಣ ವ್ಯರ್ಥವಾಗುತ್ತಿದೆ ಯೆಂದು ನಾನೂ ಒಪ್ಪುತ್ತೇನೆ. ಈ ವ್ಯರ್ಥ ಖರ್ಚಿಗೂ, ಶಾಸ್ತ್ರೋಕ್ತವಾದ ಕ್ರಿಯಾಕಲಾಪಗಳಿಗೂ ಗಂಟು ಹಾಕುವುದು ಏಕೆ? ಹೇಗೆ?”

“ಈ ಕ್ರಿಯಾಕಲಾಪಗಳು ಹೆಚ್ಚಿದಂತೆಲ್ಲಾ ವೆಚ್ಚವೂ ಹೆಚ್ಚುವುದಲ್ಲಾ ಮಹಾಸ್ವಾಮಿ”

“ನೋಡಿ, ನೀವು ತಪ್ಪುವುದೇ ಇಲ್ಲಿ. ವಿವಾಹ ಸಮಯದಲ್ಲಿ ಸಂತೋಷಕ್ಕೆಂದು ನೀವಾಗಿ ಏರ್ಪಡಿಸಿಕೊಂಡ ಕಲಾಪಗಳು ಬೇರೆ. ಧಾರ್ಮಿಕವಾದ ಕಲಾಪಗಳು ಬೇರೆ ಎಂಬುದನ್ನು ನೀವು ಅರ್ಥಮಾಡಿ ಕೊಂಡಂತೆ ಕಾಣದು. ಶಾಸ್ತ್ರೋಕ್ತ ಕರ್ಮಗಳಿಗೆ ಹೆಚ್ಚು ವೆಚ್ಚ ತಾಗುವುದಿಲ್ಲ. ನಾಲ್ಕೈದು ಹಿಡಿ ಅಕ್ಕಿ, ಸ್ವಲ್ಪ ತುಪ್ಪ, ಸಮಿತ್ತು, ದರ್ಭೆ ಇವಿಷ್ಟಿದ್ದರೆ ಸಾಕು. ಮದುವೆಗೆ ಸಂಬಂಧಪಟ್ಟ ಶಾಸ್ತ್ರೋಕ್ತ ಕರ್ಮಗಳನ್ನೆಲ್ಲಾ ಮಾಡಿಬಿಡಬಹುದು. ಇವಿಷ್ಟನ್ನು ಮಾತ್ರ ನೀವು ನಡೆಸಿದರೆ ಮದುವೆಯ ಕಲಾಪ ಎಷ್ಟು ದಿನ ನಡೆದರೂ ಹೊರೆಯಾಗುವುದೇ ಇಲ್ಲ. ಹೆಚ್ಚು ವೆಚ್ಚವೂ ಆಗುವುದಿಲ್ಲ. ತುಂಬಾ

ಹಣದ ಅವಶ್ಯಕತೆಯಿರುವ ಸಂಗೀತ, ನೃತ್ಯ, ಗೀತ, ಭಾರಿಯಾದ ಭೋಜನ, ವೈಭವದ ಮೆರವಣಿಗೆ ಇವುಗಳನ್ನು ಏರ್ಪಡಿಸಿಕೊಂಡು ಸ್ವಚ್ಛಂದವಾಗಿ ಹಣ ಖರ್ಚುಮಾಡುತ್ತಾ, ಧರ್ಮಶಾಸ್ತ್ರದ ವಿಧಿಗಳನ್ನು ದೂರುವುದೇಕೆ? ಈ ಆಡಂಬರಗಳೆಲ್ಲವೂ ಅನಗತ್ಯ. ನಿರಾಡಂಬರದ ಧರ್ಮಕರ್ಮಗಳನ್ನು ಕಡಿಮೆ ಮಾಡುವುದು ಸರಿಯಲ್ಲ."

"ಸ್ವಾಮಿ, ತಾವೆನ್ನುವಂತೆ ಧಾರ್ಮಿಕ ಕ್ರಿಯಾದಿಗಳಿಗೇನೋ ಹೆಚ್ಚು ಖರ್ಚಾಗದು. ಆದರೆ ಅಷ್ಟು ದಿನಗಳ ಕಾಲವೂ, ಮದುವೆಗಾಗಿ ಬಂದ, ಆಮಂತ್ರಿಸಲ್ಪಟ್ಟ ಬಂಧುಬಾಂಧವರನ್ನು ಊಟ ಉಪಾಹಾರಗಳಿಂದ ಸತ್ಕರಿಸಬೇಕಲ್ಲವೇ? ಅದಕ್ಕೆ ತುಂಬಾ ಹಣವೂ ಶ್ರಮವೂ ವ್ಯಯವಾಗುವುದಲ್ಲ?"

"ಇವೆಲ್ಲಾ ಖರ್ಚಿನ ದಾರಿ, ಸರಿಯಲ್ಲವೆಂದು ನಿಮಗನ್ನಿಸಿದರೆ ಮದುವೆಯ ದಿನಕ್ಕೆ ಮಾತ್ರ ನೆಂಟರಿಷ್ಟರನ್ನು ಕರೆಯಿರಿ"

"ಹಾಗೆ ನಾಲ್ಕು ದಿನವೂ ಮದುವೆ ಮಾಡುತ್ತ, ಒಂದೇ ದಿನ ಮಾತ್ರ ಬಂಧುಮಿತ್ರರನ್ನು ಆಹ್ವಾನಿಸುವುದು ಸಭ್ಯತೆಯಲ್ಲವೆಂದೂ, ಭೂಷಣವಲ್ಲವೆಂದೂ ತೋರುತ್ತದೆ ಮಹಾಸ್ವಾಮಿ"

"ನಿಮ್ಮ ಸುಧಾರಣೆಯಂತೆ ಮದುವೆಯು ಒಂದು ದಿನ ನಡೆದರೆ, ನೀವು ಒಂದು ದಿನಕ್ಕೆ ಮಾತ್ರ ಅತಿಥಿಗಳನ್ನು ಅಹ್ವಾನಿಸುತ್ತೀರಲ್ಲವೇ?"

"ಹೌದು, ಮರುದಿನ ಮದುವೆಯ ಕ್ರಿಯಾಕಲಾಪಗಳಾವುದೂ ಇಲ್ಲವೆಂದು ತಿಳಿದರೆ ನೆಂಟರು ನಿಲ್ಲುವುದಿಲ್ಲ. ಹೊರಟುಬಿಡುತ್ತಾರೆ."

"ನೆಂಟರಿಗೆ ಊಟ ಏರ್ಪಡಿಸುವುದು ಮಹಾಕಷ್ಟದ ಕೆಲಸವೇನು? ಈಗಿನ ಕಾಲದ ಮದುವೆಗೆ ಆಗುವ ಖರ್ಚನ್ನೆಲ್ಲ ಯಾವ ಯಾವ ಬಾಬತಿಗೆ ಎಷ್ಟೆಷ್ಟು ವೆಚ್ಚವೆಂದು ಲೆಕ್ಕ ಮಾಡಿದರೆ, ವೈದಿಕ ಕ್ರಿಯಾಕಲಾಪದ ಮತ್ತು ನೆಂಟರಿಷ್ಟರ ಊಟದ ಏರ್ಪಾಟಿನ ಖರ್ಚು ಉಳಿದ ಖರ್ಚುಗಳಿಗಿಂತ ಕಡಿಮೆಯೇ ಆಗುತ್ತದೆ. ನಿಮ್ಮ ನೆಂಟರಿಗೆ ಒಳ್ಳೆಯ ಬಟ್ಟೆಬರೆಗಳನ್ನು ಉಡುಗೊರೆ ಕೊಡಬೇಕೆಂದು ಶಾಸ್ತ್ರ ಹೇಳುವುದಿಲ್ಲ. ಬೇಕಾದವರನ್ನೂ, ಬೇಡವಾದವರನ್ನೂ ಕಂಡಕಂಡವರನ್ನೆಲ್ಲಾ ಕರೆದು ಊಟ ಹಾಕಬೇಕೆಂದು ಶಾಸ್ತ್ರ ಹೇಳದು. ಸಂಗೀತ, ನೃತ್ಯ,ವಾದ್ಯವೃಂದಗಳನ್ನು ಏರ್ಪಡಿಸಬೇಕೆಂದು ಶಾಸ್ತ್ರ ಹೇಳುವುದಿಲ್ಲ. ವರದಕ್ಷಿಣೆ ಕೊಡಬೇಕೆಂದು ಶಾಸ್ತ್ರ ಹೇಳುವುದಿಲ್ಲ. ಇವೆಲ್ಲ ಖರ್ಚನ್ನು ನಾವೇ ನಮ್ಮಿಷ್ಟದಂತೆ ಏರ್ಪಡಿಸಿ ಶಾಸ್ತ್ರವನ್ನೇಕೆ ದೂರಬೇಕು?"

ವರದಕ್ಷಿಣೆಯ ಮಾತು ಬಂದೊಡನೆಯೇ ಆ ಸುಧಾರಕರು ಗುರುದೇವರನ್ನು "ಸ್ವಾಮಿ, ಈ ವರದಕ್ಷಿಣೆಯ ಪಿಡುಗು ಬಲು ಅಪಾಯಕಾರಿಯಾಗಿದೆ. ಸನ್ನಿಧಾನವು ತಮ್ಮ ವರ್ಚಸ್ಸಿನಿಂದ ಅದರ ನಿವಾರಣೆಗೆ ಸಹಾಯ ಮಾಡಬೇಕೆಂದು ನನ್ನ ಪ್ರಾರ್ಥನೆ" ಎಂದು ಕೇಳಿಕೊಂಡರು.



"ಹೌದು, ನಾನು ಸಹಾಯ ಮಾಡಬೇಕಾದುದು ನ್ಯಾಯ. ಆದರೆ ಈ ಪದ್ಧತಿಯನ್ನು ರೂಢಿಗೆ ತಂದು ಅದನ್ನು ಪೋಷಿಸುವಾತನಿದ್ದಾನಲ್ಲಾ, ಆತನ ವರ್ಚಸ್ಸು ನನ್ನ ವರ್ಚಸ್ಸಿಗಿಂತಲೂ ಪ್ರಭಾವಶಾಲಿಯಾಗಿದೆಯಲ್ಲ ಏನು ಮಾಡುವುದು?" ಎಂದರು.

ಸುಧಾರಕರು ಆಶ್ಚರ್ಯದಿಂದ "ಯಾರು ಮಹಾಸ್ವಾಮಿ ಆತ?" ಎಂದು ಕೇಳಿದರು.

"ನಿಮಗೆಲ್ಲಾ ಗೊತ್ತಿರುವವನೇ, ಆತನನ್ನು **ಕಾಮ, ಲೋಭ** ಎಂದು ಕರೆಯುತ್ತಾರೆ.ಉತ್ಕಟೇಚ್ಛೆ, ಅತಿಯಾಸೆಯಿಂದ ಪೀಡಿತನಾದ ರಾಕ್ಷಸನವನು. ಬ್ರಾಹ್ಮಣರು ತಮ್ಮ ವರ್ಣಧರ್ಮದಂತೆ ನಡೆದು ಧರ್ಮಗುರುಗಳ ಸಂಪರ್ಕದಲ್ಲಿದ್ದಷ್ಟು ಕಾಲ, ಈ ರಾಕ್ಷಸನು ಅವರನ್ನೇನೂ ಮಾಡಲಿಲ್ಲ. ಆಸೆಯೂ, ಲೋಭವೂ ಬ್ರಾಹ್ಮಣರ ಹೃದಯವನ್ನು ಪ್ರವೇಶಿಸಿದಂತೆಲ್ಲಾ ಅವರಲ್ಲಿದ್ದ ತೃಪ್ತಿ, ಶಾಂತಿಗಳು ಅವರನ್ನು ಬಿಟ್ಟುಹೋದವು. ಆಗ ಅವರಲ್ಲಿ ದುಷ್ಟಚಟಗಳು ಪ್ರವೇಶಿಸಿದವು. ಅವುಗಳಲ್ಲಿ ವರದಕ್ಷಿಣೆಯೂ ಒಂದು. ಅದರ ವಿರುದ್ಧವಾಗಿ ನಾವು ಬೋಧಿಸಿದಷ್ಟೂ, ಮಹಾಶಕ್ತನಾದ ಕಾಮನು ಪ್ರತಿಯಾಗಿ ಅದರ ಪರವಾಗಿ ಬೋಧಿಸುವನು."

"ವರನ ಕಡೆಯವರು ವರದಕ್ಷಿಣೆ ಕೇಳಿದರೆ, ವಧುವಿನ ತಾಯ್ತಂದೆ ಏನನ್ನು ಮಾಡಲಾಗುತ್ತದೆ ಮಹಾಸ್ವಾಮಿ?"

"ನಿಮ್ಮ ಮಾತನ್ನು ಒಪ್ಪಲಾಗದು. ಒಬ್ಬ ವೈದಿಕನ ಮಗನು ವರದಕ್ಷಿಣೆಯಿಲ್ಲದೆಯೇ ವಿವಾಹವಾಗಲು ಸಿದ್ಧನಾಗಿದ್ದಾನೆನ್ನಿ. ಅದೇ ವಧುವನ್ನು ಸಿರಿವಂತರ ಮಗನೊಬ್ಬನು ವರದಕ್ಷಿಣೆಯಿತ್ತಲ್ಲಿ ವಿವಾಹವಾಗಲು ಸಿದ್ಧನಾಗಿದ್ದಾನೆನ್ನಿರಿ. ಯಾವ ವರನಿಗೆ ಕನ್ಯೆಯನ್ನು ಕೊಡುತ್ತೀರಿ? ಸಿರಿವಂತರ ಮಗನಿಗೆ ತಾನೇ?"

"ಹೌದು!"

"ಏಕೆ ಹೇಳಿ, ನೋಡೋಣ?"

"ತನ್ನ ಮಗಳು ಅನುಕೂಲಸ್ಥರ ಮನೆ ಸೇರಿದರೆ ಸುಖವಾಗಿರುತ್ತಾಳೆಂದು"

"ಆದ್ದರಿಂದ ವರದಕ್ಷಿಣೆಯ ಪಿಡುಗಿಗೆ ವರನ ಕಡೆಯವರಂತೆ ವಧುವಿನ ಕಡೆಯವರೂ ಕಾರಣವಷ್ಟೆ."

"ಹೌದು, ಮಗಳ ಸುಖಕ್ಕಾಗಿ ತಾಯಿ ತಂದೆ ತಾವು ಕಷ್ಟಪಡಲು ಸಿದ್ಧರಿರುತ್ತಾರೆ"

"ತನ್ನ ಮಗಳ ಮಾವನೋ, ಗಂಡನೋ ಶ್ರೀಮಂತರಾಗಿದ್ದರೆ ತನ್ನ ಮಗಳೂ ಸುಖವಾಗಿರುತ್ತಾಳೆಂದು ಭಾವಿಸುವುದೇ ತಪ್ಪು. ಶ್ರೀಮಂತಿಕೆಯೂ, ಸುಖವೂ ಒಂದನ್ನೊಂದು ಅವಲಂಬಿಸಿಲ್ಲ. ಇದನ್ನು ಬ್ರಾಹ್ಮಣರು ತಿಳಿಯಬೇಕು. ಹಣವೇ ಪರಮ ಧ್ಯೇಯವೆಂದು ನಂಬಿರುವುದರಿಂದಲೇ ಕಷ್ಟಗಳ ಪ್ರಾಪ್ತಿಯಾಗುತ್ತದೆ. ಈ ವರದಕ್ಷಿಣೆಯ ದುಶ್ಚಟದಿಂದ ಪಾರಾಗಲು ಆತ್ಮತೃಪ್ತಿಯನ್ನು ಅಭ್ಯಸಿಸುವ, ವಸ್ತುಸ್ಥಿತಿ, ಸನ್ನಿವೇಶಗಳ ಗೊಂದಲದಲ್ಲಿ ಶಾಂತಸ್ವಭಾವವನ್ನು ಉಳಿಸಿಕೊಳ್ಳುವ ಬುದ್ಧಿ ಇವು ಮುಖ್ಯ. ವಿಚಾರಶೀಲರು ಇವನ್ನು ಗಮನಿಸಬೇಕು. ಧೈರ್ಯವಾಗಿ ವರ್ತಿಸಬೇಕು. ಆಗ ಈ ಸಮಸ್ಯೆಗಳೆಲ್ಲವೂ ತಾವಾಗಿ ಬಗೆಹರಿಯುವುವು" ಎಂದು ಗುರುದೇವರು ನುಡಿದರು.

ಈ ಸಮಸ್ಯೆಗಳು ಪ್ರಸ್ತುತಕಾಲದಲ್ಲಿ ನಮಗೆ ಅಷ್ಟು ಪ್ರಮಾದಕರವಾಗಿ ಕಾಣದಿದ್ದರೂ, ಕಳೆದ ಶತಮಾನದ ಎರಡು, ಮೂರನೇ ದಶಕಗಳಲ್ಲಿ ಪ್ರಬಲ ಸಮಸ್ಯೆಗಳೇ ಆಗಿದ್ದವು. ಮದುವೆಗಾಗಿ, ವರದಕ್ಷಿಣೆಗಾಗಿ ಹೇರಳವಾಗಿ ಖರ್ಚುಮಾಡುವ ಶ್ರೀಮಂತರನ್ನು ಕಂಡು ಬಡವರೂ, ಅವರನ್ನು ಅನುಕರಿಸಿ ಕಷ್ಟಕ್ಕೆ ಒಳಗಾಗುತ್ತಿದ್ದರು. ಅದಕ್ಕೆ ಕಾರಣವು ಶಾಸ್ತ್ರವಲ್ಲ. ಜನಗಳಲ್ಲಿರುವ ಲೋಭ, ಕಾಮಗಳೆಂದು ಗುರುಗಳು ಸ್ಪಷ್ಟಪಡಿಸಿದ್ದರು.

ಹೀಗೆಯೇ ಗುರುದೇವರು ಬಾಲ್ಯವಿವಾಹ, ವಿಧವಾ ಸಮಸ್ಯೆ, ಆಧುನಿಕ ವಿದ್ಯಾಭ್ಯಾಸ, ಧಾರ್ಮಿಕ ವಿಷಯಗಳಲ್ಲಿ ತಾಟಸ್ಥ್ಯ, ಮತ ಪ್ರಚಾರ ಮುಂತಾದ ವಿಚಾರಗಳಲ್ಲಿಯೂ ತಮ್ಮ ಅಮೂಲ್ಯವಾದ ಸಲಹೆಗಳನ್ನು ಕೊಟ್ಟಿದ್ದರು. ಸಮಾಜದಲ್ಲಿರುವ ಅನೇಕ ಸಮಸ್ಯೆಗಳಿಗೆ ಶಾಸ್ತ್ರಗಳು ಕಾರಣವಲ್ಲವೆಂದೂ, ಮಾನವನಲ್ಲಿರುವ ಸ್ವಾರ್ಥಬುದ್ಧಿ, ಅಸೂಯೆ, ದುರಾಸೆ, ಲೋಭ, ಅತೃಪ್ತಿ ಮುಂತಾದವೇ ಕಾರಣವೆಂದೂ ಮನಗಾಣಿಸುತ್ತಿದ್ದರು. ಸುಧಾರಣೆಗಳು ಆಗಬೇಕಾದುದು ಶಾಸ್ತ್ರಗಳಲ್ಲಿ ಅಲ್ಲ. ಮಾನವರ ಆಚಾರದಲ್ಲಿ, ನಿತ್ಯ ನಡವಳಿಕೆಯಲ್ಲಿ, ಸ್ವಭಾವದಲ್ಲಿ ಎಂಬುದನ್ನು ಪದೇ ಪದೇ ಸ್ಪಷ್ಟಪಡಿಸುತ್ತಿದ್ದರು.

* * *



# ೨೯. ಇದ್ದೂ ಇಲ್ಲದಂತೆ ಇರಬಹುದೇ?

ಸಾಧಾರಣವಾಗಿ ಇಂದಿನ ವಿಮರ್ಶಕರೆಲ್ಲಾ ಹಿಂದೂಧರ್ಮವನ್ನು ಅದರ ಉನ್ನತವಾದ ದೃಷ್ಟಿಕೋನದಿಂದ ನೋಡಿದಾಗ ಅದು ಪ್ರಪಂಚದ ವ್ಯವಹಾರದಿಂದ ಪೂರ್ಣ ವೈರಾಗ್ಯವನ್ನೇ ಬೋಧಿಸುತ್ತದೆಯೆಂದು ನುಡಿಯುತ್ತಾರೆ. ಆರಂಭದ ದೆಸೆಯಲ್ಲಿ ಸಾಧಕನು ತನ್ನ ಮೇಲೆ ತಾನೇ ನಿಯಂತ್ರಣವನ್ನು ಹಾಕಿಕೊಂಡು ಚಿತ್ತವಿಭ್ರಮ ಮಾಡುವ ಸನ್ನಿವೇಶಗಳಿಂದ ದೂರವಿರಲು ಮತ್ತು ಮರುಳುಗೊಳಿಸುವ ಜನಸಂದಣಿಯಿಂದ ತಪ್ಪಿಸಿಕೊಳ್ಳಲು ಏಕಾಂತವಾಗಿರುವ, ಪ್ರಶಾಂತವಾಗಿರುವ ಸ್ಥಳದಲ್ಲಿರಬೇಕೆಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ಸಾಧನೆಯ ಚರಮ ಸೀಮೆಯನ್ನು ತಲುಪಿದ ಬಳಿಕ ಆ ಸಿದ್ಧನು, ಪ್ರಪಂಚದಲ್ಲಿದ್ದೂ ಇರದಂತಿರುತ್ತಾನೆ. ಶ್ರೀ ಶಂಕರ ಭಗವತ್ಪಾದರು ತಮ್ಮ ಕಿರುಕೃತಿಯಾದ ಜೀವನ್ಮುಕ್ತಾನಂದಲಹರಿಯಲ್ಲಿ "ಯೋಗಿಯಾದವನು ಜಗತ್ತಿನಲ್ಲಿದ್ದೂ ಸಹ ಇಲ್ಲದಂತಿರಬಹುದು" ಎಂದು ನುಡಿದಿದ್ದಾರೆ. ಶ್ರೀಶ್ರೀ ಚಂದ್ರಶೇಖರಭಾರತೀ ಸ್ವಾಮಿಗಳವರ ಜೀವನವು ಮೇಲ್ಕಂಡ ಚಿರಸತ್ಯವಾದ ನುಡಿಗೆ ಜ್ವಲಂತ ನಿದರ್ಶನವಾಗಿದೆ.

ಮಠದ ಲೌಕಿಕ ವ್ಯವಹಾರಗಳಲ್ಲಿ ಅವು ಎಷ್ಟೇ ಸರಳವಾದದ್ದಿರಲಿ ಗುರುದೇವರು ಆಸಕ್ತಿ ಹೊಂದಿರಲಿಲ್ಲ. ಮಠದ ಕಾರ್ಯಭಾರಿಯೊಬ್ಬರು ದೇವಾಲಯಗಳ ದೈನಂದಿನ ಪೂಜಾದಿಗಳಿಗೆ ಬೇಕಾಗುವಷ್ಟು ಪುಷ್ಪ, ಪತ್ರೆಗಳನ್ನು ಬೆಳೆಸಲು ಒಂದು ಪುಷ್ಪೋದ್ಯಾನವನ್ನು ನಿರ್ಮಿಸಿದ್ದರು. ಗುರುದೇವರಿಗೆ ಆ ಪುಷ್ಪೋದ್ಯಾನದಲ್ಲಿ ಆಸಕ್ತಿಯಿರಬಹುದೆಂದು ಭಾವಿಸಿದ ಆತ ಒಂದು ಸಂಜೆ ಗುರುದೇವರಲ್ಲಿ ಬಂದರು. ವಿನೀತರಾಗಿ "ದೇವಾಲಯಗಳಿಗಾಗಿ ಒಂದು ಹೂದೋಟವನ್ನು ನಿರ್ಮಿಸಿದ್ದೇನೆ. ಹೂಗಿಡಗಳು ಹುಲುಸಾಗಿ ಬೆಳೆಯುತ್ತಿವೆ. ಸನ್ನಿಧಾನವು ದಯಮಾಡಿಸಿ ಆ ಪುಷ್ಪವನವನ್ನು ಪರಾಂಬರಿಸಬೇಕೆಂದು ನನ್ನ ನಮ್ರೇಚ್ಛೆ" ಎಂದು ಬಿನ್ನವಿಸಿದರು. ಗುರುದೇವರು ಕೂಡಲೇ ಒಪ್ಪಿದರು. ಆತನೊಡನೆಯೇ ಬಂದು ತೋಟವನ್ನೊಮ್ಮೆ –ಪಾತಿಗಳನ್ನು, ಗಿಡಗಳನ್ನು– ನೋಡಿ ಅನಂತರ ಹಿಂದಿರುಗಲನುವಾದರು. ತಾನು ನಿರ್ಮಿಸಿದ್ದ ಆ ಪುಷ್ಪವನವನ್ನು ಕುರಿತು ಒಂದು ಮಾತೂ ಆಡದ ಗುರುದೇವರ ಮೌನದಿಂದ ಉತ್ಸಾಹಭಂಗ ಹೊಂದಿದ ಆ ಕಾರ್ಯಭಾರಿ " ಸನ್ನಿಧಾನವನ್ನು ಇಲ್ಲಿಯವರೆಗೆ ದಯಮಾಡಿಸಬೇಕೆಂದು ಪ್ರಾರ್ಥಿಸಿದ ಉದ್ದೇಶ ಈ ತೋಟದ ಅಂದಚಂದಗಳ

ಬಗ್ಗೆ ತಮ್ಮ ಅಭಿಪ್ರಾಯವನ್ನು ತಿಳಿಯುವುದು” ಎಂದು ನಿವೇದಿಸಿದರು. ತಕ್ಷಣವೇ ಗುರುದೇವರು “ಏನಾಗಿದೆ? ಚೆನ್ನಾಗಿಯೇ ಇದೆಯಲ್ಲ” ಎಂದರು. ಆತ ಅಲ್ಲಿಗೇ ಬಿಡದೇ “ನಾನು ಪ್ರಾರ್ಥಿಸಿಕೊಂಡ ನಂತರ ‘ಚೆನ್ನಾಗಿದೆ’ಯೆಂದು ಮಹಾಸನ್ನಿಧಾನವು ನುಡಿದುದು ನನಗೆ ಸಮಾಧಾನ ಉಂಟು ಮಾಡಲಾರದು. ಈ ತೋಟವನ್ನು ಇನ್ನೂ ಅಂದವೂ ಆಕರ್ಷಕವೂ ಆಗುವಂತೆ ಮಾಡಲು ಗುರುದೇವರ ಸಲಹೆ ನನಗೆ ಬೇಕು” ಎಂದು ಕೇಳಿಕೊಂಡರು. “ಇನ್ನೂ ಏನೇನು ಗಿಡಗಳನ್ನು ಹಾಕಬೇಕೆಂದು ನಿಮ್ಮ ಆಲೋಚನೆ?” ಎಂದು ಗುರುದೇವರು ಕೇಳಿದರು. ಕಾರ್ಯಭಾರಿ ಇಂತಿಂತಹ ಗಿಡಗಳನ್ನು ನೆಟ್ಟು ಬೆಳೆಸುವುದು ತನ್ನಿಚ್ಛೆಯಿರುವುದೆಂಬುದಾಗಿ ವಿವರಿಸಿದರು. ತತ್‌ಕ್ಷಣವೇ ಬಂತು ಉತ್ತರ. “ಹೌದು ಹಾಗೆಯೇ ಮಾಡಬಹುದು” ಎಂದು. ಅನಂತರ ಆತನಿಗೆ ಅರ್ಥವಾಗಿತ್ತು, ಎಲ್ಲ ಹೊಸ ಸಲಹೆಗಳನ್ನು ತಾನು ಮಾಡಿದ್ದೇ ವಿನಾ ಗುರುದೇವರಲ್ಲ ಎಂದು! ಗುರುದೇವರನ್ನು ಇಂತಹ ಪ್ರಯತ್ನಗಳಲ್ಲಿ ಆಸಕ್ತರನ್ನಾಗಿ ಮಾಡುವ ಪ್ರಯತ್ನ ನಿರರ್ಥಕವೆಂದು ಆತನಿಗೆ ಗ್ರಾಹ್ಯವಾಗಿತ್ತು.

ಮಠದ ಲೌಕಿಕ ವ್ಯವಹಾರಗಳಲ್ಲಿ ಅವರಿಗೆ ಆಸಕ್ತಿಯಿಲ್ಲದಿದ್ದರೆ ಅವರು ಪೀಠವನ್ನೇಕೆ ತ್ಯಜಿಸಬಾರದು? ಎಂಬ ರೀತಿಯ ಸಲಹೆ, ಸೂಚನೆಗಳು ಒಮ್ಮೊಮ್ಮೆ ಬರುತ್ತಿದ್ದವು. ಅಷ್ಟರ ಮಟ್ಟಿಗೆ ಗುರುದೇವರು ಅನಾಸಕ್ತರಾಗಿರುತ್ತಿದ್ದರು. ಯಾರಾದರೂ ಇಂತಹ ಸಲಹೆಗಳನ್ನು ಅವರ ಮುಂದೆ ಇರಿಸುವಷ್ಟು ಧೈರ್ಯಶಾಲಿಗಳಾಗಿದ್ದಲ್ಲಿ ಗುರುದೇವರು ಅದನ್ನು ಸಂತೋಷವಾಗಿ ಒಪ್ಪಿಕೊಳ್ಳುತ್ತಿದ್ದರು. ಅಂತಹ ಸಂದರ್ಭವೇನಾದರೂ ಬಂದಿದ್ದಲ್ಲಿ ಅದು ಎಲ್ಲಕ್ಕಿಂತಲೂ ಅಧಿಕತರವಾದ ದೌರ್ಭಾಗ್ಯವಾಗುತ್ತಿತ್ತು. ಅದಕ್ಕೂ ಹೆಚ್ಚಾಗಿ ಆಧ್ಯಾತ್ಮಿಕಾನುಭವದಲ್ಲಿ ಪರಾಕಾಷ್ಠೆಯನ್ನು ಮುಟ್ಟಿರುವ ಅದ್ವೈತ ಮಠದ ಪೀಠಾಧಿಪತಿಯೊಬ್ಬರು, ಆ ಸಿದ್ಧಿಯನ್ನು ಪಡೆದಿರುವುದರಿಂದಲೇ ಮಠದ ಮುಖ್ಯಾಧಿಪತಿಯಾಗಿರಲು ಅನರ್ಹರು ಎಂಬ ಅನರ್ಥಕಾರಿ ನಿರ್ಧಾರವನ್ನು ಮೌನವಾಗಿ ಒಪ್ಪಿಕೊಂಡಂತಾಗುತ್ತಿತ್ತು.

ಈ ಜಗತ್ತಿನ ಚಟುವಟಿಕೆಗಳಿಂದ ವಿರಮಿಸುವುದಾಗಲೀ ಅಥವಾ ದೂರ ಓಡಿಹೋಗುವುದಾಗಲೀ ಅವಶ್ಯಕವೆಂದು ಗುರುದೇವರು ಭಾವಿಸಿರಲಿಲ್ಲ. ಜಗತ್ತಿನಲ್ಲಿ ಇದ್ದೂ ಇರದಂತೆ ಅದನ್ನು ಗಣನೆಗೆ ತಾರದೇ, ತನ್ನಲ್ಲಿ ತಾನು ವಿರಮಿಸುವ ಶ್ರೇಷ್ಠತಮ ಆಧ್ಯಾತ್ಮಿಕ ಕಲೆಯನ್ನು ಅವರು ಅರಿತಿದ್ದರು. ಮತ್ತೆ ಕೆಲ ಸಮಯಗಳಲ್ಲಿ ಜಗತ್ತಿನ ವ್ಯವಹಾರಗಳನ್ನು ಕೇವಲ ಸಾಕ್ಷಿಯಾಗಿ ನಿರಾಸಕ್ತಿಯಿಂದ ನೋಡುತ್ತಿದ್ದರು. ವಿಶ್ವದ ಸರ್ವಬಂಧನಗಳಿಂದಲೂ ಅವರು



ಮುಕ್ತರಾಗಿದ್ದರು. ನೀರಿನಲ್ಲಿದ್ದರೂ ಅದರಿಂದ ತೋಯದ ತಾವರೆಯ ಗೀತಾ ನಿದರ್ಶನ ಅವರಿಗೆ ಸಹಜವಾಗಿ ಅನ್ವಯವಾಗುತ್ತಿತ್ತು. ಬಹಿರ್ಮುಖರಾಗಿದ್ದಾಗ ಗುರುಗಳು ತುರೀಯಾಶ್ರಮದ ಕಾರ್ಯಕಲಾಪಗಳೊಂದಿಗೆ ಮಠದ ದೈನಂದಿನ ಪೂಜಾದಿಗಳನ್ನು ಚಾಚೂ ತಪ್ಪದೇ ನಿರ್ವಹಿಸುತ್ತಿದ್ದರು. ಇಷ್ಟೇ ಅಲ್ಲದೇ ಶ್ರದ್ಧಾವಂತರಾದ ಶಿಷ್ಯರಿಗೆ ಉಪದೇಶ ನೀಡುತ್ತಿದ್ದರು. ತಮ್ಮ ದುಃಖಕಷ್ಟಗಳಲ್ಲಿ ಸಲಹೆಗಾಗಿಯೋ ಅಥವಾ ಕೌತುಕವನ್ನು ತಣಿಸಲೆಂದೋ ಬರುತ್ತಿದ್ದ ವಿವಿಧ ವರ್ಗಗಳ ಜನಗಳಿಗೆ ಸಂದರ್ಶನವೀಯುತ್ತಲಿದ್ದರೂ ಸಹ ಪೂರ್ಣ ವೈರಾಗ್ಯವನ್ನೂ, ನಿರ್ಲಿಪ್ತತೆಯನ್ನೂ ಸಾಧಿಸಿದ್ದರು.

ಎಡೆಬಿಡದ ಜನಸಂದಣಿಯ ಕೋಲಾಹಲ, ಸದ್ದುಗದ್ದಲದಲ್ಲಿ– ವಿಶೇಷವಾದ ಹಬ್ಬ ಹರಿದಿನಗಳಲ್ಲಿಯೂ, ಸಂಚಾರಕಾಲದಲ್ಲಿಯೂ ಈ ಸದ್ದುಗದ್ದಲ ವಿಪರೀತವಾಗಿರುತ್ತಿತ್ತು–ಸ್ವಲ್ಪವೂ ವಿಚಲಿತರಾಗದೇ ಶಾಂತರೀತಿಯಿಂದ ತಮ್ಮಷ್ಟಕ್ಕೆ ತಾವು ಕ್ರಮಬದ್ಧವಾಗಿ ಪೂಜಾನಿರತರಾಗಿರುತ್ತಿದ್ದ ಗುರುದೇವರನ್ನು ದರ್ಶನಮಾಡುವುದೇ ಚಿತ್ತೈಕಾಗ್ರತೆ ಮತ್ತು ಮನಃಸಂಯಮ ಕಲಿತುಕೊಳ್ಳಲು ಪ್ರಾಯೋಗಿಕ ಶಿಕ್ಷಣವಾಗುತ್ತಿತ್ತು. ಒಂದುಕಡೆ ಉಚ್ಚ ಧ್ವನಿಯಲ್ಲಿ ತಾರಸ್ಥಾಯಿಯಲ್ಲಿ ವೇದ ಪಾರಾಯಣವಾಗುತ್ತಿತ್ತು. ಇನ್ನೊಂದೆಡೆ ಸಂಗೀತ ವಿದ್ವಾಂಸರಿಂದಲೋ, ತಮ್ಮ ಅಳಿಲು ಸೇವೆಯೆಂದು ಹಾಡಲು ಬಂದ ವಿದ್ಯಾರ್ಥಿಗಳಿಂದಲೋ ನುಡಿಸಲ್ಪಡುತ್ತಿರುವ ವಿವಿಧ ವಾದ್ಯಗಳ ಮೇಳ, ತಾಳಝುಲ್ಲರಿಗಳನ್ನು ಲಯಬದ್ಧವಾಗಿ ತಟ್ಟುತ್ತ, ಭಗವಂತನ ವೈಭವ ವಿಲಾಸಗಳನ್ನು ಮೈಮರೆತು ಹಾಡುತ್ತಿರುವ ಉತ್ಸಾಹೀ ಭಜಕರ ತಂಡ, ತಾಯಂದಿರ ತೋಳ್ತೆಕ್ಕೆಯಲ್ಲಿ ಅಳುತ್ತಿರುವ ಕೂಸುಗಳ ಕಿರಿಚಾಟ, ಇವೆಲ್ಲಕ್ಕಿಂತಲೂ ಹೆಚ್ಚಾಗಿ ಹರಟುತ್ತಲಿರುವ ಕಿರಿಯರು, ಹಿರಿಯರು, ಹೆಂಗಸರು, ಗಂಡಸರು, ದೊಡ್ಡದಾದ ಪಿಸುಮಾತಿನಲ್ಲಿಯೇ ವರ್ತಮಾನ ವಿನಿಮಯ ಮಾಡುತ್ತಲಿರುವ ವಿವಿಧ ರೀತಿಯ ಜನಗಳು, ಇವೆಲ್ಲವುಗಳಿಂದಲೂ ಗಿಜಿಗಿಜಿಗುಡುತ್ತಲಿರುವ ವಾತಾವರಣ, ವಿವಿಧ ರೀತಿಯ ಶಬ್ದ ಸಮ್ಮೇಲನ. ವಾಸ್ತವವಾಗಿ ಭಕ್ತಿಶ್ರದ್ಧೆಯಿಂದ ನಡೆಸಲ್ಪಡಬೇಕಾದ ಕೆಲಸಕ್ಕೆ ಅಗತ್ಯವಾದಂತಹ ಶಾಂತ, ಮೌನ ವಾತಾವರಣಕ್ಕೆ ಸಂಗತವಲ್ಲದ ಎಲ್ಲ ಅಂಶಗಳೂ ಪೂಜಾಕಾಲ ದಲ್ಲಿ ಒಟ್ಟುಗೂಡಿರುತ್ತಿದ್ದವು. ಆದರೆ ಗುರುದೇವರು ಈ ವಿಘ್ನ ವೈಪರೀತ್ಯಗಳಿಂದ ವಿಮುಖಗೊಳಿಸುವ ಸೆಳೆತಗಳಿಂದ ಎಂದೂ ವಿಚಲಿತರಾಗುತ್ತಿರಲಿಲ್ಲ. ಇವೆಲ್ಲವುಗಳಿಂದಲೂ ಬಿಡಿಸಿಕೊಂಡು ನಿರ್ಲಿಪ್ತರಾಗಿರುತ್ತಿದ್ದರು. ಅವರನ್ನು ಬಾಧಿಸುವ ತನ್ನೆಲ್ಲ ಶಕ್ತಿಯನ್ನೂ ಪ್ರಕೃತಿಯು ಕಳೆದುಕೊಂಡಿದ್ದಂತೆ ಕಾಣುತ್ತಿತ್ತು.

ತಮ್ಮ ಜನ್ಮದಿನದಂದು ಗುರುದೇವರು ಶೃಂಗೇರಿಯಲ್ಲಿರುವ ಬೆಟ್ಟದ ಮೇಲಿನ ಶ್ರೀಮಲಹಾನಿಕರೇಶ್ವರಸ್ವಾಮಿಗೆ ಮಧ್ಯಾಹ್ನ ಸ್ವತಃ ತಾವೇ ಪೂಜೆ ಸಲ್ಲಿಸುವುದು ಬಹಳ ದಿನಗಳಿಂದ ಬಂದ ವಾಡಿಕೆ. ಆ ದೇವಾಲಯದ ಗರ್ಭಗೃಹದ ವಿಸ್ತೀರ್ಣ ಬಲುಕಿರಿದು. ಗುರುದೇವರು ಅಲ್ಲಿ ಕುಳಿತ ಬಳಿಕ ಅವರಿಗೆ ಪೂಜಾದ್ರವ್ಯಗಳನ್ನು ಒಪ್ಪಿಸಲು ಒಬ್ಬ ಪರಿಚಾರಕನಿಗೆ ಚಲಿಸುವಷ್ಟು ಮಾತ್ರ ಸ್ಥಳವಿತ್ತು. ಒಮ್ಮೆ ತಮ್ಮ ವರ್ಧಂತಿಯಂದು ದೇವಾಲಯಕ್ಕೆ ದಯಮಾಡಿಸಿದ ಗುರುಗಳು, ತಮ್ಮ ಮಧ್ಯಾಹ್ನದ ಸ್ನಾನಾಹ್ನಿಕಗಳನ್ನು ಅಲ್ಲಿಯೇ ನೆರವೇರಿಸಿ, ಪೂಜೆಗಾಗಿ ಗರ್ಭಗೃಹವನ್ನು ಪ್ರವೇಶಿಸಿದರು. ಮಧ್ಯಾಹ್ನದ ಬಿಸಿಲ ಬೇಗೆ ವಿಪರೀತವಾಗಿತ್ತು. ಕಿರಿದಾದ ಗರ್ಭಗೃಹದಿಂದ ಪರಿಚಾರಕನು ಕ್ಷಣಕ್ಕೊಮ್ಮೆ ಹೊರಗೆ ಬಂದು ಹಣೆ, ಮೈಗಳಿಂದ ಸುರಿಯುತ್ತಿದ್ದ ಬೆವರೊರೆಸಿಕೊಳ್ಳುತ್ತಿದ್ದನು. ಆದರೆ ಗುರುದೇವರು ನಿರಾತಂಕವಾಗಿ ಪೂಜೆ ನಡೆಸಿ ದೀಪಾರಾಧನೆಯ ನಂತರ ಸಂಜೆ ನಾಲ್ಕು ಗಂಟೆಗೆ ಸ್ವಭಾವಸಿದ್ಧವಾದ ಹಸನ್ಮುಖದಿಂದ ಹೊರಗೆ ಬಂದರು. ಅವರ ಶ್ರೀಮುಖದಲ್ಲಿ ಆಯಾಸದ ಅಥವಾ ಬಳಲಿಕೆ ಚಿಹ್ನೆ ಲವಲೇಶವೂ ಇರಲಿಲ್ಲ. ಅಚ್ಚರಿಗೊಳಿಸುವ ಅಂಶವೆಂದರೆ ಅವರ ಲಲಾಟದಲ್ಲಿ ಧರಿಸಿದ್ದ ಭಸ್ಮವು ಆಗತಾನೇ ಧರಿಸಿದ್ದಂತೆ ಸ್ವಚ್ಛವೂ, ಪ್ರಕಾಶಮಾನವೂ ಆಗಿದ್ದು ಬೆವರಿನ ಚಿಹ್ನೆ ಕಿಂಚಿತ್ತಾದರೂ ಇರಲಿಲ್ಲ. ಪರಿಚಾರಕನು ಆಗಾಗ ಹೊರಬರುತ್ತಿದ್ದುದನ್ನು ಕಂಡವರಿಗೆ ಗುರುದೇವರು ಆಗ ತಾನೇ ಸ್ನಾನಾದಿಗಳನ್ನು ನೆರವೇರಿಸಿಕೊಂಡು ಬಂದಷ್ಟು ಸ್ವಚ್ಛವಾಗಿಯೂ, ಲವಲವಿಕೆಯಿಂದಲೂ ಇದ್ದುದು ಅಚ್ಚರಿಯ ಸಂಗತಿಯಾಗಿದ್ದಿತು.

ಇನ್ನೊಮ್ಮೆ ಹೀಗೆಯೇ ಶಿವರಾತ್ರಿ ಹಗಲು, ಗುರುದೇವರು ಪೂಜೆಗಾಗಿ ಶ್ರೀ ಮಲಹಾನಿಕರೇಶ್ವರ ದೇವಸ್ಥಾನಕ್ಕೆ ದಯಮಾಡಿಸಿದ್ದರು. ದೇವಾಲಯದ ಅಧಿಕಾರಿವರ್ಗದವರು ದೇವಾಲಯುವನ್ನು ಚೆನ್ನಾಗಿ ತೊಳೆದು ಚೊಕ್ಕಟವಾಗಿರಿಸಿದ್ದರು. ಗರ್ಭಗೃಹದ ಗೋಡೆ, ನೆಲ ಸಂದುಗೊಂದುಗಳನ್ನೆಲ್ಲಾ ಚೆನ್ನಾಗಿ ಉಜ್ಜಿ ಅಲ್ಲಿದ್ದ ಜಿಡ್ಡುಕೊಳೆಗಳನ್ನೆಲ್ಲಾ ತೆಗೆಸಿದ್ದರೂ, ಗುರುದೇವರು ಪೂಜೆಗಾಗಿ ಕುಳಿತೊಡನೆಯೇ ನೂರಾರು ಕೆಂಪಿರುವೆಗಳು ಸಂದಿಗೊಂದಿಗಳಿಂದ ಹೊರಟು ಧಾಳಿಯನ್ನಾರಂಭಿಸಿದವು. ಪೂಜಾದ್ರವ್ಯ ಉಪಕರಣಗಳನ್ನು ಅರ್ಪಿಸಲು ನಿಂತಿದ್ದ ಸೇವಕನು ಗರ್ಭಗೃಹದಲ್ಲಿ ನಿಲ್ಲಲಾಗದೇ ಕಟ್ಟಿರುವೆಗಳಂತೆ ಉಗ್ರವಾಗಿ ಕಚ್ಚುತ್ತಿದ್ದ ಇರುವೆಗಳಿಂದ ತಪ್ಪಿಸಿಕೊಳ್ಳಲು ಪ್ರತಿನಿಮಿಷವೂ ಹೊರಕ್ಕೆ ಬರುತ್ತಿದ್ದನು. ಗುರುದೇವರಾದರೋ ಆ ದಿನವೂ ಸಹ ನಿರ್ವಿಘ್ನವಾಗಿ ಪೂಜೆಯನ್ನು ನೆರವೇರಿಸಿ ಲವಲವಿಕೆಯಿಂದ



ಗರ್ಭಗೃಹದಿಂದ ಹೊರಬಂದರು. ಇರುವೆಗಳು ಪ್ರತ್ಯಕ್ಷವಾಗಿ ತಮ್ಮ ಆಪ್ತಮಿತ್ರ ನನ್ನು ಅವರಲ್ಲಿ ಕಂಡು ಅವರನ್ನು ಸ್ವಲ್ಪವೂ ಬಾಧಿಸಲಿಲ್ಲ. ಪೂಜಾದಿಗಳಿಗೆ ಸ್ವಲ್ಪವೂ ತೊಂದರೆಯುಂಟುಮಾಡಿರಲಿಲ್ಲ.

ಗುರುದೇವರು ಮಟಮಟ ಮಧ್ಯಾಹ್ನದ ಸುಡುಬಿಸಿಲಿನಲ್ಲಿ ತುಂಗಾನದಿಯ ಸೋಪಾನಗಳ ಮೇಲೆ ಗಂಟೆಗಳಗಟ್ಟಲೆ ಆಹ್ನೀಕ ಮಾಡುತ್ತ ಕುಳಿತಿರುತ್ತಿದ್ದರು. ಅವರ ಸೇವೆಗಾಗಿ ನಿಯಮಿತರಾಗಿದ್ದ ಪರಿಜನರು ಮೇಲೆ ಸುಡುತ್ತಲಿರುವ ಸೂರ್ಯನ ತಾಪವನ್ನೂ, ಕೆಳಗೆ ಕಾದಿರುವ ಕಲ್ಲಿನ ಬೇಗೆಯನ್ನೂ ತಾಳಲಾರದೇ ಸನಿಹದಲ್ಲೇ ಇದ್ದ ನೆರಳಿನ ಆಶ್ರಯಕ್ಕೆ ಹೋಗುತ್ತಿದ್ದರು. ಗುರುದೇವರ ಮನವೊಂದೇ ಅಲ್ಲ, ಅವರ ಶರೀರವೂ ಸಹ ಪ್ರಪಂಚದಿಂದ ನಿರ್ಲಿಪ್ತವಾಗಿದ್ದು ಪ್ರಕೃತಿಯ ಎಲ್ಲ ಉಪಟಳಗಳಿಂದಲೂ ಮುಕ್ತವಾಗಿತ್ತು. ಮನಸ್ಸಿನ ಸಮತೆಯನ್ನು ಗಳಿಸಿಕೊಂಡಿರುವಾತನು ಅಖಿಲಸೃಷ್ಟಿಯನ್ನೇ ವಶಮಾಡಿಕೊಂಡಿರುತ್ತಾನೆ ಎಂಬ ಗೀತಾವಾಕ್ಯದ ಸತ್ಯಸಾಕ್ಷಾತ್ಕಾರವನ್ನು ಗುರುದೇವರು ನಿಸ್ಸಂದೇಹವಾಗಿ ಸಾಧಿಸಿಕೊಂಡುಬಿಟ್ಟಿದ್ದರು.

ಸಾಮಾನ್ಯ ಮಾನವನಿಗೆ ಎಟುಕದ ಉನ್ನತ ವಿಚಾರಗಳಲ್ಲಿ ಮಗ್ನರಾಗಿರುತ್ತಿದ್ದರೂ ಸಹ, ದರ್ಶನಕ್ಕೆ ಬಂದವರೊಡನೆ ಲೋಕರೂಢಿಯಾದ ಸಾಧಾರಣ ಮಾತುಕತೆ ಗಳಲ್ಲಿ ತೊಡಗಿರುತ್ತಿದ್ದರು. ಅಂತಹ ಸಂಭಾಷಣೆಗಳನ್ನು ಸತ್ವಪೂರ್ಣಗೊಳಿಸಿ, ಜೀವನಕ್ಕೆ ಅಮೂಲ್ಯವಾದ ತಿಳಿವು ಒದಗುವಂತೆ ಮಾಡುತ್ತಿದ್ದರು.ತೀರಾ ಸಾಧಾರಣವಾದ ಪ್ರಸಂಗವನ್ನೂ ಸಹ ತುಂಬಾ ತಿಳಿವಳಿಕೆಯಿಂದ ಅಮೂಲ್ಯವೂ, ಉಪಯುಕ್ತವೂ ಆದ ನಿದರ್ಶನವನ್ನಾಗಿ ಪರಿವರ್ತಿಸುತ್ತಿದ್ದರು.

"ಗುರುರ್ಬ್ರಹ್ಮ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ । ಗುರುಸ್ಸಾಕ್ಷಾತ್ ಪರಂಬ್ರಹ್ಮ ತಸ್ಮೈ ಶ್ರೀಗುರವೇ ನಮಃ" ಎಲ್ಲರಿಗೂ ಸುಪರಿಚಿತವಾದ ಈ ಶ್ಲೋಕವು ಗುರುವನ್ನು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರೆಂದೂ, ಅಷ್ಟೇ ಅಲ್ಲದೇ ಪರಬ್ರಹ್ಮನೆಂದೂ ಸಾರುತ್ತದೆ. ಗುರುವನ್ನು ಈ ದೇವತೆಗಳಿಗೆ ಸಮನೆಂದು ಮಾತ್ರ ಸ್ತುತಿಸುವುದಿಲ್ಲ. ಆ ದೇವತೆಗಳೊಡನೆ ಗುರುವು ತಾದಾತ್ಮ್ಯ ಹೊಂದಿದ್ದಾನೆಂದೇ ಗುರುದೇವರ ನಂಬಿಕೆಯಾಗಿತ್ತು. ಈ ಅಂಶವನ್ನು ಮರೆಯಲು ಅವರು ಅವಕಾಶವನ್ನೇ ಕೊಡುತ್ತಿರಲಿಲ್ಲ. ತಮ್ಮ ಗುರುಗಳಾಗಿದ್ದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತಿಯವರಲ್ಲಿಯೂ, ಶ್ರೀಶಂಕರ ಭಗವತ್ಪಾದರಲ್ಲಿಯೂ ಅಸೀಮ ಭಕ್ತಿ ಹೊಂದಿದ್ದ ಗುರುದೇವರು ಅವರನ್ನು ಸಾಕ್ಷಾತ್ ಭಗವಂತನ ಅವತಾರವೆಂದೇ ಭಾವಿಸಿದ್ದರು.

* * *

# ೩೦. ಸಾಧಕರಿಗೆ ಮಾರ್ಗದರ್ಶನ

ಶ್ರೀಮಠದಲ್ಲಿಯೇ ಕೆಲಕಾಲದಿಂದ ನೆಲಸಿದ್ದ ಸಂನ್ಯಾಸಿಯೊಬ್ಬರು ಮೌನವಾಗಿ ಏಕಾಂತದಲ್ಲಿ ಧ್ಯಾನ, ಜಪಾನುಷ್ಠಾನ ನಿರತರಾಗಿದ್ದು ಗುರುದೇವರ ಪೂರ್ಣಾನುಗ್ರಹಕ್ಕೆ ಪಾತ್ರರಾಗಿದ್ದರು. ಮಠದಲ್ಲಿಯೇ ಸಾಕಷ್ಟು ಕಾಲದಿಂದ ಇದ್ದ ಅವರು ಎಲ್ಲರಿಗೂ ತುಂಬಾ ಪರಿಚಿತ ವ್ಯಕ್ತಿಯಾಗಿದ್ದರಿಂದ ಮಠದ ನೌಕರರು ಅವರಲ್ಲಿ ಬಹಳ ಸಲಿಗೆಯನ್ನು ತೋರುತ್ತಿದ್ದರು. ಒಂದು ದಿನ ಭಿಕ್ಷೆಯನ್ನು ಸ್ವೀಕರಿಸುತ್ತಿದ್ದ ಆ ಯತಿ ಅಡುಗೆಗೆ ಉಪ್ಪು ಸಾಲದೆಂದು ಬಾಣಸಿಗನಿಗೆ ಹೇಳಿದರು. ಆಡಿಗೆಯವ ಅವರ ಮನಸ್ಸನ್ನು ನೋಯಿಸಬೇಕೆಂಬ ಭಾವನೆಯಿಲ್ಲದೆ, ವಾಡಿಕೆಯ ಸಲಿಗೆಯಿಂದ ತಕ್ಷಣವೇ "ಏನು ಸ್ವಾಮೀ, ತಾವು ಸಂನ್ಯಾಸಿಗಳು, ಎಲ್ಲವನ್ನೂ ನಿಗ್ರಹಿಸಬೇಕಾದವರು. ತಮ್ಮ ನಾಲಿಗೆಯನ್ನೇ ನಿಯತಿಗೊಳಿಸಿಲ್ಲ. ಅದು ಇನ್ನೂ ರುಚಿಕರವಾದ ಆಹಾರಗಳ ಬೆನ್ನುಹತ್ತಿದೆ?" ಎಂದುಬಿಟ್ಟ. ಈ ಟೀಕೆ ಸ್ವಾಮಿಗಳ ಮನಸ್ಸಿಗೆ ನೋವುಂಟುಮಾಡಿತು. ಅವನಿಗೆ ಪ್ರತ್ಯುತ್ತರ ಕೊಡುವ ಗೋಜಿಗೆ ಹೋಗದೆ, ಪ್ರತಿಟೀಕೆ ಮಾಡದೇ ಊಟ ಮುಗಿಸಿ ಎದ್ದುಬಿಟ್ಟರು. ಮರುದಿನ ಮತ್ತು ಅದರ ಮುಂದಿನ ದಿನವೂ ಭೋಜನಶಾಲೆಗೆ ಹೋಗಲೇ ಇಲ್ಲ. ಬೇರೆ ಕೆಲಸಗಳಲ್ಲಿ ಮಗ್ನರಾಗಿದ್ದ ನೌಕರರು ಇದನ್ನು ಗಮನಿಸಲಿಲ್ಲ. ಮೂರನೆಯ ದಿನ ಗುರುಗಳ ದರ್ಶನಕ್ಕಾಗಿ ಬಂದ ಆ ಯತಿ ಸಾಷ್ಟಾಂಗವೆರಗಿ ನಿಧಾನವಾಗಿ ಎದ್ದುನಿಂತರು. ಅವರನ್ನು ಗಮನಿಸಿದ ಗುರುದೇವರು "ಏನು ಸಮಾಚಾರ? ನೀವು ಬಳಲಿದಂತಿದ್ದೀರಿ. ಜಪಾನುಷ್ಠಾನ ಗಳಲ್ಲಿ ಏನಾದರೂ ಮಾನಸಿಕವಾದ ತೊಂದರೆಯಿದೆಯೇ?" ಎಂದು ಕೇಳಿದರು.

"ಇಲ್ಲ, ಅಂತಹುದೇನೂ ಇಲ್ಲ." ವಿನೀತರಾಗಿ ನುಡಿದರು ಆ ಯತಿ.

"ಕಾಲಕಾಲಕ್ಕೆ ಆಹಾರ ಸೇವಿಸುತ್ತಿದ್ದೀರಿ ತಾನೇ?" ಗುರುದೇವರು ಮತ್ತೆ ಪ್ರಶ್ನಿಸಿದರು.

ಆಗ ಆ ಸ್ವಾಮಿಗಳು ತಾವು ಎರಡು ದಿನಗಳಿಂದಲೂ ಊಟ ಮಾಡಿಲ್ಲ ವೆಂದು ಹೇಳಬೇಕಾಯಿತು. ಗುರುದೇವರು ಮತ್ತೆ ಪ್ರಶ್ನಿಸಲು ಎಲ್ಲವನ್ನೂ ವಿವರಿಸಿ ಬಾಣಸಿಗನ ಅನುಚಿತ ಟೀಕೆಯಿಂದ ತಮಗೆ ಅಪಮಾನವಾಯಿತೆಂದು ನಿವೇದಿಸಿಕೊಂಡರು.

"ನೀವು ಇಲ್ಲಿರುವುದರ ಉದ್ದೇಶ ಊಟವಲ್ಲ. ಹಸಿವನ್ನಡಗಿಸುವ ಸಾತ್ವಿಕ ಆಹಾರ ಯಾವುದಾದರಾಗಿರಲಿ, ಅದರಿಂದ ತೃಪ್ತಿ ಹೊಂದಬೇಕು. ಬಾಣಸಿಗನು



ಟೀಕೆ ಮಾಡಿದುದು ನಿಸ್ಸಂದೇಹವಾಗಿಯೂ ಅಧಿಕಪ್ರಸಂಗಿತನ. ಆಹಾರದ ರುಚಿ ಮುಖ್ಯವಲ್ಲ, ಆಹಾರವು ಹಸಿವನ್ನಡಗಿಸಿದರೆ ಸಾಕು ಎಂಬ ಯುಕ್ತವಾದ ಸಲಹೆಯೆಂದು ಭಾವಿಸಿಕೊಂಡು ಆತನ ಮಾತನ್ನು ಪರಿಗ್ರಹಿಸಬಾರದೆ? ಸರಿಯಾಗಿ ಉಪ್ಪನ್ನು ಬೆರೆಸಿಲ್ಲವೆಂಬ ನಿಮ್ಮ ಟೀಕೆಯೇ ಆತನ ಪ್ರತಿಟೀಕೆಗೆ ಕಾರಣವಾಯಿತು. ನೀವು ನಿಮ್ಮ ಮನಸನ್ನು ಬಿಗಿಹಿಡಿದು, ಊಟ ಮಾಡಿದ್ದರೆ, ಆ ಅಡುಗೆಯವನು ತಾನು ಆಹಾರವನ್ನು ತೆಗೆದುಕೊಂಡಾಗ ಉಪ್ಪನ್ನು ಸರಿಯಾಗಿ ಹಾಕಿಲ್ಲವೆಂಬುದನ್ನು ಅರಿತು ಅಂತಹ ಖಾದ್ಯವನ್ನು ನಿಮಗೆ ಬಡಿಸಿದ್ದಕ್ಕಾಗಿ ಪಶ್ಚಾತ್ತಾಪ ಪಡುತ್ತಿದ್ದ. ತನ್ನ ಅಲಕ್ಷ್ಯಕ್ಕಾಗಿ ನಿಮ್ಮ ಕ್ಷಮೆ ಯಾಚಿಸುತ್ತಿದ್ದ ಮತ್ತು ಮುಂದೆ ಅಡುಗೆ ಮಾಡುವಾಗ ಎಚ್ಚರಿಕೆಯಿಂದಿರುತ್ತಿದ್ದ. ನೀವು ಮಾತನಾಡದೇ ಮೌನವಾಗಿದ್ದು ಬಿಟ್ಟಿದ್ದರೆ ಹೀಗಾಗಬಹುದಿತ್ತು. ತಟ್ಟನೆ ನೀವಾಡಿದ ಮಾತು ಆತನನ್ನು ಕೆರಳಿಸಿತು. ಅವನ ಪ್ರತ್ಯುತ್ತರ ನಿಮ್ಮನ್ನು ಕೆರಳಿಸಿತು. ಅದರಿಂದ ನಿಮ್ಮ ಮನಃಸ್ವಾಸ್ಥ್ಯ ತಪ್ಪಿತು. ಧ್ಯಾನ, ಜಪಾನುಷ್ಠಾನಗಳಲ್ಲಿ ಮನಶ್ಶಾಂತಿಯು ಕದಡಿ, ನೀವು ಎರಡು ದಿನ ಉಪವಾಸವಿರಬೇಕಾಯಿತು" ಎಂದು ಸಾಂತ್ವನಗೊಳಿಸುವ ನುಡಿಗಳಲ್ಲಿ ಗುರುದೇವರು ಹೇಳಿದರು.

"ಹೌದು ಮಹಾಸ್ವಾಮಿ, ಈಗ ನನ್ನ ತಪ್ಪಿನ ಅರಿವಾಗುತ್ತಿದೆ" ಎಂದು ಪಶ್ಚಾತ್ತಾಪದ ಧ್ವನಿಯಲ್ಲಿ ಬಿನ್ನವಿಸಿದರು ಆ ಯತಿ.

"ಆಧ್ಯಾತ್ಮಿಕ ಸಾಧನೆಯಲ್ಲಿ ಸಹಾಯಮಾಡಲು ಈ ಪ್ರಸಂಗ ನಿಮಗೆ ಅನುಕೂಲವಾಗಿಯೇ ಬಂದಿದೆ. ಈ ದೃಷ್ಟಿಯಿಂದ ಪ್ರಸಂಗವನ್ನು ಗಮನಿಸಿ. ಆಗ ಮನಸ್ಸಿಗೆ ನೆಮ್ಮದಿ, ಶಾಂತಿ ದೊರಕುತ್ತದೆ."

ಆ ಯತಿಗಳು ಗುರುದೇವರ ಈ ಸಲಹೆಯನ್ನು ನಿಷ್ಠೆಯಿಂದ ಪಾಲಿಸುತ್ತ ಲೌಕಿಕವಾದ ಮಾತುಕತೆಗಳತ್ತ ಗಮನವೀಯದೇ ಜಪಾನುಷ್ಠಾನ ನಿರತರಾದರು.

ಶಿಷ್ಯರೊಬ್ಬರು ತಮ್ಮ ಪೂಜಾಸಂಪುಟವನ್ನು ತಂದು ಗುರುದೇವರಿಗೆ ತೋರಿಸಿದರು. ಗುರುದೇವರು ಆ ಪೂಜಾಸಂಪುಟದಲ್ಲಿದ್ದ ಶಿವಲಿಂಗಗಳನ್ನೂ, ಸಾಲಿಗ್ರಾಮಗಳನ್ನೂ ಜಾಗರೂಕತೆಯಿಂದ ಪರಿಶೀಲಿಸುತ್ತಾ ಇದ್ದು ಒಂದು ಸಾಲಿಗ್ರಾಮವನ್ನು ತೆಗೆದು ಪ್ರತ್ಯೇಕವಾಗಿ ಇಟ್ಟರು. ಆ ಸಾಲಿಗ್ರಾಮವು ಭಿನ್ನವಾಗಿದ್ದು ಪೂಜಾರ್ಹವಲ್ಲವೆಂದು ತರುವಾಯ ತಿಳಿಯಿತು. ಪೂಜಾ ಸಂಪುಟವನ್ನು ಹಿಂದಿರುಗಿಸುತ್ತಾ

"ನಿತ್ಯವೂ ಪೂಜೆಯನ್ನು ನೀವೇ ಮಾಡುತ್ತಿದ್ದೀರೆಂದು ನನ್ನ ಎಣಿಕೆ" ಎಂದರು ಗುರುಗಳು.

"ಹೌದು ನಾನೇ ಮಾಡುತ್ತಿದ್ದೇನೆ. ನಾನೇನೂ ಹೆಚ್ಚು ಮಂತ್ರಗಳನ್ನು

ಬಲ್ಲವನಲ್ಲ. ಪುರುಷಸೂಕ್ತ ಮತ್ತು ಶ್ರೀರುದ್ರಸೂಕ್ತಗಳನ್ನು ಬಲ್ಲೆ. ಇರುವ ಅಲ್ಪ ಸಲಕರಣೆಗಳಿಂದಲೇ ಶಾಸ್ತ್ರವಿಹಿತವಾದ ರೀತಿಯಲ್ಲಿ ನಾನೇ ಪೂಜೆಯನ್ನಂತೂ ಮಾಡುತ್ತಿದ್ದೇನೆ" ಆತ ಬಿನ್ನವಿಸಿದರು.

"ಅದು ಒಳ್ಳೆಯದು. ನಮಗೆ ಹಸಿವಾದಾಗ ಚೆನ್ನಾಗಿ ಊಟ ಮಾಡತಕ್ಕಂತಹ ಇನ್ನೊಬ್ಬ ವ್ಯಕ್ತಿಯನ್ನು ಕರೆದು ಊಟಮಾಡಲು ಹೇಳಿ ಆತನಿಗೆ ಬಡಿಸಿದರೆ, ನಮ್ಮ ಹಸಿವು ಇಂಗುವುದಿಲ್ಲ. ಊಟಮಾಡುವ ಕ್ರಮ ನಮಗೆ ತಿಳಿಯದಿದ್ದರೂ ನಾವೇ ಊಟ ಮಾಡಬೇಕು. ಆಗಲೇ ನಮ್ಮ ಹಸಿವಿನ ಉಪಶಮನವಾಗಿ ತೃಪ್ತಿಯಾಗುವುದು. ಕೆಲವು ಜನ ಶ್ರೀಮಂತರು ನಿತ್ಯವೂ ದೇವರ ಪೂಜೆಯನ್ನು ಮಾಡುವುದು ತಮ್ಮ ಅಂತಸ್ತಿಗೆ ಕಡಿಮೆಯೆಂದು ಭಾವಿಸಿ, ಅಲ್ಪ ಸಂಭಾವನೆಯ ಮೇಲೆ, ಯಾರಾದರೂ ವೈದಿಕರನ್ನು ಪೂಜೆಮಾಡಲು ನೇಮಕ ಮಾಡುತ್ತಾರೆ. ಪ್ರತಿಫಲಕ್ಕಾಗಿ ಶಾಸ್ತ್ರಿಗಳೋ, ಭಟ್ಟರೋ ಪೂಜೆಮಾಡುವುದರಿಂದ ಯಾವ ಆಧ್ಯಾತ್ಮಿಕ ಪುಣ್ಯವೂ ಅವರಿಗೆ ದೊರಕದು. ಆ ಶ್ರೀಮಂತನು ತಾನೇ ಪೂಜೆ ಮಾಡದ್ದರಿಂದ ಆತನಿಗೂ ಯಾವ ಆಧ್ಯಾತ್ಮಿಕ ಫಲವೂ ಲಭಿಸದು. ಈ ರೀತಿಯ ಪೂಜೆಯಿಂದ ಇಬ್ಬರಿಗೂ ಪಾರಮಾರ್ಥಿಕ ಪ್ರಯೋಜನವಿಲ್ಲ. ಒಟ್ಟಿನಲ್ಲಿ ಶ್ರೀಮಂತನು ತನ್ನ ಧನವನ್ನು ಬಡವರಿಗೆ ಹಂಚಲು ಇದೊಂದು ಸುರಕ್ಷಿತವಾದ ಮಾರ್ಗ. ಶಾಸ್ತ್ರಸಮ್ಮತವಾದಂತಹ, ಜಟಿಲವಾದ ಕೆಲವು ಧಾರ್ಮಿಕ ಕರ್ಮಗಳಲ್ಲಿ ಬೇರೆಯವರ ಸಹಾಯವು ಅತ್ಯವಶ್ಯಕ. ಆದರೆ ನಿತ್ಯ ಮಾಡುವ ಪೂಜೆ ಆಂತಹುದಲ್ಲ. ಇರುವಂಥ ಅಲ್ಪಾವಕಾಶದಲ್ಲಿಯೇ 'ಪೂಜೆ ಅಂತೂ ಇಂತೂ' ಆದರೂ ಸರಿ, ಯಾವಾತನು ಪುಣ್ಯಾರ್ಜನೆ ಮಾಡಬೇಕೋ, ಆತನೇ ನಿತ್ಯಪೂಜೆಯನ್ನೂ ಸಹ ಮಾಡಬೇಕು." ಎಂಬುದಾಗಿ ಗುರುಗಳು ಅವರಿಗೆ ಬೋಧಿಸಿದರು.

* * *



# ೩೧. ಜಪಾನುಷ್ಠಾನದಲ್ಲಿ ತೊಡಕು

ಶ್ರದ್ಧಾನ್ವಿತನಾದ ಶಿಷ್ಯನೊಬ್ಬ ತನ್ನ ದೈನಂದಿನ ಜಪದಲ್ಲಿ ಉಂಟಾಗುತ್ತಿದ್ದ ತೊಡಕಿನ ನಿವಾರಣೆಗಾಗಿ ಗುರುದೇವರ ಸನ್ನಿಧಿಗೆ ಬಂದರು.

"ನನಗೆ ಹಲವು ಮಂತ್ರಗಳ ಉಪದೇಶವಾಗಿದೆ. ಅವೆಲ್ಲವೂ ಬೇರೆಬೇರೆ ದೇವತೆಗಳನ್ನು ಕುರಿತಾದವು. ಪ್ರತಿದೇವತೆಗೂ ಪ್ರತ್ಯೇಕವಾದ ಧ್ಯಾನಶ್ಲೋಕವಿದೆ. ಧ್ಯಾನಶ್ಲೋಕದಲ್ಲಿ ವರ್ಣಿತವಾದ ಮೂರ್ತಿಯ ರೂಪ ಆಕರ್ಷಕವಾಗಿರದು. ಅಷ್ಟೇ ಅಲ್ಲದೇ ಅಂತಹ ಮೂರ್ತಿಯನ್ನು ಮನಸ್ಸಿನಲ್ಲಿ ಊಹಿಸಿಕೊಳ್ಳುವುದೂ ಅಸಾಧ್ಯವಾದ ಕೆಲಸ. ಅತ್ಯಂತ ಕಷ್ಟದಿಂದ ಅಂತಹ ಮೂರ್ತಿಯನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡರೂ, ಅದು ವಿಲಕ್ಷಣವಾಗಿರುತ್ತದೆ. ನಿದರ್ಶನಕ್ಕಾಗಿ ಐದು ತಲೆಗಳು ಮತ್ತು ಹತ್ತು ಕೈಗಳುಳ್ಳ ಮೂರ್ತಿಯನ್ನು ಊಹಿಸಿಕೊಂಡರೆ ಕೆಲಕ್ಷಣಗಳಷ್ಟು ಕಾಲವೂ ಸಹ, ಅದನ್ನು ಮನಸ್ಸಿನಲ್ಲಿ ಹಿಡಿದಿಡಲಾಗುವುದಿಲ್ಲ. ನಿರ್ದಿಷ್ಟ ಜಪವನ್ನು ಮುಗಿಸಿ ಮುಂದಿನ ಜಪವನ್ನು ಮಾಡಬೇಕಾಗಿ ಬಂದಾಗ, ಪೂರ್ವ ಜಪದ ದೇವಮೂರ್ತಿಗಿಂತ ತೀರಾ ಭಿನ್ನವಾದ ಬೇರೆ ದೇವಮೂರ್ತಿಯ ಚಿತ್ರವನ್ನು ಊಹಿಸಿಕೊಳ್ಳಬೇಕಾಗುತ್ತದೆ. ಅದು ಹೆಚ್ಚು ತ್ರಾಸದಾಯಕವಾಗುತ್ತದೆ. ಹಾಗೆ ಮಾಡಲು ಹೆಚ್ಚು ಮಾನಸಿಕ ಶ್ರಮ ಉಂಟಾಗುತ್ತದೆ. ನಾನೆಷ್ಟು ಶ್ರದ್ಧೆಯಿಂದ ಜಪದಲ್ಲಿ ನಿರತನಾದರೂ, ಪರಿಣಾಮದಲ್ಲಿ ಜಪವೂ ಸಹ ಶ್ರಮದ ಕೆಲಸವೆನ್ನಿಸಿಬಿಡುತ್ತದೆ" ಎಂದು ಆತ ವಿಜ್ಞಾಪಿಸಿದರು.

"ವಿಶೇಷವಾದ ಕಾಮಿತಾರ್ಥಗಳನ್ನು ಬಯಸಿ ಆ ಇಷ್ಟಕಾಮ್ಯಗಳನ್ನು ಕೊಡುವಂಥ ದೇವರುಗಳನ್ನು ಉದ್ದೇಶಿಸಿ ಜಪ ಮಾಡುತ್ತಿದ್ದೀರಾ? ವಿಶೇಷವಾದ ಕಾಮ್ಯಗಳನ್ನು–ಆಸೆ ಆಕಾಂಕ್ಷೆಗಳನ್ನು– ಹೊಂದಿದ್ದಲ್ಲಿ, ಆಯಾ ಧ್ಯಾನ ಶ್ಲೋಕಗಳಲ್ಲಿರುವಂತೆ ಮಂತ್ರದೇವತೆಯ ರೂಪವನ್ನು ಮನಸ್ಸಿನಲ್ಲಿ ನೆಲೆಗೊಳಿಸಲು ನೀವು ಶ್ರಮಪಡಲೇಬೇಕು" ಗುರುದೇವರು ನುಡಿದರು.

"ನಾನು ಯಾವ ಕಾಮ್ಯವನ್ನೂ ಹೊಂದಿಲ್ಲ"

"ಚಿತ್ತಶುದ್ಧಿ ಮತ್ತು ಭಗವತ್ಕಾರುಣ್ಯವೇ ವಿನಾ ಬೇರೆ ಯವ ಉದ್ದೇಶವೂ ನಿಮಗಿಲ್ಲವೆಂದಾಯಿತು."

"ಹೌದು."

"ಹಾಗಿದ್ದ ಪಕ್ಷದಲ್ಲಿ ಧ್ಯಾನಶ್ಲೋಕಗಳಲ್ಲಿ ವರ್ಣಿತವಾದ ಮಂತ್ರಾಭಿಮಾನೀ ದೇವತೆಯ ಮಾನಸಚಿತ್ರವನ್ನು ರೂಪಿಸಿಕೊಳ್ಳಲು ನೀವು ಶ್ರಮಪಡಬೇಕಾಗಿಲ್ಲ."

"ಧ್ಯಾನಶ್ಲೋಕಗಳನ್ನು ಉಚ್ಚರಿಸಬಾರದೆಂದು ಸನ್ನಿಧಾನದ ಅಭಿಪ್ರಾಯವೇ?"

"ಹಾಗಲ್ಲ, ಧ್ಯಾನಶ್ಲೋಕಗಳನ್ನು ತಪ್ಪದೇ ಹೇಳಲೇಬೇಕು."

"ಶ್ಲೋಕದಲ್ಲಿ ಚಿತ್ರಿಸಲ್ಪಟ್ಟ ಮಂತ್ರಾಭಿಮಾನೀ ದೇವತೆಯನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳದೇ, ಕೇವಲ ಧ್ಯಾನಶ್ಲೋಕವನ್ನು ಮಾತ್ರ ಹೇಳುವುದರ ಉದ್ದೇಶವೇನು?"

"ಮನಸ್ಸಿನಲ್ಲಿ ಮೂರ್ತಿಯ ಕಲ್ಪನೆ ಅನವಶ್ಯಕವೆಂದು ನಾನು ಹೇಳಲಿಲ್ಲ."

"ಮನಸ್ಸಿನಲ್ಲಿ ಮೂರ್ತಿಯ ಚಿತ್ರ ಅವಶ್ಯಕವಾಗಿದ್ದಲ್ಲಿ, ಆ ಚಿತ್ರ ಧ್ಯಾನ ಶ್ಲೋಕದಲ್ಲಿ ವರ್ಣಿತವಾದುದಕ್ಕೆ ಹೊಂದದಿದ್ದಲ್ಲಿ ಅವುಗಳಲ್ಲಿ ಪರಸ್ಪರ ವಿರೋಧವಿರದಿದ್ದರೂ, ವ್ಯತ್ಯಾಸವಿರುವುದಿಲ್ಲವೇ?"

"ನಿಮ್ಮ ಮಾನಸಮೂರ್ತಿಯಲ್ಲಿ ಆಯಾ ಮಂತ್ರಾಭಿಮಾನೀ ದೇವತೆಯೂ ಇದೆಯೆಂದು ಭಾವಿಸಿಕೊಂಡಲ್ಲಿ ವ್ಯತ್ಯಾಸವಿರದು."

"ಸರ್ವವ್ಯಾಪಿಯಾದ ವಿಶ್ವರೂಪವನ್ನು ಮನಸ್ಸಿನಲ್ಲಿ ಧರಿಸಬೇಕೆಂದು ಸನ್ನಿಧಾನದ ಅಭಿಪ್ರಾಯವಿದ್ದಲ್ಲಿ, ಅಂತಹ ಚಿತ್ರವೊಂದನ್ನು ಕಲ್ಪಿಸಿಕೊಳ್ಳುವುದು ಅತ್ಯಂತ ಶ್ರಮಸಾಧ್ಯವಾದುದು. ಅಷ್ಟೇ ಅಲ್ಲದೆ ಆ ಅಗಾಧವಾದ ಮೂರ್ತಿಯು ಪ್ರಭಾವಶಾಲಿಯೂ ಆಗಿದ್ದು, ಅರ್ಜುನನಿಗಾದಂತೆ ಭಯಂಕರವೂ ಆಗಿರ ಬಹುದು. ಆದರೆ ಅದು ಸಾಧಕನು ಹೆಚ್ಚುಕಾಲ ಮನಸ್ಸಿನಲ್ಲಿ ಹಿಡಿದಿರ ಬಹುದಾದಷ್ಟು ಆಕರ್ಷಕವಾಗಿರದು."

"ವಿಶ್ವರೂಪವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವುದು ಕಷ್ಟ ಮತ್ತು ಅದು ಆಕರ್ಷಕವಾಗಿರದು ಎಂದು ನೀವು ಹೇಳಿದ್ದು ಸರಿ. ಆದರೆ ನಾನು ಹೇಳುತ್ತಿರುವುದು ಅಂತಹ ಚಿತ್ರವಲ್ಲ."

"ಹಾಗಾದರೆ ಸನ್ನಿಧಾನವು ಸೂಚಿಸಿದ ಮನೋಚಿತ್ರಣವೆಂತಹುದು?"

"ನಿಮ್ಮ ಲಕ್ಷ್ಯವನ್ನು ಕೊಂಚಕಾಲವಾದರೂ ಹಿಡಿದಿಡುವಂತಹ, ಸುಲಭವಾಗಿ ಊಹಿಸಿಕೊಳ್ಳಬಹುದಾದ ಮತ್ತು ಆಕರ್ಷಕವಾಗಿಯೂ ಇರತಕ್ಕಂತಹ ಮನೋಚಿತ್ರ ಅಗತ್ಯವೆಂದು ತಾನೇ ನೀವು ಅಪೇಕ್ಷಿಸುವುದು?"

"ಹೌದು."

"ಅಂತಹ ಚಿತ್ರವು ನೂತನವಾಗಿ ಕಲ್ಪಿಸಿಕೊಳ್ಳುವಂತಹ ಅವಶ್ಯಕತೆಯಿಲ್ಲದೆ ಈಗಾಗಲೇ ಅಸ್ತಿತ್ವದಲ್ಲಿ ಇರುವಂತಹುದಾದರೆ ಇನ್ನು ಒಳ್ಳೆಯದಲ್ಲವೇ?"

"ಹೌದು, ಖಂಡಿತವಾಗಿಯೂ ಒಳ್ಳೆಯದು."

"ಮನಸ್ಸಿಗೆ ಆಕರ್ಷಕವಾಗುವಂತಹ ರೂಪ ಕೊಡುವ ಅಗತ್ಯವಿಲ್ಲದ ಆ ಚಿತ್ರ ಸ್ವಾಭಾವಿಕವಾಗಿಯೇ ಆಕರ್ಷಕವಾಗಿದ್ದರೆ ಅತ್ಯಂತ ಒಳ್ಳೆಯದಲ್ಲವೇ?"



"ಹೌದು ಹೌದು."

"ನಮಗಿಂತ ಹಿಂದಿನವರಿಗೆ ಇಂತಹ ಮನೋಚಿತ್ರಗಳ ಕಲ್ಪನೆಯಲ್ಲಿ ನೀವು ಹೇಳಿದಂತಹ ತೊಂದರೆ ತೊಡಕುಗಳು ಇದ್ದಿರಬಹುದು. ಆದರೆ ಆ ತೊಡಕುಗಳು ನಮಗಿಲ್ಲವೆಂಬುದು ನಿಸ್ಸಂಶಯ."

"ಹೇಗೆ ಮಹಾಸ್ವಾಮಿ?"

"ನೀವು ನಮ್ಮ ಗುರುವರ್ಯರನ್ನು ನೋಡಿದ್ದೀರಿ ಅಲ್ಲವೇ?"

"ಹೌದು, ಅವರ ದರ್ಶನ ಮಾಡಿದ್ದೆ."

"ಅವರನ್ನು ಒಂದೇ ಒಂದು ಸಲ ಮಾತ್ರ ನೋಡಿದ್ದರೆ ಸಾಕಾಗಿತ್ತು. ಅವರು ನಮ್ಮಲ್ಲುಂಟುಮಾಡುತ್ತಿದ್ದ ಪ್ರಭಾವ ಮನಸ್ಸಿನಲ್ಲಿ ದೃಢವಾಗಿ ನಾಟಿ, ಸ್ಮರಿಸಿದೊಡನೆಯೇ ಅವರ ದಿವ್ಯಮೂರ್ತಿ ಒಳಗಂಗಳೆದುರು ಮೂಡುತ್ತದೆ."

"ದಿಟವಾಗಿಯೂ ಹೌದು."

"ಅವರದು ಆಕರ್ಷಕ ವ್ಯಕ್ತಿತ್ವವೆಂದೂ, ಮನಸ್ಸಿನಲ್ಲಿ ಅವರ ಭವ್ಯ ವ್ಯಕ್ತಿತ್ವ ಕಲ್ಪನೆ ನಿಜವಾಗಿ ಹರ್ಷವುಂಟುಮಾಡುತ್ತದೆಂದೂ ಒಪ್ಪುತ್ತೀರಲ್ಲವೇ?"

"ಹೌದು, ಯಥಾರ್ಥವಾದ ಮಾತು ತಮ್ಮದು."

"ನಿಮ್ಮ ಜಪಕ್ಕೆ ಅವಶ್ಯಕವಾದ ಎರಡು ಅಗತ್ಯಗಳು ಇಲ್ಲಿವೆ. ಸುಲಭವಾಗಿ ಊಹೆಗೆ ನಿಲುಕುವಂತಹುದು ಮತ್ತು ಆಕರ್ಷಣೀಯವಾದುದು. ಮನಸ್ಸಿಗೆ ತ್ರಾಸ ಕೊಟ್ಟು ಕಾಲ್ಪನಿಕ ಚಿತ್ರವನ್ನು ಊಹಿಸಿಕೊಂಡು, ಅದನ್ನು ಆಕರ್ಷಕವಾಗಿ ಮಾಡುವ ಬದಲು, ನೀವೇ ದರ್ಶನಗೈದಿದ್ದ, ಸರ್ವವಿಧಗಳಿಂದಲೂ ಆಕರ್ಷಕವಾಗಿದ್ದ ದೈವೀಪುರುಷರ ಸ್ವಯಂಸಿದ್ಧವಾದ ಚಿತ್ರ ನಿಮಗೆ ದೊರೆತಿದೆ."

"ಶಿವನನ್ನೋ, ವಿಷ್ಣುವನ್ನೋ ಕುರಿತು ಜಪಮಾಡುವಾಗ ಗುರುವರ್ಯರ ಮೂರ್ತಿಯನ್ನು ಧ್ಯಾನಿಸುತ್ತಿದ್ದರೆ ಅದು ವಿರೋಧವಾಗುವುದಿಲ್ಲವೇ?"

"ವಿರೋಧವೇಕಾಗುತ್ತದೆ? ಗುರುರ್ಬ್ರಹ್ಮ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ । ಗುರುಸ್ಸಾಕ್ಷಾತ್ ಪರಂಬ್ರಹ್ಮ ತಸ್ಮೈ ಶ್ರೀಗುರವೇ ನಮಃ ಎಂಬ ಶ್ಲೋಕವನ್ನು ಕೇಳಿದ್ದೀರಲ್ಲವೇ? ಗುರುವೆಂದರೆ ಸಾಕ್ಷಾತ್ ಪರಬ್ರಹ್ಮನೇ ಎಂದೂ, ಪರಮಾತ್ಮನ ಎಲ್ಲ ಮಿತಿ ವ್ಯಾಪಕತ್ವವನ್ನೂ, ಅವತಾರ ವಿಭೂತಿಯನ್ನೂ ಒಳಗೊಂಡಿರುತ್ತಾನೆಂದೂ ನಮ್ಮ ನಂಬಿಕೆ. ಆದ್ದರಿಂದ ಧ್ಯಾನಶ್ಲೋಕ ಪಠಿಸುವಾಗ ಅಥವಾ ಮಂತ್ರ ಜಪ ಮಾಡುವಾಗ ಅದಾವ ದೇವತೆಯನ್ನೇ ಕುರಿತದ್ದಾಗಿರಲಿ, ಮನಸ್ಸಿನಲ್ಲಿ ಗುರುಮೂರ್ತಿಯನ್ನು ಧ್ಯಾನಿಸುವುದು ವಿರೋಧವಾಗದು. ಕಾರಣವಿಷ್ಟೇ, ಆ ದೇವತೆಯೂ ಸಹ ಗುರುವಿನಲ್ಲಿಯೇ ಸನ್ನಿಹಿತವಾಗಿರುತ್ತದೆ.

"ಯಾವ ಮಂತ್ರ ಜಪವೇ ಆಗಲಿ, ಗುರುಮೂರ್ತಿಯನ್ನು ಮನಸ್ಸಿನಲ್ಲಿ ಧ್ಯಾನಿಸಬೇಕೆಂದು ನಾನು ಗ್ರಹಿಸಬಹುದೇ?"

"ಏಕಾಗಬಾರದು? ಒಂದು ಮಂತ್ರಜಪವಾದ ನಂತರ, ಮಾಡಬೇಕಾದ ಇನ್ನೊಂದು ಮಂತ್ರಜಪದ ಅಭಿಮಾನೀ ದೇವತೆಯೂ ಗುರುವಿನಲ್ಲಿಯೇ ಸನ್ನಿಹಿತವಾಗಿರುವಾಗ, ಮೂರ್ತಿಯ ಚಿತ್ರವನ್ನು ಬದಲಾಯಿಸಬೇಕಾದ ಅವಶ್ಯಕತೆಯೇನು? ಎಲ್ಲ ದೇವತೆಗಳೂ ಗುರುವಿನಲ್ಲಿದ್ದಾರೆಂದು ಶಾಸ್ತ್ರಗಳು ಘೋಷಿಸುವಾಗ, ತುರೀಯಾಶ್ರಮದಲ್ಲಿದ್ದವರೂ, ಆತ್ಮಸಾಕ್ಷಾತ್ಕಾರದ ಚರಮ ಸೀಮೆಯಲ್ಲಿದ್ದವರೂ ಆದ ಗುರುವರ್ಯರಲ್ಲಿ ಎಲ್ಲ ದೇವತೆಗಳೂ ಇದ್ದಾರೆನ್ನುವುದು ಗ್ರಾಹ್ಯವಲ್ಲವೇ? ನೀವು ಪೂಜಿಸಬೇಕಾದ ಯಾವ ದೇವತೆಯನ್ನೇ ಆಗಲಿ, ಗುರುವರ್ಯರು ಪ್ರತಿನಿಧಿಸಲಾರರೇ?"

ಈ ಮಾರ್ಗದರ್ಶನ ಆತನಿಗೆ ಬಹಳ ನೆರವಾಯಿತು.

ಗುರುದೇವರಲ್ಲಿ ತುಂಬಾ ಭಕ್ತಿ ಶ್ರದ್ಧೆಯಿಟ್ಟಿದ್ದ ಸಂನ್ಯಾಸಿಯೊಬ್ಬರು, ತುಂಗಾನದಿಯ ಉತ್ತರದಲ್ಲಿದ್ದ, ಮಠಕ್ಕೆ ಸೇರಿದ್ದ ವಸತಿಯಲ್ಲಿ, ಪೂಜೆ, ಅನುಷ್ಠಾನ ಮತ್ತು ಅಧ್ಯಯನಕ್ಕೆ ಅನುಕೂಲವಾದ ಕೊಠಡಿಯೊಂದಲ್ಲಿ ಇದ್ದರು. ಪ್ರತಿದಿನವೂ ತಮ್ಮ ಬೆಳಗಿನ ಅನುಷ್ಠಾನಾದಿಗಳನ್ನು ಮುಗಿಸಿಕೊಂಡು, ನದಿಯನ್ನು ದಾಟಿ, ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರ ಅಧಿಷ್ಠಾನದಲ್ಲಿ ತಮ್ಮ ವಂದನೆಗಳನ್ನು ಸಲ್ಲಿಸಿ, ಆ ಬಳಿಕ ಗುರುದೇವರ ದರ್ಶನಕ್ಕೆ ಬರುತ್ತಿದ್ದರು. ಒಂದು ದಿನ ಗುರುದೇವರು ಅವರನ್ನು ಕುರಿತು "ನೀವು ನಿತ್ಯವೂ ಇಲ್ಲಿಗೆ ಬರುವುದೇಕೆ?" ಎಂದು ಪ್ರಶ್ನಿಸಿದರು.

"ಆಚಾರ್ಯಪಾದರ ದರ್ಶನಗೈದು ಪ್ರಣಾಮ ಸಲ್ಲಿಸಲೆಂದು ಬರುತ್ತಿದ್ದೇನೆ" ಸಂನ್ಯಾಸಿಗಳು ವಿವರಿಸಿದರು.

"ನಿಮ್ಮ ವಾಸಸ್ಥಾನದಲ್ಲಿಯೇ ಆಚಾರ್ಯರ ಪಾದುಕೆಗಳಿವೆಯಲ್ಲವೆ?"

"ಹೌದು"

"ನೀವು ಪ್ರತಿ ಪ್ರಾತಃಕಾಲವೂ ಅವುಗಳಿಗೆ ಪ್ರಣಾಮ ಮಾಡುತ್ತಿದ್ದೀರಾ?"

"ಹೌದು, ತಪ್ಪದೇ ಮಾಡುತ್ತಿದ್ದೇನೆ"

"ಹಾಗಾದರೆ ನೀವು ಇಲ್ಲಿ ಬರುತ್ತಿರುವುದರ ಕಾರಣ? ನಿಮ್ಮ ನಮಸ್ಕಾರಗಳು ಹೊಳೆಯ ಈ ಬದಿಯಲ್ಲಿರುವ ಆಚಾರ್ಯರಿಗೆ ತಲುಪುವುದಿಲ್ಲವೆಂಬ ಅಂಜಿಕೆಯೆ?"

"ಹಾಗಲ್ಲ, ಆಚಾರ್ಯರ ಅಧಿಷ್ಠಾನಕ್ಕೇ ಬಂದು ಅವರ ಶ್ರೀಪಾದಗಳಿಗೆ ವಂದನೆ ಮಾಡುವಂತಹ ಅವಕಾಶವನ್ನು ತಪ್ಪಿಸಿಕೊಳ್ಳಬಾರದೆಂದು ನಾನು ನಿತ್ಯವೂ ಇಲ್ಲಿಗೆ ಬರುತ್ತಿದ್ದೇನೆ."



"ಆಚಾರ್ಯರ ಪಾದುಕೆಗಳಿಗೆ ಮಾಡುವ ನಮಸ್ಕಾರ ಅವರಿಗೆ ಮಾಡಿದಂತಲ್ಲವೆಂದು ನಿಮ್ಮ ಅಭಿಪ್ರಾಯವೇನು?"

"ಹಾಗಲ್ಲ ನಾನು ಹೇಳಿದ್ದು, ಪಾದುಕೆಗಳು ಕೇವಲ ಪ್ರತೀಕಗಳು. ಮೂಲಮೂರ್ತಿಗೇ ವಂದನೆ ಮಾಡುವ ಅವಕಾಶವಿರುವಾಗ ಅದನ್ನೇಕೆ ಕಳೆದುಕೊಳ್ಳಬೇಕು?"

"ಅಂದರೆ, ಇತ್ತಕಡೆ ಬರುವ ಆಲೋಚನೆ ಮಾಡಿದಾಗಲೆಲ್ಲ, ನಿಮ್ಮ ಕೊಠಡಿಯಲ್ಲೇ ಇರುವ ಪಾದುಕೆಗಳಿಗೆ ನಮಸ್ಕಾರ ಮಾಡುವುದಿಲ್ಲವೆಂದು ನನ್ನ ಎಣಿಕೆ"

"ಇಲ್ಲ, ಅಲ್ಲಿಯೂ ವಂದನೆ ಸಲ್ಲಿಸುತ್ತೇನೆ."

"ಪಾದುಕೆಗಳು ಕೇವಲ ಪ್ರತೀಕವೆಂದಿರಿ, ಪ್ರತೀಕಕ್ಕೇಕೆ ವಂದನೆ?"

"ಅವುಗಳಲ್ಲಿಯೂ ಆಧ್ಯಾತ್ಮಿಕ ಪ್ರಭಾವವಿದ್ದೇ ಇದೆ"

"ಆಚಾರ್ಯರಲ್ಲಿರುವಂತೆಯೇ ಇದೆಯೇ?"

"ನಿಸ್ಸಂಶಯವಾಗಿ"

"ಆಚಾರ್ಯರು ಬಳಿಯಲ್ಲಿಯೇ ಇರುವಾಗ ಆ ಪ್ರತೀಕಗಳ ಆಧ್ಯಾತ್ಮಿಕ ಪ್ರಭಾವ ಕಡಿಮೆಯಾಗುವುದಿಲ್ಲವೇ?"

"ಹೇಗೆ ಸಾಧ್ಯ? ಎರಡೂ ಸಮಾನವಾದ ಪ್ರಭಾವವುಳ್ಳವು"

"ಹಾಗಾದರೆ ನೀವು ನಿಮ್ಮ ಕೊಠಡಿಯಲ್ಲಿಯೇ ಇದ್ದು ಸಾಧನೆ ಮುಂದುವರೆಸಿ. ಹೊಳೆಯನ್ನು ಹಾಯ್ದು ಇತ್ತ ಕಡೆ ಬರುವ ತೊಂದರೆಯನ್ನು ತೆಗೆದುಕೊಳ್ಳಬೇಡಿ"

"ಸನ್ನಿಧಾನದ ತರ್ಕಸರಣಿಯೇನೋ ನನಗೆ ಗ್ರಾಹ್ಯವಾಯಿತು. ಆದರೆ ಆಚಾರ್ಯರೂ ಮತ್ತು ಅವರ ಪಾದುಕೆಗಳೂ ಪ್ರತ್ಯೇಕವಲ್ಲ, ಒಂದೇ ಎಂದು ಭಾವಿಸಿಕೊಳ್ಳುವಂತಹ ಮಟ್ಟವನ್ನು ನಾನಿನ್ನೂ ತಲುಪಿಲ್ಲ."

"ಆ ಮಟ್ಟವನ್ನು ಮುಟ್ಟಿಲ್ಲವೆಂದು ನೀವೇ ಹೇಳಿಕೊಳ್ಳುತ್ತಿದ್ದೀರಿ. ಆದ್ದರಿಂದ ಆಧ್ಯಾತ್ಮಿಕ ಸಾಧನೆಯಲ್ಲಿ ಅತಿಶಯವಾದಂತಹ ಮಜಲನ್ನು ನೀವು ಎಂದಾದರೊಂದು ದಿನ ತಲುಪಲೇ ಬೇಕು."

"ಹೌದು ಮಹಾಸ್ವಾಮಿ, ಇಂದಲ್ಲ ನಾಳೆಯಾದರೂ ನಾನು ಆ ಯೋಗ್ಯತೆಯನ್ನು ಪಡೆಯಲೇ ಬೇಕು."

"ಆದರೆ ಸತತವಾದ ಪ್ರಯತ್ನವಿಲ್ಲದೇ ಯಾವುದೂ ಸಿದ್ಧಿಸದು. ಆ ಯೋಗ್ಯತೆಯನ್ನು ನೀವು ಹೇಗೆ ಪಡೆಯುತ್ತೀರಿ? ಅದಕ್ಕೆ ನಿಮ್ಮ ಪ್ರಯತ್ನವೇನು?"

"ಆ ದಿಸೆಯಲ್ಲಿ ನಾನು ಯಾವ ಸಾಧನೆಯನ್ನೂ, ಪ್ರಯತ್ನವನ್ನೂ ಮಾಡುತ್ತಿದ್ದೇನೆಂದು ಹೇಳಲಾರೆ"

"ನೀವು ಪ್ರಯತ್ನವನ್ನೇಕೆ ಮಾಡಬಾರದು?"

"ಹೇಗೆ ಮಾಡಲಿ, ಮಹಾಸ್ವಾಮಿ?"

"ನಿಮ್ಮ ಕೊಠಡಿಯಲ್ಲಿಯೇ ಉಳಿದುಕೊಳ್ಳಿ. ಪಾದುಕೆಗಳ ಎದುರಿನಲ್ಲಿ ಕುಳಿತುಕೊಂಡು ಆ ಪಾದುಕೆಗಳ ಮೇಲೆ ಆಚಾರ್ಯರು ನಿಂತಿದ್ದಾರೆಂದು ಭಾವಿಸಿಕೊಳ್ಳಿ. ಸತತವಾಗಿ ಈ ಕ್ರಮದಲ್ಲಿಯೇ ನೀವು ಧ್ಯಾನ ಮಾಡುತ್ತಿದ್ದರೆ, ನೀವೆಲ್ಲಿದ್ದರೂ ಸಹ ಆಚಾರ್ಯರನ್ನು ದರ್ಶನಮಾಡಲು ಸಮರ್ಥರಾಗುತ್ತೀರಿ. ಆ ಪವಿತ್ರವಾದ ಪಾದುಕೆಗಳು ಅವರ ಪೂಜ್ಯವಾದ ದಿವ್ಯಮೂರ್ತಿಯಲ್ಲಿ ಲಯವಾಗಿರಲು ಅವುಗಳು ಅವರಿಂದ ಪ್ರತ್ಯೇಕವಾದುದು ಎಂಬುದನ್ನು ಮರೆತು ಬಿಡುತ್ತೀರಿ. ಈ ಅಭ್ಯಾಸವನ್ನು ನಾಳೆಯಿಂದಲೇ ಮಾಡಿರಿ"

ಆ ಸ್ವಾಮಿಗಳು ಗುರುದೇವರ ಉಪದೇಶದಂತೆ ಅಭ್ಯಾಸವನ್ನಾರಂಭಿಸಿದರು. ಮೊದಲು ಕೆಲದಿನಗಳು ಹೊಳೆ ಹಾಯ್ದು ಆಚಾರ್ಯರ ಅಧಿಷ್ಠಾನಕ್ಕೆ ಬರದಿರುವಂತೆ ಮನೋನಿಗ್ರಹ ಮಾಡಿಕೊಳ್ಳಲು ಅವರಿಗೆ ಬಲು ಕಷ್ಟವಾಯಿತು. ಆದರೆ ಗುರುದೇವರ ಅನುಗ್ರಹದಿಂದ ಅವರು ಶೀಘ್ರವಾಗಿ ತಾವಿದ್ದಲ್ಲೇ ದೈವೀ ಸನ್ನಿಧಿಯನ್ನು ಅನುಭವಿಸಲು ಸಮರ್ಥರಾದರು.

* * *



# ೩೨. ಅವತಾರಗಳನ್ನು ಕುರಿತ ವಿಚಾರ ಲಹರಿ

ಒಂದು ಸಂಜೆ ಗುರುದೇವರು ಭಗವಂತನ ಅವತಾರಗಳನ್ನು ಕುರಿತು ಮಾತನಾಡುತ್ತಿದ್ದವರು ಶ್ರೀಕೃಷ್ಣನನ್ನು ಕುರಿತು ಹೀಗೆ ನುಡಿದರು.

"ಶ್ರೀರಾಮನು ಧರ್ಮವನ್ನು ಅನುಷ್ಠಾನ ಮಾಡುವುದರಲ್ಲಿಯೇ ತೃಪ್ತನಾಗಿದ್ದು, ಲೋಕಕ್ಕೆ ಧರ್ಮಬೋಧಕನಂತಿರದೇ ಹೆಚ್ಚಾಗಿ ಧರ್ಮನಿರತನಾದ ಸಾಧಕನಂತೆಯೇ ಕಂಡನು. ಶ್ರೀಕೃಷ್ಣನಾದರೋ ಉಪದೇಶಕನಾಗಿಯೂ ಇದ್ದನು. ಆತನು ಲೋಕವ್ಯವಹಾರವನ್ನು ಹೇಳುವ ವೃತ್ತಿಧರ್ಮವನ್ನಷ್ಟೇ ಅಲ್ಲದೇ ವೈರಾಗ್ಯವನ್ನು ಪ್ರತಿಪಾದಿಸುವ ನಿವೃತ್ತಿಧರ್ಮವನ್ನೂ ಬೋಧಿಸಿದನು. ಅದರಲ್ಲಿಯೂ ನಿವೃತ್ತಿಧರ್ಮವನ್ನು ಉಪದೇಶಿಸುವಾಗ ಯಾವ ಘಟನೆಯಿಂದಲೂ ಏರುಪೇರಾಗದಂತಹ ಮನಸ್ಸಿನ ಸಮತೆಗೆ 'ಸ್ಥಿತಧೀಃ' ಹೆಚ್ಚು ಪ್ರಾಧಾನ್ಯವನ್ನು ಕೊಟ್ಟನು. ಯೋಗಿಗಳನ್ನು ಸಮಬುದ್ಧಿಯುಳ್ಳವರೆಂದೂ, ಸ್ಥಿರಮನಸ್ಕರೆಂದೂ ಕರೆದನು. ತನ್ನನ್ನೇ ಅಂತಹ ಸಮಬುದ್ಧಿಯೆಂದೂ ಹೇಳಿದನು. ಮತ್ತು ಎಲ್ಲ ಜೀವಿಗಳಲ್ಲಿಯೂ ನಾನೇ ಇದ್ದೇನೆ. ನನಗೆ ದ್ವೇಷಿಗಳಾಗಲೀ, ಆಪ್ತರಾಗಲೀ ಯಾರೂ ಇಲ್ಲ ಎಂದೂ ನುಡಿದನು.

ಶ್ರೀಕೃಷ್ಣನು ಕ್ಷತ್ರಿಯ, ಮೇಲಾಗಿ ಗೃಹಸ್ಥಾಶ್ರಮಿ. ಜಗತ್ತಿನ ಆಕರ್ಷಣೆ, ವಿಕರ್ಷಣೆಗಳ ನಡುವಿನಲ್ಲಿ ಆತನು ತನ್ನ ಆದರ್ಶಗಳನ್ನು ಪೂರ್ಣವಾಗಿ ತಾನೇ ಸಾಧಿಸಿ ತೋರಲಿಲ್ಲ. ವಾಸ್ತವವಾಗಿ ಗೀತೆಯಲ್ಲಿ 'ಭಕ್ತನಾದವನು' ತನಗೆ ಆಪ್ತನೆಂದು ಪದೇ ಪದೇ ಹೇಳಬೇಕಾಗಿ ಬಂದುದಲ್ಲದೆ, ಅರ್ಜುನನಿಗೂ ಸಹ ತಾನು ಅವನಲ್ಲಿ ಇಷ್ಟವುಳ್ಳವನೆಂದೂ, ಅರ್ಜುನನು ತನಗೆ ಆಪ್ತನೆಂದೂ ಹೇಳಿದನು. ಅಂತಹ ಮನೋಧರ್ಮ– ಸಮಬುದ್ಧಿಯನ್ನಭ್ಯಸಿಸಿ ಸಿದ್ಧಿಪಡೆಯುವಂತಹ ಮನೋಧರ್ಮ– ಅಸಾಧ್ಯವೆಂಬ ಅಭಿಪ್ರಾಯ ಬರದಂತೆ, ಭಗವಂತನೂ ಬ್ರಾಹ್ಮಣನಾಗಿ ಸಂನ್ಯಾಸಾಶ್ರಮದಲ್ಲಿದ್ದು, ಗೀತೆಯಲ್ಲಿ ತಾನು ನುಡಿದ ಆದರ್ಶವನ್ನು ತಾನೇ ಅನುಷ್ಠಾನ ಮಾಡುವುದರ ಮೂಲಕ ಲೋಕಕ್ಕೆ ವಿಶದೀಕರಿಸಬೇಕೆಂದು ಶ್ರೀಶಂಕರಾಚಾರ್ಯರಾಗಿ ಅವತಾರ ಮಾಡಿದನು. ಆದರೆ ಆಗಲೂ ಸಹ ಅನೇಕ ಪಾಷಂಡಿಗಳನ್ನು ವಾದ ಚರ್ಚೆಗಳಲ್ಲಿ ವಿರೋಧಿಸಿ, ರಾಜಾ ಸುಧನ್ವನ ಸಹಾಯದಿಂದ ದಮನ ಮಾಡಬೇಕಾಯಿತು. ಸಹಜವಾಗಿ ಆತನು ಅನೇಕ ಅನುಚರರನ್ನೂ, ವಿರೋಧಿಗಳನ್ನೂ ಪಡೆಯ

ಬೇಕಾಯಿತು. ಅತ್ಯಂತ ಶ್ರೇಷ್ಠವಾದ ಆದರ್ಶ– ಸಮಬುದ್ಧಿಯನ್ನು – ಆತ ಲೋಕಕ್ಕೆ ಸಂಪೂರ್ಣವಾಗಿ ತೋರಿಸಿಕೊಡಲಾಗಲಿಲ್ಲ.

ಆ ಶ್ರೇಷ್ಠತಮ ಆದರ್ಶಪಾಲನೆಯು ಮಾನವ ಜೀವಿತದಲ್ಲಿ ಸಾಧ್ಯ, ಅನುಷ್ಠೇಯ ಎಂದು ತೋರಿಸಿಕೊಡಲು ಭಗವಂತನು ನಮ್ಮ ಗುರುವರ್ಯರ ರೂಪದಲ್ಲಿ ಮತ್ತೊಮ್ಮೆ ಅವತರಿಸಿದನು. ಅವರು ಶಾಂತಿ, ಆನಂದವೇ ಮೂರ್ತಿವತ್ತಾಗಿದ್ದರು. ಅವರು ಪ್ರತಿಯೊಬ್ಬರನ್ನೂ –ಮಾನವ, ಪ್ರಾಣಿ– ಎಲ್ಲರನ್ನೂ ಆಕರ್ಷಿಸುತ್ತಿದ್ದರು. ಎಲ್ಲರಲ್ಲಿಯೂ ಅಕ್ಕರೆಯುಳ್ಳವರಾಗಿದ್ದರು. ಅವರು ಯಾವ ವಿರೋಧಿಯನ್ನೂ ಕಂಡವರಲ್ಲ. ಅಥವಾ ಅವರಿಗೆ ಯಾವ ಪರಮಾಪ್ತ ಸ್ನೇಹಿತನೂ ಇರಲಿಲ್ಲ. ಕಾರಣವೆಂದರೆ, ಎಲ್ಲರಿಗೂ ಸಮಾನ ಮಿತ್ರರಾಗಿದ್ದ ಅವರನ್ನು ಕಂಡ ಪ್ರತಿಯೊಬ್ಬನೂ ತಾನು ಗುರುವರ್ಯರಿಗೆ ಪರಮಾಪ್ತನೆಂದು ತನ್ನಲ್ಲಿಯೇ ತಾನು ಭಾವಿಸಿಕೊಳ್ಳುತ್ತಿದ್ದ. ಪ್ರತಿಯೊಬ್ಬನೂ ಹಾಗೆ ಭಾವಿಸಿಕೊಳ್ಳಬೇಕಾದರೆ, ಅದು ಗುರುವರ್ಯರು ಸರ್ವಜೀವಿಗಳಲ್ಲಿಯೂ ತಮ್ಮ ಏಕತೆಯನ್ನು ಸಾಧಿಸಿದುದರ ದ್ಯೋತಕ. ಇನ್ನು ಸ್ಪಷ್ಟವಾಗಿ ಹೇಳುವುದಾದಲ್ಲಿ ಎಲ್ಲರಲ್ಲಿಯೂ ಅಖಂಡವಾಗಿ ತಮ್ಮ ವಿಶ್ವಾಸ, ಅನುಕಂಪ, ಕರುಣೆಗಳಿಂದ ಅವರು ಆ ಏಕತೆಯನ್ನು ಲೋಕಕ್ಕೆ ತೋರಿಸಿಕೊಟ್ಟಿದ್ದರು. ಈ ದೃಷ್ಟಿಯಿಂದ ಇತರ ಅವತಾರಗಳಿಗಿಂತ ಅವರ ಅವತಾರವು ಹೆಚ್ಚು ಉಪಯುಕ್ತವೂ, ಬೋಧನೀಯವೂ, ಸ್ಫೂರ್ತಿಯುತವೂ ಆಗಿತ್ತೆಂದು ಹೇಳಬಹುದು.

ಭಗವಂತನ ಅವತಾರಗಳನ್ನು ಕುರಿತು ಮಾತನಾಡುತ್ತಿದ್ದ ಗುರುದೇವರು ಇನ್ನೊಂದು ಸಂದರ್ಭದಲ್ಲಿ ಅರ್ಥಗರ್ಭಿತವಾದ ಮಾತುಗಳಲ್ಲಿ ಹೀಗೆ ನುಡಿದರು.

“ಈ ಕಲ್ಪದ ಪ್ರಾರಂಭದಲ್ಲಿ, ಕೃತಯುಗದಲ್ಲಿ ಒಬ್ಬನೇ ತಂದೆಯ ಆದರೆ ಬೇರೆ ಬೇರೆ ಪತ್ನಿಯರಲ್ಲಿ ಜನಿಸಿದ ಮಕ್ಕಳಾದ ದೇವತೆಗಳೂ, ರಾಕ್ಷಸರೂ ತಮ್ಮ ತಮ್ಮ ಸ್ವಭಾವ ಮತ್ತು ಮನಃಪ್ರವೃತ್ತಿಗಳಲ್ಲಿ ತಾವಿಬ್ಬರೂ ಬೇರೆಬೇರೆಯೆಂದು ಅರಿತಿದ್ದರು. ಆದ್ದರಿಂದ ಬೇರೆ ಬೇರೆ ಲೋಕಗಳಲ್ಲಿ ವಾಸಮಾಡುವುದು ಯೋಗ್ಯವೆಂದು ಅರಿತಿದ್ದರು. ದೇವತೆಗಳು ದಿವಿಜ ಲೋಕದಲ್ಲಿಯೂ, ರಾಕ್ಷಸರು ಅಸುರ ಲೋಕದಲ್ಲಿಯೂ ಇರುತ್ತಿದ್ದರು. ಯಾವನಾದರೂ ದುರಾಶಾಪೀಡಿತ ನಾದ ರಾಕ್ಷಸನು ದೇವಲೋಕವನ್ನು ಮುತ್ತಿ ಅಲ್ಲಿಯೂ ಸಹ ತನ್ನ ಸಾರ್ವಭೌಮತ್ವ ವನ್ನು ಸ್ಥಾಪಿಸದ ಹೊರತು, ಸರ್ವೇಸಾಮಾನ್ಯವಾಗಿ ಜಗಳ ಕದನಗಳು ಅಸಾಧ್ಯವಾಗಿರುತ್ತಿದ್ದವು. ಸಾಧಾರಣವಾಗಿ ಅವರಿಬ್ಬರೂ ಪ್ರತ್ಯೇಕವಾದ ತಮ್ಮ ತಮ್ಮ ಲೋಕಗಳಲ್ಲಿಯೇ ಇರುತ್ತಿದ್ದರು.”



“ಮುಂದೆ ತ್ರೇತಾಯುಗದಲ್ಲಿ ಶ್ರೀರಾಮಚಂದ್ರನು ಧರ್ಮಸಂರಕ್ಷಣೆಗಾಗಿ ಅವತಾರವೆತ್ತಿದಾಗ, ದೇವತೆಗಳು ಅಯೋಧ್ಯೆ, ಕಿಷ್ಕಿಂಧೆಗಳಲ್ಲಿಯೂ, ರಾಕ್ಷಸರು ದಂಡಕಾರಣ್ಯ ಮತ್ತು ಲಂಕೆಗಳಲ್ಲಿಯೂ ವಾಸಿಸುತ್ತಿದ್ದರು. ಎಂದರೆ ಪ್ರತ್ಯೇಕ ಲೋಕಗಳಲ್ಲಿರದೇ ಒಂದೇ ಲೋಕದಲ್ಲಿಯೇ ಪ್ರತ್ಯೇಕವಾದ ಬೇರೆ ಬೇರೆ ಭಾಗಗಳಲ್ಲಿದ್ದರು. ಆಗಲೂ ಸಹ ಮದೋನ್ಮತ್ತತೆಯಿಂದ ಯಾವನಾದರೂ ರಾಕ್ಷಸನು ಪ್ರಪಂಚವನ್ನೇ ಕಬಳಿಸುತ್ತೇನೆಂದು ದಂಡಯಾತ್ರೆ ಹೊರಟಾಗಲೋ ಅಥವಾ ದೇವತೆಗಳು ರಾಕ್ಷಸರ ಶಕ್ತಿಗೆ ಪ್ರತಿಸವಾಲು ಹಾಕಿ ಅವರ ಶಕ್ತಿಕೇಂದ್ರ ಗಳಿಗೆ ಪ್ರವೇಶಮಾಡಿದಾಗಲೋ ಜಗಳ ಕಾದಾಟಗಳು ನಡೆಯುತ್ತಿದ್ದವು.”

“ಭಗವಂತನು ಶ್ರೀಕೃಷ್ಣನಾಗಿ ದ್ವಾಪರಯುಗದಲ್ಲಿ ಅವತಾರವೆತ್ತಿದಾಗ, ಒಂದೇ ಲೋಕದ ಪ್ರತ್ಯೇಕ ಭಾಗಗಳೂ ತಪ್ಪಿ, ದೇವಾಸುರರು ಒಂದೇ ಮನೆತನದಲ್ಲಿ, ಸಂಸಾರದಲ್ಲಿ ಜನ್ಮ ತಾಳಿದರು. ಶ್ರೀಕೃಷ್ಣನ ಸೋದರಮಾವನಾದ ಕಂಸ, ಸೋದರತ್ತೆಯ ಮಗ ಶಿಶುಪಾಲ ಇವರು ರಾಕ್ಷಸರು. ಕೃಷ್ಣನ ಆಪ್ತಬಂಧುಗಳಾದ ಪಾಂಡವರು ದೇವತೆಗಳು. ಅವರ ದಾಯಾದಿಗಳಾಗಿದ್ದ ಕೌರವರು ರಾಕ್ಷಸರು. ಅವರಲ್ಲಿ ಪರಸ್ಪರ ಜಗಳಗಳಿಗೆ ಬಹಳವಾದ ಅವಕಾಶಗಳಿದ್ದವು. ವಾಸ್ತವವಾಗಿ ಅವರು ಹುಟ್ಟುತ್ತಲೇ ಜಗಳಗಳು ಆರಂಭವಾದವು. ಆಗಾಗ ಮೌನ ಸಮಾಧಾನಗಳು ನೆಲಸಿದಂತಿದ್ದರೂ, ಅವರ ಆಜನ್ಮ ಪ್ರವೃತ್ತಿಯು ಅವ್ಯಾಹತ ಕದನಗಳಲ್ಲಿ ಅವರನ್ನು ತಳ್ಳಿ, ಕಟ್ಟಕಡೆಗೆ ಆ ಮನೆತನವನ್ನೇ ನಿರ್ನಾಮ ಮಾಡಿದ ಮಹಾಸಮರದ ಅಂತಿಮ ಘಟ್ಟಕ್ಕೆ ಮುಟ್ಟಿಸಿತ್ತು.”

“ಈ ಕಲಿಯುಗದಲ್ಲಾದರೋ, ಒಂದೇ ಸಂಸಾರದಲ್ಲಿ ಬಂಧುಗಳಾಗಿ ಹುಟ್ಟುವುದೂ ಸಾಲದು. ತತ್ಪರಿಣಾಮವಾಗಿ ದಿವಿಜರೂ, ಅಸುರರೂ ಬೇರೆಬೇರೆ ಪ್ರತ್ಯೇಕ ಸ್ಥಳಗಳಲ್ಲಿರುವುದರಲ್ಲಾಗಲೀ ಅಥವಾ ಒಂದೇ ಸಂಸಾರದ ಬೇರೆ ಬೇರೆ ವ್ಯಕ್ತಿಗಳಲ್ಲಿರುವುದರಲ್ಲಾಗಲೀ ಸಂತೃಪ್ತರಾಗಿಲ್ಲ. ಆ ದೇವಾಸುರರು ಈಗ ಒಂದೇ ಶರೀರದಲ್ಲಿರುವುದರಿಂದ ಯಾವ ವ್ಯಕ್ತಿಯನ್ನೇ ಅಗಲಿ, ಇವನು ದೈವೀಗುಣ ಸಂಪನ್ನ ಅಥವಾ ಅಸುರೀಗುಣ ಸಂಪನ್ನ ಎಂದು ಪ್ರತ್ಯೇಕಿಸಲು ಸಾಧ್ಯವಿಲ್ಲ. ಈ ಕ್ಷಣದಲ್ಲಿ ದೇವನಾಗಿ ಕಂಡವನು ಮರುಕ್ಷಣದಲ್ಲಿಯೇ ರಾಕ್ಷಸನಾಗಿಬಿಡುತ್ತಾನೆ. ಈ ದೇವಾಸುರ ತತ್ತ್ವಗಳು ಇಂದಿನ ಮಾನವನಲ್ಲಿ ಎಷ್ಟರ ಮಟ್ಟಿಗೆ ರಕ್ತಗತವಾಗಿಬಿಟ್ಟಿದೆಯೆಂದರೆ, ಎಂದಿಗೂ ಕೊನೆಗಾಣದ ಸಂತತವಾದ ಸಂಘರ್ಷಣೆಯು ಪ್ರತಿಕ್ಷಣದಲ್ಲಿಯೂ ಮಾನವನ ಆಂತರ್ಯದಲ್ಲಿ ನಡೆಯುತ್ತಿರುತ್ತದೆ. ಆತನು ನಡೆಸುತ್ತಿರುವ ಎಷ್ಟೋ ಒಳ್ಳೆಯ ಕಾರ್ಯಗಳ

ಹಿನ್ನೆಲೆಯಾಗಿ ನೈಚ್ಯಭಾವನೆಯಿಲ್ಲದಿರದು. ಹಾಗೆಯೇ ಆತನ ಎಷ್ಟೋ ದುಷ್ಕೃತಿಗಳ ಹಿಂದೆ ಸದ್ಭಾವನೆಯೂ ಇಲ್ಲದಿರದು."

"ದೇವಾಸುರರು ಪ್ರತ್ಯೇಕ ಲೋಕಗಳಲ್ಲಿ ವಾಸಿಸುತ್ತಿದ್ದಾಗ ದೇವತೆಗಳ ರಕ್ಷಣೆಗಾಗಿ ಭಗವಂತನು ತಾನೊಬ್ಬನೇ ಏಕಾಂಗಿಯಾಗಿ, ತನ್ನ ಹೊಣೆಯ ಮೇಲೆಯೇ ರಾಕ್ಷಸರೊಡನೆ ಕಾಳಗವನ್ನು ನಡೆಸಿದನು. ಅವರು ಒಂದೇ ಲೋಕದಲ್ಲಿ ಎಂದರೆ ಭೂಲೋಕದಲ್ಲಿ ಬೇರೆಬೇರೆ ಸ್ಥಳಗಳಲ್ಲಿ ವಾಸಿಸುತ್ತಿದ್ದಾಗ, ರಾಕ್ಷಸರ ಬಲಿಷ್ಠಸ್ಥಾನಗಳಾದ ಜನಸ್ಥಾನ ಮತ್ತು ಲಂಕಾದ್ವೀಪಗಳಲ್ಲಿ, ಕಿಷ್ಕಿಂಧೆಯ ದೈವೀಶಕ್ತಿಯ ಸಹಾಯದಿಂದ ಯುದ್ಧ ಮಾಡಿದನು. ದೇವಾಸುರರು ಒಂದೇ ಸಂಸಾರದಲ್ಲಿ ಜನ್ಮತಾಳಿ ಅವನ ಸಹಾಯವನ್ನು ಕೋರಿದಾಗ ತನ್ನ ಅಪಾರ ಸೈನ್ಯಸಮೂಹವನ್ನು ಕೌರವರ ಸಹಾಯಕ್ಕೆ ಕಳುಹಿಸಿ, ತಾನು ಯುದ್ಧಮಾಡದೇ, ಪಾಂಡವರಿಗೆ ದಕ್ಷ ಸಲಹೆಗಾರನಾಗಿ ನಿಂತನು. ಆದರೆ ಇಂದಿನ ಆಧುನಿಕ ಯುದ್ಧದಲ್ಲಿ ಅವ್ಯಾಹತವಾಗಿ ಮಾನವನ ಆಂತರ್ಯದಲ್ಲಿ ಆಗುತ್ತಿರುವ ಒಳತೋಟಿಯಲ್ಲಿ, ಆತನು ಸಂಪೂರ್ಣವಾಗಿ ಅಲಕ್ಷಿಸಲ್ಪಟ್ಟಿರುವುದರಿಂದ, ಆ ಒಳತೋಟಿಯ ಅಂತಿಮ ಪರಿಣಾಮದ ಸಂಪೂರ್ಣ ನಿರ್ಣಾಯಕನು ತಾನೇ ಅಗಿದ್ದರೂ, ಆ ಮಾನವ ಹೃದಯದಲ್ಲಿಯೇ ಅವ್ಯಕ್ತ ಸಾಕ್ಷಿಯಾಗಿ, ನಿರಾಸಕ್ತನಂತೆ ಇದ್ದುಬಿಟ್ಟಿದ್ದಾನೆ."

* * *



## ೩೩. ಅನುಗ್ರಹಮೂರ್ತಿ

ಇತರರಲ್ಲಿರುವ ಅನಾಚಾರಗಳನ್ನು ಕಂಡು ಸಾಧಾರಣ ಮಡಿವಂತರು ಮೂಗು ಮುರಿಯುತ್ತಾರೆ. ಆದರೆ ಗುರುದೇವರು ಹಾಗಿರಲಿಲ್ಲ. ಅಂತಹ ವ್ಯಕ್ತಿಗಳಲ್ಲಿ ಸಹಾನುಭೂತಿಯುಳ್ಳವರಾಗಿದ್ದು, ಅವರನ್ನು ಸ್ವಲ್ಪವೂ ನೋಯಿಸದೇ ಸನ್ಮಾರ್ಗಕ್ಕೆ ತರಲು ಆಸಕ್ತಿ ವಹಿಸುತ್ತಿದ್ದರು.

ಒಬ್ಬ ವ್ಯಕ್ತಿ ಹೋಟಲನ್ನು ನಡೆಸುತ್ತಿದ್ದನು. ಶಾಸ್ತ್ರಗಳು ಆಹಾರ ವಿಕ್ರಯವನ್ನು ಸ್ಪಷ್ಟವಾದ ಮಾತುಗಳಲ್ಲಿ ಖಂಡಿಸಿದೆಯೆಂಬುದು ಎಲ್ಲರಿಗೂ ತಿಳಿದಂತಹ ವಿಷಯ. ಈ ಉದ್ಯಮದಲ್ಲಿ ಧಾರ್ಮಿಕವಾದ ಮತ್ತು ಆರೋಗ್ಯದ ಎಷ್ಟೋ ನಿಯಮಗಳನ್ನು ಉಲ್ಲಂಘಿಸುತ್ತಲೇ ಇರಬೇಕಾಗುತ್ತದೆ. ಹೋಟಲನ್ನು ನಡೆಸುತ್ತಿದ್ದಾತ ಶ್ರೀಗುರುದೇವರಿಂದ ಶಿವಪಂಚಾಕ್ಷರಿ ಮಂತ್ರೋಪದೇಶವನ್ನು ಪಡೆಯಬೇಕೆಂದು ಆಸೆ ಹೊಂದಿದ್ದನು. ತುಂಬಾ ಅಳೆದು ಸುರಿದು ಕೊನೆಗೆ ಧೈರ್ಯಮಾಡಿ ಶೃಂಗೇರಿಗೆ ಆಗಮಿಸಿ ತನ್ನ ಅಪೇಕ್ಷೆಯನ್ನು ಬಿನ್ನಿವಿಸಿಕೊಂಡನು.

"ಸನ್ನಿಧಾನದಿಂದ ಶಿವ ಪಂಚಾಕ್ಷರೀ ಉಪದೇಶವನ್ನು ಪಡೆಯಬೇಕೆಂದು ಬಹಳಕಾಲದಿಂದಲೂ ಅಪೇಕ್ಷೆಯಿದೆ. ಆದರೆ ಅದಕ್ಕೆ ತಕ್ಕಂತೆ ನಾನು ಶುದ್ಧನಾಗಿಲ್ಲವೆಂಬ ಶಂಕೆಯೂ ಬಾಧಿಸುತ್ತಿದೆ. ಜೀವನ ನಿರ್ವಹಣೆಗೆ ನಾನು ಹೋಟಲನ್ನು ನಡೆಸುತ್ತಿದ್ದೇನೆ. ಬೇರಾವುದಾದರೂ ಉದ್ಯೋಗವನ್ನು ಕೈಗೊಳ್ಳಲು ತಕ್ಕಷ್ಟು ವಿದ್ಯೆಯಿಲ್ಲದ್ದರಿಂದ ನಾನು ಈ ವೃತ್ತಿಯನ್ನು ಅವಲಂಬಿಸಬೇಕಾಯಿತು" ಎಂದು ನಮ್ರತೆಯಿಂದ ಬಿನ್ನವಿಸಿಕೊಂಡನು.

ಆತನ ಬಿನ್ನಹವನ್ನು ಸಾವಧಾನದಿಂದ ಕೇಳಿದ ಗುರುದೇವರು "ಇಂತಹ ವೃತ್ತಿಯನ್ನು ಅವಲಂಬಿಸಿದ್ದೂ ಸಹ ಆಧ್ಯಾತ್ಮಿಕ ಪ್ರಗತಿಯಲ್ಲಿರಬೇಕಾದ ಸಹಜ ಆಕಾಂಕ್ಷೆ ನಾಶವಾಗದಿರುವುದು ಮೆಚ್ಚತಕ್ಕಂತಹ ವಿಷಯ. ದೇವರು ನಿಮಗೆ ಶುಭವನ್ನುಂಟುಮಾಡುತ್ತಾನೆ. ಉಪದೇಶ ನೀಡುವ ಮುನ್ನ ಸರಳವಾದ ಕೆಲವು ನಿರ್ಬಂಧಗಳನ್ನು ಹಾಕಿದಲ್ಲಿ ಅವುಗಳಂತೆ ನಡೆಯಲು ನಿಮ್ಮಿಂದ ಸಾಧ್ಯವೇ?" ಎಂದರು.

"ಖಂಡಿತವಾಗಿಯೂ ಸಾಧ್ಯ. ತಾವು ವಿಧಿಸುವ ನಿಯಮಗಳಂತೆ ವಿಧೇಯನಾಗಿ ನಡೆದುಕೊಳ್ಳುತ್ತೇನೆ."

"ಒಳ್ಳೆಯದು, ನಾನು ಹಾಕುವ ನಿರ್ಬಂಧವಿಷ್ಟೇ. ನೀವು ಈಗಿನ ಉದ್ಯೋಗವನ್ನೇ ಮುಂದುವರೆಸಿ. ಆದರೆ ಹೋಟಲಿನಲ್ಲಿ ತಯಾರಾಗತಕ್ಕಂತಹ

ಆಹಾರವನ್ನಾಗಲೀ, ಪಾನೀಯವನ್ನಾಗಲೀ ಇನ್ನು ಮುಂದೆ ನೀವು ಸೇವಿಸಬಾರದು. ಈ ನಿಯಮವನ್ನು ನೀವು ಕಟ್ಟುನಿಟ್ಟಾಗಿ ಪಾಲಿಸಬೇಕು."

"ಸನ್ನಿಧಾನದ ಅಪ್ಪಣೆಯಂತೆಯೇ ನಡೆದುಕೊಳ್ಳುತ್ತೇನೆ."

"ಹಾಗಾದರೆ ನಾಳೆ ಬನ್ನಿ, ಉಪದೇಶ ಕೊಡುತ್ತೇನೆ."

ಗುರುದೇವರ ಅಪ್ಪಣೆಯಂತೆ ಆತ ಮಾರನೆಯ ದಿನ ಬಂದು, ಉಪದೇಶ ಪಡೆದು, ತಮ್ಮ ಸ್ವಂತ ಸ್ಥಳಕ್ಕೆ ಹಿಂದಿರುಗಿದರು. ಭಕ್ತಿ, ಶ್ರದ್ಧೆಯಿಂದ ಜಪ ಮಾಡುತ್ತಿದ್ದರು. ತಾವು ಕೊಟ್ಟಿದ್ದ ವಚನದಂತೆ ಹೋಟಲಿನಲ್ಲಿ ಒಂದು ಹನಿ ನೀರನ್ನೂ ಸಹ ಕುಡಿಯದೇ ನೇಮದಿಂದಿದ್ದರು. "ನನ್ನ ಸ್ವಂತ ಹೋಟಲಿನಲ್ಲಿ ನನ್ನೆದುರಿನಲ್ಲಿಯೇ ಆಹಾರ ಪದಾರ್ಥಗಳು ತಯಾರಾಗುತ್ತವೆ. ಅವೆಲ್ಲವೂ ಶುದ್ಧವೂ ಆಗಿದ್ದು ಕಳಂಕರಹಿತವಾಗಿವೆ. ಆದರೂ ಅವನ್ನು ಸೇವಿಸಬಾರದೆಂದು ಗುರುದೇವರು ಅಪ್ಪಣೆ ಮಾಡಿದರು. ಅವೆಲ್ಲವೂ ವ್ಯಾಪಾರಕ್ಕಾಗಿ ಸಿದ್ಧಪಡಿಸಲ್ಪಟ್ಟವಾದ್ದರಿಂದ ಅವು ದೋಷಪೂರ್ಣವಾಗಿರಬಹುದು. ಅವನ್ನು ಹಣಕ್ಕೆ ವಿಕ್ರಯ ಮಾಡುವುದರಿಂದ ದೋಷವಿನ್ನೂ ಅಧಿಕವಾಗುತ್ತದೆ. ನನಗೆ ಆ ದೋಷ ಕಾಣದಿರಬಹುದು. ಆದರೆ ಗುರುದೇವರು ನಿರ್ಬಂಧ ಹಾಕಿರುವುದರಿಂದ ಆ ಆಹಾರದಲ್ಲಿ ದೋಷವಿರುವ ಅಂಶ ಸ್ಪಷ್ಟವಾಗುತ್ತದೆ. ಮಾರಾಟ ಮಾಡುವವನ್ನೂ ಅಷ್ಟೇ ಅಲ್ಲದೆ, ಕೊಳ್ಳುವವನನ್ನೂ ಅಪವಿತ್ರ ಮಾಡುವಂತಹ ವೃತ್ತಿಯನ್ನು ನಾನು ಏಕೆ ಮುಂದುವರೆಸಬೇಕು?" ಎನ್ನುವ ಆಲೋಚನೆ ಆಗಾಗ ಆತನ ಮನದಲ್ಲಿ ಹಣಕುತ್ತಿತ್ತು. ಅದು ಪ್ರಬಲವಾದಂತೆಲ್ಲಾ ಆತನು ತನ್ನ ವೃತ್ತಿಯನ್ನು ಬಿಟ್ಟುಬಿಡುವ ನಿರ್ಧಾರದ ಹತ್ತಿರಕ್ಕೆ ಬಂದು ಕೊನೆಗೊಂದು ದಿನ, ತನ್ನ ಹೋಟಲಿನ ವ್ಯವಹಾರವನ್ನೆಲ್ಲಾ ಮತ್ತೊಬ್ಬರಿಗೆ ಮಾರಿಬಿಟ್ಟನು. ಬಳಿಕ ತನ್ನ ಸ್ವಂತ ಗ್ರಾಮಕ್ಕೆ ಹಿಂದಿರುಗಿ, ಆಧ್ಯಾತ್ಮಿಕ ಸಾಧನೆಯಲ್ಲಿ ನಿರತನಾದನು.

ಕಾದಿರುತ್ತಿದ್ದ ಭಕ್ತರೆಲ್ಲರಿಗೂ ತೀರ್ಥ ವಿನಿಯೋಗ ಮಾಡಿ ಅನಂತರ ಮಧ್ಯಾಹ್ನದ ಸ್ನಾನಾಹ್ನಿಕಕ್ಕೆ ತೆರಳುವುದು ಗುರುದೇವರ ಪದ್ಧತಿಯಾಗಿತ್ತು. ಒಂದು ಮಧ್ಯಾಹ್ನ, ಸ್ನಾನವಾಗಿದ್ದರೂ ಸಹ ಮತ್ತೊಮ್ಮೆ ಗುರುದೇವರು ಸ್ನಾನದ ಸಿದ್ಧತೆಯಲ್ಲಿದ್ದರು. ಅವರ ಶರೀರದ ಸ್ಥಿತಿ ಅಷ್ಟು ಸಮರ್ಪಕವಾಗಿರಲಿಲ್ಲ. ಮತ್ತೊಂದು ಸ್ನಾನ ಅವರ ಆರೋಗ್ಯವನ್ನು ತೀವ್ರವಾಗಿ ಹದಗೆಡಿಸುತ್ತಿತ್ತು. ಆಪ್ತ ನೌಕರರೊಬ್ಬರು ಗುರುಗಳ ಬಳಿ ಬಂದು, ಪುನಃ ಸ್ನಾನ ಮಾಡಬಾರದೆಂದು ಬಿನ್ನವಿಸಿಕೊಂಡರು.

"ಮಹಾಸ್ವಾಮಿ, ಈಗೇಕೆ ಮತ್ತೊಮ್ಮೆ ಸ್ನಾನ?"



"ಸ್ನಾನ ಮಾಡಬೇಕೆನ್ನಿಸಿದೆ, ಮಾಡುತ್ತೇನೆ."

"ಅದಕ್ಕೆ ಕಾರಣ?"

"ನನ್ನ ಮನಸ್ಸೇ."

"ತಮ್ಮ ಮನಸ್ಸಿನಲ್ಲಿ ಅಂತಹ ನಿರ್ಧಾರ ಮೂಡಲು ಯಾವುದಾದರೂ ಕಾರಣವಿದ್ದೇ ಇರಬೇಕಲ್ಲವೇ?"

"ಹೌದು."

"ಅದಾವುದೆಂದು ನಾನು ಕೇಳಬಹುದೇನು?"

"ಅದನ್ನು ಕೇಳಿ ತಿಳಿದುಕೊಳ್ಳಬೇಕಾದ ಅವಶ್ಯಕತೆಯೇನೂ ಇಲ್ಲ. ನಾನು ಪುನಃ ಸ್ನಾನ ಮಾಡಬೇಕೆಂಬ ನನ್ನ ಅಪೇಕ್ಷೆ ಸಾಕು ನಿಮಗೆ."

ಈ ಉತ್ತರದಿಂದ ಆ ಅಧಿಕಾರಿ ತಬ್ಬಿಬ್ಬಾದರು. ವಿಷಯದ ಪ್ರಸ್ತಾಪವನ್ನು ಮುಂದುವರಿಸುವುದು ಅಷ್ಟು ಉಚಿತವಲ್ಲವೆಂದೆನ್ನಿಸಿತು ಅವರಿಗೆ. ಆದರೆ ಗುರುದೇವರ ಆರೋಗ್ಯದ ದೃಷ್ಟಿಯಿಂದ ಅದನ್ನಲ್ಲಿಗೇ ಬಿಡುವಂತಿರಲಿಲ್ಲ. ಸ್ವಲ್ಪಕಾಲ ಯೋಚಿಸಿ ಮತ್ತೆ ಕೇಳಿದರು.

"ಸನ್ನಿಧಾನವು ತೀರ್ಥ ವಿನಿಯೋಗವನ್ನು ಮಾಡುತ್ತಿದ್ದಾಗ ಮೈಲಿಗೆಯಾಗುವಂತಹ ವಿಶೇಷ ಘಟನೆಯೇನಾದರೂ ಸಂಭವಿಸಿತೆ?"

ನೇರವಾದ ಈ ಪ್ರಶ್ನೆಯಿಂದ ವಿಸ್ಮಿತರಾದ ಗುರುದೇವರು 'ಹೌದು' ಎಂದರು.

ಆತ ಮತ್ತೆ ಕೇಳಿದರು, "ಅದಾವುದು ಮಹಾಸ್ವಾಮಿ?"

ಗುರುದೇವರು ಹೇಳಿದರು, "ಅದರ ಗೊಡವೆಯೇಕೆ? ಬಿಡಿ."

ಆ ಅಧಿಕಾರಿ ಮತ್ತೊಮ್ಮೆ ಸ್ವಲ್ಪಕಾಲ ಮೌನದಿಂದಿದ್ದು ಆಲೋಚಿಸಿದರು. ಏನೋ ಹೊಳೆಯಿತು. ಪುನಃ ಕೇಳಿದರು.

"ಈಗ ಅರ್ಥವಾಯಿತು. . ಸದರಿ ವ್ಯಕ್ತಿ ಸನ್ನಿಧಾನದ ಬಳಿ ತೀರ್ಥಕ್ಕಾಗಿ ಬಂದಿದ್ದುದರಿಂದಲ್ಲವೆ ಮೈಲಿಗೆಯಾದುದು?"

ಪುನಃ ಈ ಪ್ರಶ್ನೆಯಿಂದ ವಿಸ್ಮಿತರಾದ ಗುರುಗಳು ಹೌದೆಂದರು.

"ಆತನಾಗಮನದಿಂದ ಮೈಲಿಗೆಯಾಗುತ್ತಿತ್ತೆಂದು ನನಗೆ ಮೊದಲೇ ತಿಳಿಸಿಬಿಟ್ಟಿದ್ದಲ್ಲಿ ಆತ ಸನ್ನಿಧಾನದ ಬಳಿ ಬರದಂತೆ ತಡೆಯಿಸಿಬಿಡುತ್ತಿದ್ದೆ."

"ಏಕೆ? ಆತನೆಷ್ಟೇ ದೋಷಿಯಾಗಿರಲಿ. ಶ್ರೀಚಂದ್ರಮೌಳೀಶ್ವರನ ಅಭಿಷೇಕ ತೀರ್ಥದ ಪಾವಿತ್ರ್ಯದಲ್ಲಿ ಆತನಿಗೆ ನಂಬಿಕೆಯಿದೆ. ಅಂಥವನಿಗೆ ತೀರ್ಥವನ್ನು ನಿರಾಕರಿಸುವುದು ಸರಿಯಲ್ಲ. ನನ್ನಿಂದ ತೀರ್ಥ ಪಡೆಯುವುದರಲ್ಲಿ ವಿಶೇಷ ಪುಣ್ಯವಿದೆಯೆಂದು ಆತ ನಂಬಿರುವಾಗ ಹಾಗೇಕೆ ಮಾಡಬೇಕು?"

"ಇನ್ನೇತಕ್ಕೂ ಅಲ್ಲ. ಸನ್ನಿಧಾನದ ದೇಹಸ್ಥಿತಿ ಅಷ್ಟು ತೃಪ್ತಿಕರವಾಗಿಲ್ಲ.

ಆತ ಬಂದುದರಿಂದ ಸನ್ನಿಧಾನ ಮತ್ತೊಮ್ಮೆ ಸ್ನಾನ ಮಾಡಬೇಕಾದ ಅವಶ್ಯಕತೆ ಉಂಟಾಯಿತಲ್ಲಾ ಎಂದು ಹೇಳಿದೆ."

"ಅದು ಅಲ್ಪ ವಿಷಯ. ನನಗೆ ವೈಯಕ್ತಿಕವಾಗಿ ಸಂಬಂಧಿಸಿದ್ದು, ಅಭಿಷೇಕ ತೀರ್ಥವು ಶ್ರೇಷ್ಠತಮವಾದ ಪುನೀತಕಾರಿಯೆಂದು ನಾವೆಲ್ಲಾ ತಿಳಿದಿದ್ದೇವೆ. ತೀರ್ಥವನ್ನು ಪಡೆಯಲು ಬಂದಂತಹ ವ್ಯಕ್ತಿಯ ದೋಷ–ಪಾಪ– ಹೆಚ್ಚಾದಷ್ಟೂ ಪುಣ್ಯಾರ್ಜನೆಗಾಗಿ ತೀರ್ಥದ ಅವಶ್ಯಕತೆಯೂ ಹೆಚ್ಚಾಗುತ್ತದೆಂಬುದು ಒಪ್ಪಬೇಕಾದಂತಹ ವಿಷಯ. ಹೀಗಿರುವಾಗ, ಅಲ್ಪ ದೋಷಿಗಳಾದ ಇತರರಿಗಿಂತಲೂ ಆತನ ಅವಶ್ಯಕತೆ ದೊಡ್ಡದಾಗಿರುವಾಗ, ಆತನಿಗೆ ತೀರ್ಥವನ್ನು ನಿರಾಕರಿಸುವುದರಲ್ಲಿ ನ್ಯಾಯವೆಲ್ಲಿದೆ?"

ಗುರುದೇವರ ಅನುಕಂಪಭರಿತವಾದ ಅಂತಃಕರಣಕ್ಕೆ ಮಾರುಹೋದ ಆ ಅಧಿಕಾರಿ ಮಾತಾಡದೆ ತಲೆಬಾಗಿ ಹಿಂತಿರುಗಿದರು.

ಶೃಂಗೇರಿಯ ಅಂಚೆಕಚೇರಿಗೆ ಹೊಸದಾಗಿ ಪೋಸ್ಟ್‌ಮಾಸ್ಟರ್ ಒಬ್ಬರ ವರ್ಗವಾಗಿತ್ತು. ಅವರಿಗೆ ಶೃಂಗೇರಿಗೆ ಹೋಗಲು ಸ್ವಲ್ಪವೂ ಇಷ್ಟವಿರಲಿಲ್ಲ. "ಆ ಮಳೆ ಮತ್ತು ಮಲೇರಿಯಾ" ಗ್ರಾಮಕ್ಕೆ ತಾವು ಹೋಗುವುದಿಲ್ಲವೆಂದು ಹಟ ಹಿಡಿದು ಕುಳಿತರು. ಮೇಲಿನ ಅಧಿಕಾರಿ ಅವರಿಗಿಂತಲೂ ಹಟವಾದಿ. ಪೋಸ್ಟ್‌ಮಾಸ್ಟರ್ ವರ್ಗಾವಣೆಯ ಮಾರ್ಪಾಟಿಗಾಗಿ ಆತನನ್ನು ಕಾಣಲೆಂದು ಹೋದರು. ಯಾವ್ಯಾವ ಕಾರಣಗಳನ್ನು ಹೇಳಿದರೂ ಆತನ ಮನವೊಲಿಸಲಾಗಲಿಲ್ಲ. ಕಡೆಗೊಮ್ಮೆ ಆತ ಕೇಳಿದರು –

"ನೀವು ಯಾವ ಮತಕ್ಕೆ ಸೇರಿದವರು?"

"ಹಿಂದೂ ಮತಕ್ಕೆ"

"ಹಿಂದೂಗಳಲ್ಲಿ ಯಾವ ವರ್ಣ?"

"ಬ್ರಾಹ್ಮಣರು"

"ಬ್ರಾಹ್ಮಣರಲ್ಲಿ ಯಾವ ಪಂಗಡ?"

"ಸ್ಮಾರ್ತರು, ಶ್ರೀ ಶಂಕರಾಚಾರ್ಯರ ಸಂಪ್ರದಾಯ."

"ನೀವು ಹಿಂದೂ ಮತೀಯರು, ಬ್ರಾಹ್ಮಣ. ಮೇಲಾಗಿ ಸ್ಮಾರ್ತ ಸಂಪ್ರದಾಯಕ್ಕೆ ಸೇರಿದವರು. ಪ್ರತಿಯೊಬ್ಬ ಹಿಂದುವೂ ತನ್ನ ಜೀವಿತಕಾಲದಲ್ಲಿ ಒಮ್ಮೆಯಾದರೂ ದರ್ಶನ ಮಾಡಲೇಬೇಕಾದ ಪುಣ್ಯಕ್ಷೇತ್ರ ಶೃಂಗೇರಿ. ಅದರಲ್ಲೂ ಬ್ರಾಹ್ಮಣರಿಗೂ, ಅದ್ವೈತಿಗಳಿಗೂ ಅದು ಅತ್ಯಂತ ಪವಿತ್ರತಮವಾದ ಪುಣ್ಯಸ್ಥಳ. ಧಾರ್ಮಿಕ ಜಾಗೃತಿಯನ್ನು ಮೂಡಿಸಿದ ಶ್ರೀಶಂಕರಾಚಾರ್ಯರ ಧರ್ಮಪೀಠ. ಇಂತಹ ಪುಣ್ಯಸ್ಥಳಕ್ಕೆ ನೀವಾಗಿ ಹೋಗಬೇಕು. ಆದರೆ ನಾವಾಗಿ ನಿಮಗೆ ಅವಕಾಶವನ್ನು ಕಲ್ಪಿಸಿದ್ದೇವೆ. ಇದು ನಿಮ್ಮ ಒಳ್ಳೆಯದಕ್ಕೆಂದೇ ಭಾವಿಸಿ, ಶೃಂಗೇರಿಗೆ ಹೋಗಿ." ಎಂದು ನುಡಿದರು.



ಆ ಪೋಸ್ಟ್‌ಮಾಸ್ಟರ್ ಶೃಂಗೇರಿಗೆ ಬಂದಾಗ ಮಳೆಗಾಲವಾಗಿತ್ತು. ಮೊದಲೇ ಹಲವು ವಿಧವಾದ ಕಷ್ಟಗಳಿಗೆ ಸಿಕ್ಕಿದ ಆ ವ್ಯಕ್ತಿ ಯಾವುದರಲ್ಲಿಯೂ, ಯಾರಲ್ಲಿಯೂ ಒಳ್ಳೆಯದನ್ನು ಕಾಣುತ್ತಿರಲಿಲ್ಲ. ಜೀವನದ ಬಗ್ಗೆ, ಜನದ ಬಗ್ಗೆ ಅವರ ದೃಷ್ಟಿ ವಿಪರೀತವಾಗಿದ್ದು, ಅವರು ಶೃಂಗೇರಿಯನ್ನು ಕೊಂಪೆಯೆಂದುಕೊಂಡೇ ಪ್ರವೇಶಿಸಿದರು. ಅಲ್ಲಿ ಬಂದ ಒಂದೆರಡು ತಿಂಗಳುಗಳಲ್ಲಿ ಅವರಿಗೆ ಪರಿಚಿತವಾದ ಸ್ಥಳಗಳೆಂದರೆ, ಒಂದು ಕಚೇರಿಯ ಎದುರಿಗಿದ್ದ ಹೋಟಲು, ಇನ್ನೊಂದು ಪಕ್ಕದಲ್ಲಿಯೇ ಇದ್ದ ಖಾಸಗಿ ವೈದ್ಯಶಾಲೆ!

ಶೃಂಗೇರಿಗೆ ಬಂದು ಹಲವು ಮಾಸಗಳುರುಳಿದವು. ಪೋಸ್ಟ್‌ಮಾಸ್ಟರಿಗೆ ಒಮ್ಮೆಯಾದರೂ ಮಠಕ್ಕೆ ಹೋಗಬೇಕೆನ್ನಿಸಲಿಲ್ಲ ಶ್ರೀಶಾರದಾದೇವಿಯ ದರ್ಶನ ಮಾಡಬೇಕೆನ್ನಿಸಲಿಲ್ಲ. ಶ್ರೀ ಜಗದ್ಗುರುಗಳ ಸಂದರ್ಶನ ಪಡೆಯಬೇಕೆನ್ನಿಸಲಿಲ್ಲ. ಶೃಂಗೇರಿಗೆ ಪದೇ ಪದೇ ಬರುತ್ತಿದ್ದ ಹಲವರನ್ನು ಕಂಡು "ಈ ಜನ ಈ ಮಳೆಯ ಕೊಂಪೆಗೆ ಪದೇ ಪದೇ ಏಕಾದರೂ ಬರುತ್ತಾರೋ" ಎಂದುಕೊಳ್ಳುತ್ತಿದ್ದರು.

ಪ್ರತಿದಿನವನ್ನೂ ಯುಗದಂತೆ ಕಳೆಯುತ್ತಿದ್ದ ಪೋಸ್ಟ್‌ಮಾಸ್ಟರಿಗೆ ಇನ್ನು ಶೃಂಗೇರಿಯಲ್ಲಿರಲು ಆಗುವುದಿಲ್ಲ ಎನಿಸಿತು. ಹೇಗಾದರೂ ಮಾಡಿ ವಾಪಸು ಮೈಸೂರಿಗೇ ಹೊರಟುಹೋಗಬೇಕೆಂದು ನಿರ್ಧರಿಸಿದರು. ಪಕ್ಕದಲ್ಲಿಯೇ ಇದ್ದ ವೈದ್ಯರಿಂದ ಮೆಡಿಕಲ್ ಸರ್ಟಿಫಿಕೇಟು ಪಡೆದು, ಕಾಯಿಲೆಯ ರಜಾ ಹಾಕಲು ತೀರ್ಮಾನಿಸಿದರು. ರಜಾ ಅರ್ಜಿಯನ್ನು ಬರೆದು ಸಿದ್ಧಪಡಿಸಿಯೂ ಆಯಿತು. ಒಂದೆರಡು ದಿನಗಳಲ್ಲಿಯೇ ರಜಾ ಮಂಜೂರಾಗಿ ತಮಗೆ ಶೃಂಗೇರಿ ಯಿಂದ ಬಿಡುಗಡೆ ದೊರಕಬಹುದೆಂದು ಊಹಿಸಿದ ಆ ಪೋಸ್ಟ್‌ಮಾಸ್ಟರ್ ಹೇಗಿದ್ದರೂ ಒಂದೆರಡು ದಿನಗಳಲ್ಲಿಯೇ ಹೊರಟುಬಿಡುವುದರಿಂದ ಶ್ರೀ ಶಾರದಾದೇವಾಲಯಕ್ಕೆ ಒಂದು ಸಲ ಹೋಗಿ ಬರಬೇಕೆಂದು ನಿರ್ಧರಿಸಿ, ಹೊರಟರು.

ಯಾವ ವಿಧವಾದ ಧಾರ್ಮಿಕವಾದ, ಆಧ್ಯಾತ್ಮಿಕವಾದ ಭಾವುಕತೆಯೂ ಇಲ್ಲದ ಆ ವ್ಯಕ್ತಿ, ಶ್ರೀ ಶಾರದಾದೇವಿಗೆ ಬಲವಂದು, ಯಾಂತ್ರಿಕವಾಗಿ ನಮಸ್ಕರಿಸಿದರು. ಪ್ರಸಾದ ಸ್ವೀಕರಿಸಿ ಹೊರಹೊರಡುವ ಸಮಯದಲ್ಲಿ, ಅದೇ ತಾನೇ ಆಲಯಕ್ಕೆ ಬರುತ್ತಿದ್ದ ಮಠದ ಅಧಿಕಾರಿಯೊಬ್ಬರು ಅವರನ್ನು ಸಂಧಿಸಿ ಯೋಗಕ್ಷೇಮವನ್ನು ವಿಚಾರಿಸಿದರು.

ಆ ಅಧಿಕಾರಿ, "ಬನ್ನಿ ಮೇಷ್ಟ್ರೇ, ಹೊಳೆಯಾಚೆಗೆ ಹೋಗಿ ಜಗದ್ಗುರುಗಳ

ದರ್ಶನ ಮಾಡೋಣ" ಎಂದರು.

ಪೋಸ್ಟ್‌ಮಾಸ್ಟರಿಗೆ ಏಕೋ ಮನಸ್ಸಿನಲ್ಲೇ ಅಳುಕಿತು. ಅವರು ಸ್ನಾನ ಮಾಡಿ ಒಂದೆರಡು ದಿನಗಳೇ ಆಗಿದ್ದವು. ಅವರು "ಈ ದಿನ ಬೇಡ, ಇನ್ನೊಮ್ಮೆ ಹೋದರಾಯಿತು" ಎಂದರು. ಮಠದ ಅಧಿಕಾರಿ ಬಿಡಲೇ ಇಲ್ಲ. "ಈಗಲೂ ಆಗಲಿ, ಇನ್ನೊಮ್ಮೆಯೂ ಆಗಲಿ, ಬನ್ನಿ" ಎಂದು ಬಲವಂತ ಮಾಡಿದರು. "ಮೈಮೇಲೆ ಷರಟು ಇತ್ಯಾದಿ ಬಟ್ಟೆ ಹಾಕಿಕೊಂಡು ಬರಲು ನನ್ನ ಮನಸ್ಸೊಪ್ಪುತ್ತಿಲ್ಲ" ಎಂದು ಪೋಸ್ಟ್ ಮಾಸ್ಟರು ನುಡಿದರು.

"ಬನ್ನಿ ಹೊರಗಡೆ ಬಿಚ್ಚಿಟ್ಟರಾಯಿತು" ಎಂದು ನುಡಿದ ಮಠದ ಅಧಿಕಾರಿ, ಅವರ ಕೈಹಿಡಿದು ಎಳೆದುಕೊಂಡೇ ಹೊರಟುಬಿಟ್ಟರು. ಪೋಸ್ಟ್‌ಮಾಸ್ಟರಿಗೆ ತಾವು ಸ್ನಾನಮಾಡದೇ ಅಶುಚಿಯಾಗಿದ್ದೇನೆಂದು ಹೇಳಲು ಸಂಕೋಚ. ಮೈಲಿಗೆಯಲ್ಲಿ ಗುರುಗಳ ದರ್ಶನಮಾಡಲು ಒಂದು ವಿಧವಾದ ಅಳುಕು, ಭಯ!

ತುಂಗಾನದಿಯನ್ನು ದಾಟಿ ಸಚ್ಚಿದಾನಂದ ವಿಲಾಸದ ಸಮೀಪಕ್ಕೆ ಹೋಗುವಾಗಲೂ ತಪ್ಪಿಸಿಕೊಳ್ಳುವ ಪ್ರಯತ್ನ ಮಾಡಿದರು. ಗುರುಗಳ ಬಿಡಾರದ ಬಳಿ ಬರುತ್ತಿದ್ದಂತೆಯೇ, ಮೋಡಗಳ ಮರೆಯಿಂದ ಪೂರ್ಣ ಚಂದ್ರನು ಬರುವಂತೆ, ಬೆಳಕಿನಂತೆ ಇದ್ದಕ್ಕಿದ್ದಂತೆ ಗುರುದೇವರು ಬಂದುಬಿಟ್ಟರು! ಮಠದ ಅಧಿಕಾರಿ ತಕ್ಷಣವೇ ಸಾಷ್ಟಾಂಗ ನಮಸ್ಕಾರ ಮಾಡಿದರು. ಪೋಸ್ಟ್‌ಮಾಸ್ಟರಿಗೆ ನಮಸ್ಕಾರ ಮಾಡಬೇಕೆಂದೂ ತೋಚಲಿಲ್ಲ. ಬೆಪ್ಪನಂತೆ ಗುರುಗಳನ್ನೇ ನೋಡುತ್ತಾ ನಿಂತುಬಿಟ್ಟಿದ್ದರು! ಗುರುದೇವರು ಪೋಸ್ಟ್ ಮಾಸ್ಟರನ್ನೊಮ್ಮೆ ಅಡಿಯಿಂದ ಮುಡಿವರೆಗೂ ನೋಡಿದರು. ಅವರ ಶರೀರದಲ್ಲಿ ಮಿಂಚು ಹೊಕ್ಕಂತಾಗಿ, ಶರೀರ ಕಂಪಿಸಿತು. ಕಂಗಳಲ್ಲಿ ನೀರ್ದುಂಬಿದವು. ಆನಂದವೋ, ವಿಷಾದವೋ ಹೇಳಲಾಗದಂತಹ ಸ್ಥಿತಿಯೊದಗಿತು.

ವಾತ್ಸಲ್ಯ ಬೆರೆತ ಧ್ವನಿಯಲ್ಲಿ ಗುರುದೇವರು ನುಡಿದರು. "ನಿಮಗೆ ಸದ್ಯಕ್ಕೆ ಇಲ್ಲಿಂದ ವರ್ಗವಾಗದು" ಪೋಸ್ಟ್‌ಮಾಸ್ಟರು ತಮಗೆ ಅರಿವಿಲ್ಲದಂತೆಯೇ ಸಾಷ್ಟಾಂಗ ಪ್ರಣಾಮ ಮಾಡಿ ಹೊರಳಾಡಿಬಿಟ್ಟರು. "ಅಯ್ಯೋ, ಇಂತಹ ದಿವ್ಯಮೂರ್ತಿಯನ್ನು ಇಷ್ಟು ದಿನಗಳಿಂದ ಇಲ್ಲಿದ್ದರೂ ದರ್ಶನ ಮಾಡದೇ ಹೋದೆನಲ್ಲಾ" ಎಂದು ತಮ್ಮನ್ನು ತಾವೇ ಖಂಡಿಸಿಕೊಂಡರು.

ಗುರುದೇವರು ಪೋಸ್ಟ್‌ಮಾಸ್ಟರನ್ನು ಮೃದುವಚನಗಳಲ್ಲಿ ಸಾಂತ್ವನಗೊಳಿಸಿದರು. ಮಾರನೆಯ ದಿನ ಸ್ನಾನಮಾಡಿ ಶುಚಿಯಾಗಿ ಬರುವಂತೆ ಅಪ್ಪಣೆಮಾಡಿದರು. ತಲ್ಲಣಗೊಂಡಿದ್ದ ಪೋಸ್ಟ್‌ಮಾಸ್ಟರ ಮನಸ್ಸು ಶಾಂತ, ಸಮಾಧಾನ ಸ್ಥಿತಿಗೆ ಬಂದಿತು. ಅಂದಿನಿಂದ ಅವರ ಜೀವನದ ಗತಿಯೇ ಬದಲಾಗಿ ಅವರು ತುಂಬಾ ಆಚಾರಶೀಲರೂ, ಪರಮಭಕ್ತರೂ, ಧರ್ಮಸಾಧನ ನಿರತರೂ ಆದರು.



ಹೀಗೆ ಗುರುದೇವರು ಎಂತೆಂತಹವರಲ್ಲಿಯೂ ಅನುಕಂಪ, ಸಹಾನುಭೂತಿಗಳನ್ನು ತೋರಿ, ಅವರ ಜೀವನಕ್ಕೊಂದು ಗುರಿಯನ್ನೂ, ಆ ಗುರಿಯ ಸಾಧನೆಗೆ ಮಾರ್ಗವನ್ನೂ ತೋರುತ್ತಿದ್ದರು. ಇಂತಹ ನಿದರ್ಶನಗಳು ಹೇರಳವಾಗಿದ್ದು ಗುರುದೇವರ ಅನುಗ್ರಹಕ್ಕೆ ಸಾಕ್ಷಿಯಾಗಿವೆ.

* * *

## ೩೪. ಜ್ಞಾನಿಯು ಕರ್ಮ ಮಾಡಬೇಕೆ?

ಪೂರ್ಣಜ್ಞಾನಿಯಾಗಿರುವವನು ಸಾಧಾರಣರಿಗೆ ಎಂದರೆ ಸಾಮಾನ್ಯ ಮಾನವರಿಗೆ ವಿಧಿಸಲ್ಪಟ್ಟ ಕರ್ಮಗಳನ್ನೇಕೆ ಮಾಡಬೇಕು? ಆತ್ಮಸಾಕ್ಷಾತ್ಕಾರ ಪಡೆದಾದ ಮೇಲೆ ಈ ಪೂಜಾದಿಗಳೆಲ್ಲ ಏಕೆ? ಗುರುದೇವರು ತಮ್ಮ ಸಮಾಧಿಸ್ಥಿತಿಯಿಂದ ಬಹಿರ್ಮುಖರಾದಾಗ ಎಲ್ಲಾ ಕರ್ಮಾನುಷ್ಠಾನಗಳನ್ನು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದರೆಂದು ಈಗಾಗಲೇ ತಿಳಿದಿದ್ದೇವಲ್ಲವೇ? ಅಸಂಪ್ರಜ್ಞಾತ ಸಮಾಧಿಸ್ಥಿತಿಯಲ್ಲಿದ್ದು ಆತ್ಮಾನುಭವದ ಚರಮ ಸ್ಥಿತಿಯನ್ನು ಮುಟ್ಟಿದವರಿಗೆ ಶ್ರೀಚಕ್ರೋಪಾಸನೆ, ಶ್ರೀಚಂದ್ರಮೌಳೀಶ್ವರ ಪೂಜೆ ಇತ್ಯಾದಿಗಳೆಲ್ಲ ಏಕೆ? ಜ್ಞಾನಿಯಾದವನೂ ಸಹ ಇತರರಿಗೆ ಮಾರ್ಗದರ್ಶನ ನೀಡುವುದಕ್ಕಾಗಿ ಕರ್ಮಶ್ರದ್ಧೆಯನ್ನು ಹೊಂದಿರಬೇಕು. ಆದರೆ ಕರ್ಮಫಲವು ಸಾಮಾನ್ಯ ಮನುಷ್ಯನನ್ನು ಬಾಧಿಸುವಂತೆ ಜ್ಞಾನಿಗಳನ್ನು ಬಾಧಿಸುವುದಿಲ್ಲ. ಅವರು ಎಷ್ಟೇ ಕರ್ಮಾನುಚರಣೆ ಮಾಡಿದರೂ ಫಲತ್ಯಾಗ ಮಾಡಿರುವುದರಿಂದ ನಿರ್ಲಿಪ್ತರಾಗಿಯೇ ಇರುತ್ತಾರೆ.

ಉತ್ತರ ಭಾರತದ ತುಂಬಾ ಓದಿದವರೂ, ವಿಶಾಲವಾದ, ಆಳವಾದ ತಿಳಿವಳಿಕೆಯುಳ್ಳವರೂ ಆಗಿದ್ದ ಶಿಷ್ಯರೊಬ್ಬರು ಗುರುವರ್ಯರ ದರ್ಶನಕ್ಕಾಗಿ ಆಗಮಿಸಿದರು. ಅವರು ಬಂದಾಗ ಗುರುಗಳು ತಮ್ಮ ಪೂಜಾದಿಗಳಲ್ಲಿ ನಿರತರಾಗಿದ್ದರು. ಸ್ನಾನಾಹ್ನಿಕ, ಜಪಾನುಷ್ಠಾನ, ಅಭಿಷೇಕ ಇತ್ಯಾದಿಗಳನ್ನು ನಿಷ್ಠೆಯಿಂದ ಆಚರಿಸುತ್ತಿದ್ದ ಗುರುಗಳನ್ನು ಕಂಡು ಆ ಭಕ್ತಮಹಾಶಯರಿಗೆ ಆಶ್ಚರ್ಯವಾಯಿತು. ಗುರುಗಳು ಸದಾ ಸಮಾಧಿಸ್ಥಿತಿಯಲ್ಲಿದ್ದು ಕರ್ಮಬಂಧನಕ್ಕೆ ಸಿಲುಕದೆ ಪರಾಙ್ಮುಖರಾಗಿರುತ್ತಾರೆಂದು ಅವರು ಊಹಿಸಿದ್ದರು. ಅವರ ಊಹೆ ತಪ್ಪಾಗಿತ್ತು. ಉಪನಿಷತ್ಪ್ರಣೀತವಾದ ನಿರ್ಗುಣ ಬ್ರಹ್ಮೋಪಾಸನೆಯಲ್ಲಿರಬೇಕಾದ ಯೋಗಿಯು ಇಲ್ಲಿ ವಿಗ್ರಹಾರಾಧನೆಯೇ ಮೊದಲಾದ ಕರ್ಮಾಚರಣೆಯಲ್ಲಿರುವುದನ್ನು ನೋಡಿ ಆತ ಸೋಜಿಗ ಪಟ್ಟರು. ಪರಸ್ಪರ ವಿರುದ್ಧವಾಗಿರುವ ಈ ಸ್ಥಿತಿಯನ್ನು ಹೇಗೆ ಒಪ್ಪಿಕೊಳ್ಳಬೇಕೆಂಬುದೇ ಆತನಿಗೆ ಅರ್ಥವಾಗಲಿಲ್ಲ. ಕಡೆಗೆ ಗುರುಗಳಲ್ಲಿಯೇ ತಮ್ಮ ಶಂಕೆಯನ್ನು ಹೇಳಿಕೊಂಡರು.

“ವೇದಾಂತದಲ್ಲಿ ಹೇಳಿರುವಂತೆ ಆತ್ಮಸಾಕ್ಷಾತ್ಕಾರ ಮಾಡಿಕೊಂಡವರು



ಕರ್ಮಗಳಲ್ಲಿಯೂ, ವಿಗ್ರಹಾರಾಧನೆಯಲ್ಲಿಯೂ ತೊಡಗಬಹುದೇ?”

“ಆತ ಇನ್ನೇನು ಮಾಡಬೇಕೆಂದು ನಿಮ್ಮ ಅಭಿಪ್ರಾಯ?”

“ಆತ್ಮಸಾಕ್ಷಾತ್ಕಾರ ಮಾಡಿಕೊಂಡವರು ಈ ಕರ್ಮಗಳನ್ನು ಬಿಟ್ಟು ಬೇರೆ ಯಾವುದನ್ನಾದರೂ ಮಾಡಬೇಕೆಂದು ನನ್ನ ಅಭಿಪ್ರಾಯವಲ್ಲ. ನನ್ನ ಸಂಶಯವೇನೆಂದರೆ, ಯಾವುದೇ ಆಗಲಿ, ಕರ್ಮಾನುಷ್ಠಾನವೇ ಆಗಲಿ ಮಾಡುತ್ತಿರುವಾಗ ‘ನಾನು ಮಾಡುತ್ತೇನೆ’ ಎಂಬ ಪ್ರಜ್ಞೆಯು ಜಾಗೃತವಾಗಿರುತ್ತದೆ. ಆತ್ಮಸಾಕ್ಷಾತ್ಕಾರದಲ್ಲಿ ನಾನು ಎಂಬ ಪ್ರಜ್ಞೆಯೇ ಇರುವುದಿಲ್ಲ.ಒಬ್ಬನೇ ವ್ಯಕ್ತಿಯಲ್ಲಿ ಪರಸ್ಪರ ವಿರುದ್ಧವಾದ ಎರಡು ಮನೋವೃತ್ತಿಗಳು ಇರುವುದು ಹೇಗೆ ಸಾಧ್ಯ?”

“ನಿಜ, ಪರಸ್ಪರ ವಿರುದ್ಧವಾಗಿರುವ ಎರಡು ವಸ್ತುಗಳು ಒಂದೇ ಸ್ಥಳದಲ್ಲಿ, ಒಂದೇ ಕಾಲದಲ್ಲಿ ಇರಲಾರವು. ಅದು ಸರಿ, ಆದರೆ ಆ ಅಕರ್ತೃವು [ಕರ್ತೃವಲ್ಲದವನು] ಯಾರೆಂದು ಹೇಳಿ ನೋಡೋಣ?”

“ಆತ್ಮನು ಕರ್ತೃವಲ್ಲ”

“ಸರಿಯಾಗಿ ಗ್ರಹಿಸಿದ್ದೀರಿ. ಹಾಗಾದರೆ ಕರ್ತೃವು ಯಾರು?”

“ಈ ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ ಇವೇ ಕರ್ತೃಗಳು”

“ಸರಿ, ಆತ್ಮವು ಕರ್ತೃವಲ್ಲ, ಕರ್ತೃವು ಆತ್ಮನಲ್ಲ ಅಲ್ಲವೇ?”

“ಹೌದು.”

“ಹಾಗಾದರೆ ಇದರಲ್ಲಿ ಅಸಂಗತವಾದುದೇನಿದೆ?”

ಗುರುದೇವರು ಆತ್ಮನಲ್ಲಿ ವಿಹರಿಸುತ್ತಿರುವಾಗಲೇ ಕ್ರಿಯಾವಂತರಾಗಿದ್ದ ಬ್ರಹ್ಮಜ್ಞಾನಿಗಳು. ಈ ಕ್ರಿಯೆ ಶಾರೀರಿಕವೋ, ಮಾನಸಿಕವೋ ಆಗಿರಬಹುದು. ಆನಂದೋನ್ಮಾದದಲ್ಲಿ ಪರಶಿವನು ನಟನೆ ಮಾಡುವಂತೆಯೇ ಈ ಕ್ರಿಯೆಯೂ ಸಹ.[೧೫]

ಗುರುಗಳೊಡನೆ ನಡೆದ ಸಂಭಾಷಣೆಯಿಂದ ಆ ಮಹನೀಯರಿಗೆ ಸಂಶಯ ಬಗೆಹರಿಯಿತು.ಅತ್ಯಂತ ಸರಳವಾಗಿಯೂ, ಪರಿಣಾಮಕಾರಿಯೂ ಆಗಿದ್ದ ಗುರುಗಳ ಮಾತಿನಿಂದ ಆತ ಸಂತುಷ್ಟರಾದರು. ತೃಪ್ತರಾದರು.

ಒಮ್ಮೊಮ್ಮೆ ಗುರುದೇವರು ಭಾಷ್ಯಪಾಠವನ್ನು ಹೇಳುವ ಸಮಯದಲ್ಲಿಯೂ ಶ್ರೀಚಕ್ರಾರ್ಚನೆಯಲ್ಲಿ ಮಗ್ನರಾಗಿಬಿಡುತ್ತಿದ್ದರು. ವಿದ್ಯಾರ್ಥಿಗಳು ಬಹಳ ಹೊತ್ತು ಕಾದು ನಿರಾಶರಾಗಿ ಹಾಗೆಯೇ ಹೊರಟು ಹೋಗುತ್ತಿದ್ದರು. ಯಾಂತ್ರಿಕವಾಗಿ ಮಾಡುವ ಪೂಜೆಯಿಂದ, ಭಾಷ್ಯಪ್ರವಚನದಿಂದ ದೊರೆಯುವ ಆನಂದದ

---

೧೫ ಪ್ರಾಣೋ ಹ್ಯೇಷಃ, ಯಃ ಸರ್ವಭೂತೈರ್ವಿಭಾತಿ ವಿಜಾನನ್ವಿದ್ವಾನ್ ಭವತೇ,ನಾತಿವಾದೀ, ಆತ್ಮಕ್ರೀಡ ಆತ್ಮರತೀ ಕ್ರಿಯಾವಾನ್ ಏಷ ಬ್ರಹ್ಮವಿದಾಂ ವರಿಷ್ಠಃ

ತಿಲಾಂಶವಾದರೂ ದೊರಕಬಹುದೇ ಎಂದು ಕೆಲವೊಮ್ಮೆ ಶಿಷ್ಯರು ಭಾವಿಸಿದ್ದೂ ಉಂಟು. ಭಾಷ್ಯಗಳಲ್ಲಿರತಕ್ಕ ಜ್ಞಾನದ ಪ್ರತಿಪಾದನೆಯನ್ನು ಭಕ್ತಿ ಮತ್ತು ಧ್ಯಾನದಿಂದಲೇ ಅನುಭವಕ್ಕೆ ತಂದುಕೊಳ್ಳಬೇಕಲ್ಲವೇ?

ಒಮ್ಮೆ ಭಾಷ್ಯಪಾಠಕ್ಕಾಗಿ ಕಾದು ಕುಳಿತಿದ್ದ ಶಿಷ್ಯರು ಗುರುದೇವರು ಎಷ್ಟು ಕಾಲವಾದರೂ ಬಾಹ್ಯಲೋಕದತ್ತ ಗಮನವಿಲ್ಲದೆ ಶ್ರೀಚಕ್ರಾರ್ಚನೆಯಲ್ಲಿಯೇ ಮಗ್ನರಾಗಿರುವುದನ್ನು ನೋಡಿ ಕಾಯುವುದರಿಂದ ಪ್ರಯೋಜನವಿಲ್ಲವೆಂದು ನಿರಾಶರಾಗಿ ಒಬ್ಬೊಬ್ಬರಾಗಿ ಎದ್ದುಹೋಗುತ್ತಿದ್ದರು. ಕೊನೆಯದಾಗಿ ಉಳಿದಿದ್ದವರು ಆರ್ ಕೃಷ್ಣಸ್ವಾಮಿ ಅಯ್ಯರ್ ಒಬ್ಬರೇ. ಅವರು ಈ ಅರ್ಚನೆಯಿಂದ ಭಾಷ್ಯಪ್ರವಚನದಿಂದ ದೊರಕುವ ಆನಂದ ದೊರಕಬಹುದೇ ಎಂದು ಆಲೋಚಿಸುತ್ತಾ ಕುಳಿತಿದ್ದರು. ಪೂಜಾನಂತರ ಗುರುದೇವರು ಅಯ್ಯರ್‌ರವರಿಗೆ ಪ್ರಸಾದವನ್ನು ನೀಡುತ್ತಾ "ಮಿಥ್ಯಾ ಜಗದಧಿಷ್ಠಾನಾ ಎಂಬುದು ಶ್ರೀದೇವಿಯ ಸಹಸ್ರನಾಮಗಳಲ್ಲಿ ಒಂದಾಗಿದೆ. ಭಾಷ್ಯಾಧ್ಯಯನದಿಂದ ನೀವರಿಯಬೇಕಾದುದೂ ಅಷ್ಟೇ ಅಲ್ಲವೇ?" ಎಂದುಬಿಟ್ಟರು! 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಎಂಬ ಅದ್ವೈತ ತತ್ತ್ವವನ್ನು ಬೌದ್ಧಿಕವಾಗಿ ಅರಿಯಲಲ್ಲವೇ ವೇದಾಂತವನ್ನು ಅಧ್ಯಯನ ಮಾಡುವುದು? ಅಯ್ಯರ್ ತಮ್ಮ ಮನದ ಸಂಶಯ ಬಗೆಹರಿದುದಕ್ಕೆ ಗುರುಗಳನ್ನು ಮನಸಾ ವಂದಿಸಿದರು.

ಸಾಧಕನು ಜ್ಞಾನಯೋಗ, ಭಕ್ತಿಯೋಗ, ಕರ್ಮಯೋಗ ಮುಂತಾದ ಆತ್ಮಸಾಕ್ಷಾತ್ಕಾರ ಮಾರ್ಗಗಳಲ್ಲಿ ಯಾವುದಾದರೊಂದು ಮಾರ್ಗವನ್ನು ಅವಲಂಬಿಸಿ ಧ್ಯೇಯ ಬಿಂದುವಿನತ್ತ ಸಾಗಬಹುದು. ಪ್ರತಿ ಮಾರ್ಗವೂ ಬೇರೆಬೇರೆಯಾಗಿ ಕಂಡರೂ ಅಂತ್ಯದಲ್ಲಿ ಕೊಂಡೊಯ್ಯುವ ಗುರಿ ಒಂದೇ ಆಗಿದೆ. ಶ್ರೀವಿದ್ಯೆಯಿಂದ ಶ್ರೀದೇವಿಯನ್ನು ಪೂಜಿಸುವ ವಿಧಾನದಲ್ಲಿ ಮೇಲಿನ ಮೂರು ಮಾರ್ಗಗಳಲ್ಲದೇ ರಾಜಯೋಗ ಮಾರ್ಗವೂ ಸೇರಿದೆ. ಶ್ರೀವಿದ್ಯೆಯು ಅದ್ವೈತದ ಪ್ರಾಯೋಗಿಕ ಸಾಧನೆಯೆಂದೂ ಅದು ಬ್ರಹ್ಮವಿದ್ಯೆಯ ಮತ್ತೊಂದು ಸ್ವರೂಪವೆಂದೂ ವಿದ್ವಾಂಸರ ಅಭಿಪ್ರಾಯವಾಗಿದೆ.

ಶ್ರೀವಿದ್ಯೆಯೆಂದು ಕರೆಯಲ್ಪಡುವ ತಂತ್ರವಿದ್ಯೆಯಲ್ಲಿ ಹಾದಿ [ವಾಮಾಚಾರ] ಕಾದಿ [ದಕ್ಷಿಣಾಚಾರ] ಮತ್ತು ಸಾದಿ ಅಥವಾ ಕಹಾದಿ [ವಾಮಾಚಾರ, ದಕ್ಷಿಣಾಚಾರಗಳೆರಡೂ ಸೇರಿದ್ದು] ಎಂದು ಮೂರು ಮಾರ್ಗಗಳಿವೆ. ಇವುಗಳನ್ನು ಕ್ರಮವಾಗಿ ಕೌಲಮಾರ್ಗ, ಸಮಯಮಾರ್ಗ ಮತ್ತು ಮಿಶ್ರಮಾರ್ಗಗಳೆಂದೂ ಕರೆಯುವುದು ವಾಡಿಕೆ. ಶ್ರೀವಿದ್ಯೋಪಾಸನೆಯನ್ನು ವಾಮಾಚಾರ ಮಾರ್ಗದಲ್ಲಿ



ಮಾಡಿದವರಿಗೂ ಸಹ ಅನೇಕ ಐಹಿಕ ಸಿದ್ಧಿಗಳೂ, ಶಕ್ತಿಗಳೂ ಲಭಿಸುತ್ತವೆ. ಸಾಧಕನು ತನ್ನೆಲ್ಲಾ ಸಿದ್ಧಿಗಳಿಗೆ ವಶನಾಗದೇ ಮುಂದುವರೆದು ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ದಕ್ಷಿಣಾಚಾರದಲ್ಲಿ ದೇವಿಯನ್ನು ತಾಯಿಯಂತೆ ಭಾವಿಸಿ ಪೂಜಿಸುವುದರಿಂದ ಈ ಸಾಧನಮಾರ್ಗದಲ್ಲಿ ಹೆಜ್ಜೆಯಿಟ್ಟವರಿಗೆ ಸೋಲಾಗುವುದು ಕಡಿಮೆ. ಆದರೆ ವಾಮಾಚಾರವು ವೀರಮಾರ್ಗವಾದ್ದರಿಂದ ಬಹಳ ಕಠಿಣ ಮತ್ತು ಪ್ರಯಾಸಕರ.

ಶ್ರೀವಿದ್ಯೆಯಲ್ಲಿರುವ ಮೂರು ಮಾರ್ಗಗಳಲ್ಲಿ ಸಮಯಮಾರ್ಗವೇ [ದಕ್ಷಿಣಾಚಾರ] ಹೆಚ್ಚು ಕಡೆ ಆಚರಿಸಲ್ಪಡುತ್ತದೆ. ವಾಮಾಚಾರವು ವೀರಭಾವವನ್ನು ಪ್ರಚೋದಿಸುವುದರಿಂದಲೂ, ಬಹಳ ಕಷ್ಟಸಾಧ್ಯವಾದ್ದರಿಂದಲೂ ಸಾಧಕನ ಆತ್ಮಸಂಯಮವನ್ನು ಅಲುಗಿಸಿ ಅನೇಕ ಪ್ರಲೋಭನೆಗಳನ್ನು ಒಡ್ಡುವುದರಿಂದ ಸಾಹಸಿಗಳಿಗೆ ತಕ್ಕುದಾದ ಅದನ್ನು ಉಪದೇಶ ಪಡೆದು ಅನುಷ್ಠಾನ ಮಾಡಲು ಅನೇಕರು ಒಪ್ಪುವುದಿಲ್ಲ. ಶ್ರದ್ಧಾನ್ವಿತರಿಗೆ ಸಮಯಾಚಾರವೇ ಹೆಚ್ಚು ಒಳ್ಳೆಯದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಶೃಂಗೇರಿಯ ಆಚಾರ್ಯರೂ ಸಹ ಶ್ರೀದೇವಿಯನ್ನು ಸಮಯಾಚಾರ ರೀತಿಯಲ್ಲಿಯೇ ಆರಾಧಿಸುತ್ತಾರೆ.

ಭೌತಿಕವಸ್ತುಗಳಲ್ಲಿಯೂ, ಮಾತೃಕೆಗಳಲ್ಲಿಯೂ ಶಕ್ತಿಯು ಅಂತರ್ಗತವಾಗಿದ್ದು ಲೋಕವ್ಯವಹಾರವನ್ನು ನಡೆಸುವಂತೆ ಮಾನವಶರೀರದಲ್ಲಿಯೂ ಶಕ್ತಿಯು ಅಡಗಿದೆ. ಹೀಗೆ ಅಂತರ್ಗತವಾಗಿರುವ ಶಕ್ತಿಯನ್ನು ಎಚ್ಚರಗೊಳಿಸಿ ತನ್ಮೂಲಕ ಆತ್ಮಬಂಧನದಿಂದ ಬಿಡುಗಡೆ ಪಡೆಯುವುದೇ ಶ್ರೀವಿದ್ಯೋಪಾಸನೆಯ ಮುಖ್ಯ ಗುರಿಯಾಗಿದೆ. ಕುಂಡಲಿನೀ ಎಂದು ಕರೆಯಲ್ಪಡುವ ಈ ಶಕ್ತಿಯು ಮೂಲಾಧಾರ ಚಕ್ರದಲ್ಲಿ ಸರ್ಪದಂತೆ ಸುತ್ತಿಕೊಂಡು ಸುಪ್ತವಾಗಿರುತ್ತದೆ. ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ ಮತ್ತು ಆಜ್ಞಾ ಎಂಬ ಚಕ್ರಗಳು ಬೆನ್ನುಮೂಳೆಯ ಅಡಿಯಿಂದ ಆರಂಭವಾಗಿ ಭ್ರೂಮಧ್ಯದವರೆಗೂ ವ್ಯಾಪಿಸಿವೆ. ಒಂದು ಚಕ್ರದಿಂದ ಮತ್ತೊಂದು ಚಕ್ರಕ್ಕೆ ಮೇಲ್ಮುಖವಾಗಿ ಸಾಗಿ ಕುಂಡಲಿನೀ ಶಕ್ತಿಯು ಆಜ್ಞಾಚಕ್ರವನ್ನು ತಲುಪಬೇಕು. ಸುಷುಮ್ನಾ ನಾಡಿಯ ಮೂಲಕ ಹಂತಹಂತವಾಗಿ ಮೇಲೇರಿ ಆಜ್ಞಾಚಕ್ರದ ಮೇಲೆ ಇರತಕ್ಕ ಸಹಸ್ರಾರವೆಂಬ ಕಮಲವನ್ನು ಕುಂಡಲಿನೀಶಕ್ತಿಯು ತಲುಪಿದಾಗ ಅಮೃತಧಾರೆಯಾಗುತ್ತದೆ. [**ಸಹಸ್ರಾರಾಂಬುಜಾರೂಢಾ ಸುಧಾಸಾರಾಭಿವರ್ಷಿಣೀ–ಶ್ರೀಲಲಿತಾ ಸಹಸ್ರನಾಮ ಶ್ಲೋ.೩೯**]

ಬಾಹ್ಯೋಪಕರಣಗಳ ಸಹಾಯದಿಂದ ನಡೆಯುತ್ತಿರುವ ಶ್ರೀಚಕ್ರಪೂಜೆಯೊಡನೆಯೇ ಆಂತರ್ಯದಲ್ಲಿಯೂ ಕುಂಡಲಿನೀ ಶಕ್ತಿಯನ್ನು ಉತ್ಥಾನ

ಗೊಳಿಸುವ ಯತ್ನವು ನಡೆಯುತ್ತಿದ್ದು ಬಾಹ್ಯಪೂಜೆಯ ಕೊನೆಯಲ್ಲಿ ಕ್ರಮಕ್ರಮವಾಗಿ ಬ್ರಹ್ಮಗ್ರಂಥಿ, ವಿಷ್ಣುಗ್ರಂಥಿಗಳನ್ನು ಭೇದಿಸಿಕೊಂಡು ರುದ್ರಗ್ರಂಥಿಯನ್ನು ಸೇರುವ ಕುಂಡಲಿನಿಯು ಸಾಧಕನಿಗೆ ದಿವ್ಯಾನುಭವವನ್ನು ತಂದುಕೊಟ್ಟು ಆತನು ಸಮಾಧಿಸ್ಥಿತಿಯಲ್ಲಿ ಪಡೆಯುವ ಆನಂದವನ್ನು ಇಲ್ಲಿಯೂ ಅನುಭವಿಸುತ್ತಾನೆ.

ಸಾಧಾರಣ ಜನರು ಭಾವಿಸಿದ್ದಂತೆ ಗುರುದೇವರು ನಡೆಸುತ್ತಿದ್ದ ಶ್ರೀಚಕ್ರಾರಾಧನೆಯು ಕೇವಲ ಯಾಂತ್ರಿಕ ಪೂಜೆಯಾಗಿರಲಿಲ್ಲ. ಅದು ಆತ್ಮಾನಂದದ ದಿವ್ಯಾನುಭವವನ್ನು ತಂದುಕೊಡುವ ಅಪೂರ್ವ ಸಾಧನೆಯಾಗಿತ್ತು. ಅದ್ವೈತದ ಪ್ರಾಯೋಗಿಕ ಸಾಧನೆಯೂ ಆಗಿತ್ತು.

ಮನೆಯಲ್ಲಿ ಹಿರಿಯರ ನಡೆನುಡಿಗಳು, ಆಚರಣೆಗಳೇ ಮಕ್ಕಳಿಗೂ ಹೆದ್ದಾರಿಯಾಗುತ್ತವೆ. ಹಾಗೆಯೇ ಧಾರ್ಮಿಕ ಕ್ಷೇತ್ರದಲ್ಲಿರತಕ್ಕ ಆಚಾರ್ಯ ಪುರುಷರು ಏನನ್ನೂ ಮಾಡದೇ ಇದ್ದುಬಿಟ್ಟರೆ ಅವರ ಅನುಚರರೂ ವಸ್ತುಸ್ಥಿತಿಯನ್ನರಿಯದೇ ಏನನ್ನೂ ಮಾಡದೇ ಸುಮ್ಮನಿದ್ದು ಬಿಡುತ್ತಾರೆ. ಕ್ರಮೇಣ ಪತನದತ್ತ ಜಾರುತ್ತಾರೆ. ಜ್ಞಾನಿಗಳಾದವರು ತಮ್ಮ ಉದ್ಧಾರವನ್ನಷ್ಟೇ ಗಮನಿಸದೇ ಸಮಾಜದ ಉದ್ಧಾರದ ಬಗೆಗೂ ಯೋಚಿಸುತ್ತಾರೆ. ಅದಕ್ಕಾಗಿಯೇ ಕರ್ಮಬಂಧನಕ್ಕೆ ಸಿಲುಕದಿದ್ದರೂ ಇತರರಿಗಾಗಿ ಕರ್ಮವನ್ನು ಆಚರಿಸುತ್ತಾರೆ. ಸಮಾಜವು ಅವರನ್ನು ಅನುಕರಿಸುತ್ತದೆ, **"ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನ:"**ಎಂಬ ಗೀತಾವಚನದಂತೆ.

* * *



# ೩೫. ಎಲ್ಲರ ಬಂಧು

ಶ್ರೀಚಂದ್ರಶೇಖರ ಭಾರತಿಯವರು ಅಂತರ್ಮುಖಿಗಳಾಗಿದ್ದಾಗ ಯಾರಿಗಾದರೂ ದರ್ಶನಲಾಭವಾಗುವುದೇ ಅಪರೂಪವಾಗಿತ್ತು. ಒಮ್ಮೊಮ್ಮೆ ಬಹಿರ್ಮುಖರಾಗಿದ್ದಾಗ ಸಹ ಯಾರಾದರೂ ಬಂದರೆ ದರ್ಶನ ದೊರೆಯುತ್ತಿರಲಿಲ್ಲ. ಕೆಲವೊಮ್ಮೆ ದರ್ಶನ ನಿರಾಕರಿಸಲ್ಪಡುತ್ತಲೂ ಇತ್ತು. ಇದರಿಂದ ಬಂದವರು ದುಃಖದಿಂದಲೂ, ನಿರಾಸೆ, ಬೇಸರಗಳಿಂದಲೂ ಹಿಂದಿರುಗಿ ಹೋಗುತ್ತಿದ್ದರು.

ಅವರಲ್ಲಿ ಬರುತ್ತಿದ್ದವರು ಕಷ್ಟದಲ್ಲಿರುವವರು, ದುಃಖಿಗಳು, ಪ್ರಾಪಂಚಿಕ ವಿಷಯಗಳಲ್ಲಿ ಅನುಗ್ರಹ ಬಯಸುತ್ತಿದ್ದವರು, ಆಧ್ಯಾತ್ಮ ವಿಷಯಗಳಲ್ಲಿ ಮಾರ್ಗದರ್ಶನಕ್ಕಾಗಿ ಬಂದವರು, ಸಂದೇಹ ನಿವೃತ್ತಿಗಾಗಿ ಬಂದವರು ಮುಂತಾಗಿ ಅನೇಕರಿರುತ್ತಿದ್ದರು. ಅವರೆಲ್ಲರನ್ನೂ ಸಹ ಆತ್ಮೀಯತೆಯಿಂದಲೂ, ವಿಶ್ವಾಸದಿಂದಲೂ ಮಾತನಾಡಿಸಿ, ಅವರೆಲ್ಲರಲ್ಲೂ ದೈವಕೃಪೆಯುಂಟಾಗುವಂತೆ ಆಶೀರ್ವದಿಸುತ್ತಿದ್ದರು, ಅನುಗ್ರಹಿಸುತ್ತಿದ್ದರು. ಯೋಗಮಾರ್ಗದಲ್ಲಿ ಅದ್ವಿತೀಯ ಶಕ್ತಿಯನ್ನು ಸಂಪಾದಿಸಿದ್ದ ಗುರುವರ್ಯರು ಆರ್ತಿಗಳ ಕಷ್ಟನಾಶಕ್ಕಾಗಿ ದುಃಖನಿವಾರಣೆಗಾಗಿ ನಾನಾರೀತಿಯಲ್ಲಿ ಸಹಾಯವೆಸಗುತ್ತಿದ್ದರು.

ಮೊದಲಿನಿಂದಲೂ ಗುರುಗಳು ಏಕಾಂತಪ್ರಿಯರೆಂದು ತಿಳಿದಿದ್ದೇವೆ. ಏಕಾಂತವಾಸದಿಂದಲೂ, ಜನವಿದೂರರಾಗಿದ್ದುದರಿಂದಲೂ ಅವರು ಹೆಚ್ಚು ತಪೋಮಗ್ನರಾಗಲು ಸಾಧ್ಯವಾಗಿತ್ತು. ಜನರಿಂದ ದೂರ ಸರಿಯಲು ಇನ್ನೂ ಒಂದು ಕಾರಣವಿತ್ತು. ಸೋಗು, ಡಂಭಾಚರಣೆ, ವ್ಯರ್ಥಮಾತು, ಟೀಕೆ ಮೊದಲಾದವು ಅವರಿಗೆ ಸರಿಬೀಳುತ್ತಿರಲಿಲ್ಲ. ಕೇವಲ ಕುತೂಹಲಕ್ಕಾಗಿ ತಮ್ಮನ್ನು ಕಾಣಬಂದವರಿಗೆ ಅಥವಾ ತಮ್ಮ ಹೆಗ್ಗಳಿಕೆಯನ್ನು ಪ್ರದರ್ಶನ ಮಾಡಬಂದವರಿಗೆ ಅವರು ಭೇಟಿಯನ್ನೇ ನೀಡುತ್ತಿರಲಿಲ್ಲ. ಆದರೆ ನಿಜವಾಗಿಯೂ ದರ್ಶನ ಬಯಸಿದವರಿಗೆ, ಪ್ರಾಮಾಣಿಕರಾಗಿರುವವರಿಗೆ, ನಿಷ್ಕಪಟಿಗಳಿಗೆ ಮತ್ತು ಆಧ್ಯಾತ್ಮಿಕ ಸಹಾಯ ಸಲಹೆಗಳ ಅಗತ್ಯವಿರುವವರಿಗೆ ಹೇಗಾದರೂ ಅವರ ದರ್ಶನ ಲಭ್ಯವಾಗುತ್ತಿತ್ತು.

ಗುರುಗಳೆಂದರೆ ಪವಾಡಪುರುಷರೆಂದೂ, ತಮ್ಮ ಐಹಿಕ ಜೀವನಕ್ಕೆ ಅಗತ್ಯವಾದ ಸುಖೋಪಭೋಗಗಳನ್ನು ಮಂತ್ರತಂತ್ರಗಳಿಂದ ತಂದುಕೊಡುವವ

ರೆಂದೂ, ನಮ್ಮ ಕಷ್ಟ, ನಷ್ಟ, ಚಿಂತೆ, ವ್ಯಸನಗಳನ್ನು ಕ್ಷಣಮಾತ್ರದಲ್ಲಿ ಯಕ್ಷಿಣಿಯಂತೆ ಪರಿಹರಿಸುವ ಮಾಂತ್ರಿಕರೆಂದೂ ನಾವು ಭಾವಿಸುತ್ತೇವೆ. ಗುರುಗಳೆಂದರೆ ಋಜುಜೀವನವನ್ನು ನಡೆಸಲು ಮಾರ್ಗದರ್ಶನ ಮಾಡುವವರೂ, ಜೀವನವನ್ನು ಯಾವ ರೀತಿ ನಡೆಸಿದರೆ ಶ್ರೇಯಸ್ಕರವೆಂದು ಉಪದೇಶಿಸುವವರೂ, ಆಧ್ಯಾತ್ಮಿಕ ಉಪದೇಶವನ್ನು ನೀಡುವವರೂ ಆಗಿರುತ್ತಾರೆಂಬುದನ್ನು ಮರೆಯುತ್ತೇವೆ.

ಹೀಗೆ ಆಧ್ಯಾತ್ಮಿಕ ಮಾರ್ಗದರ್ಶನಕ್ಕಾಗಿ ಧಾರ್ಮಿಕ ತತ್ತ್ವಗಳ ತಳಹದಿಯ ಮೇಲೆ ಐಹಿಕ ಜೀವನವನ್ನು ಉತ್ತಮಗೊಳಿಸುವ ಮಾರ್ಗವನ್ನು ತಿಳಿಯುವುದಕ್ಕಾಗಿ ಗುರುದೇವರಲ್ಲಿ ಬಂದವರ, ಬರುತ್ತಿದ್ದವರ ಸಂಖ್ಯೆ ಬಹಳ ಕಡಿಮೆಯಿತ್ತು. ಶೃಂಗೇರಿಗೆ ಬರುತ್ತಿದ್ದ ಅನೇಕರು ಅದನ್ನೊಂದು ಪ್ರೇಕ್ಷಣೀಯ ಸ್ಥಳವೆಂದು ಭಾವಿಸಿ ಶ್ರೀಶಾರದಾ, ವಿದ್ಯಾಶಂಕರ ದೇವಾಲಯಗಳ ಪ್ರಾಚೀನ ಶಿಲ್ಪಕಲೆಯನ್ನು ವೀಕ್ಷಿಸಲು ಬರುತ್ತಿದ್ದರು. ತಾವೂ ಅಂತೆಯೇ ನೋಡಲ್ಪಡಬೇಕಾದ ವಸ್ತುವಾಗಲು ಗುರುಗಳು ಒಪ್ಪುತ್ತಿರಲಿಲ್ಲ. ಕೇವಲ ದರ್ಶನ ಮಾಡಬಹುದಾದ ವಸ್ತುವಾಗಲು ಅವರು ಬಯಸುತ್ತಿರಲಿಲ್ಲ. ಹೀಗಾಗಿ ಅನೇಕರಿಗೆ ಅವರ ದರ್ಶನವೇ ಲಭ್ಯವಾಗುತ್ತಿರಲಿಲ್ಲ.

ಆಪ್ತವರ್ಗದಲ್ಲಿದ್ದು ಸೇವೆಯಲ್ಲಿದ್ದವರೊಬ್ಬರು ಒಮ್ಮೆ ಗುರುಗಳಲ್ಲಿ "ತಮ್ಮ ದರ್ಶನವನ್ನು ಬಯಸಿಬಂದವರು ಖಿನ್ನರಾಗಿ ಹಿಂದಿರುಗುತ್ತಿದ್ದಾರೆ. ತಮ್ಮ ಕೃಪಾಶೀರ್ವಾದ, ಉಪದೇಶಗಳನ್ನು ಪಡೆಯಬೇಕೆಂದು ಬಂದವರು ನಿರಾಶೆಯಿಂದ ಹಿಂದಿರುಗುತ್ತಿದ್ದಾರೆ. ಶ್ರೀಪಾದದರ್ಶನವು ಹೆಚ್ಚು ಸುಗಮ ವಾದಲ್ಲಿ ಎಲ್ಲರಿಗೂ ಸಂತೋಷವಾಗುತ್ತದೆ" ಎಂದು ವಿನಂತಿಮಾಡಿ ಕೊಂಡರು.

"ನನ್ನನ್ನು ಕಾಣಬೇಕೆಂದು ಬಂದವರಿಗೆ ಕೇವಲ ನನ್ನನ್ನು ಕಾಣುವ ಕುತೂಹಲವೋ ಅಥವಾ ಯಾವ ಪ್ರಯೋಜನಕ್ಕೂ ಬಾರದ ವಿಷಯಗಳ ಪ್ರಸ್ತಾಪವೋ ವಿನಾ ಬೇರೇನೂ ಇರದು. ಇಂತಹವರಿಗೆ ಭೇಟಿ ಕೊಡುವುದ ರಿಂದ ಆಗುವ ಪ್ರಯೋಜನವೇನು?"

"ಇರಬಹುದು. ಆದರೆ ತಮ್ಮಿಂದ ನಿಜವಾಗಿಯೂ ಮಾರ್ಗದರ್ಶನ ಬಯಸುವವರೂ ಇರುತ್ತಾರಲ್ಲವೇ?"

"ನಮ್ಮಿಂದ ಅವರು ಬಯಸುವ ಸಹಾಯ ವೈದ್ಯನ ಕೆಲಸವೋ, ಮಾಂತ್ರಿಕನ ಕೆಲಸವೋ ತಾನೆ?"

"ಆಧ್ಯಾತ್ಮಿಕ ವಿಷಯದಲ್ಲಿ ಮಾರ್ಗದರ್ಶನ ಬೇಕಾದವರೂ ಇರುತ್ತಾರೆ."



"ಅಂತಹವರು, ಪ್ರಾಮಾಣಿಕವಾಗಿ ಆಧ್ಯಾತ್ಮಿಕ ವಿಷಯಗಳಲ್ಲಿ ಆಸಕ್ತ ರಾದವರು ಹೇಗಾದರೂ ನಮ್ಮನ್ನು ಕಂಡೇ ಕಾಣುತ್ತಾರೆ. ನಮ್ಮ ಭೇಟಿ ಪಡೆದೇ ಪಡೆಯುತ್ತಾರೆ"

ಆಧ್ಯಾತ್ಮಿಕ ವಿಷಯಗಳಲ್ಲಿ ಬುದ್ಧಿಯ ಮೇಲ್ಮೆಯನ್ನು ಪ್ರದರ್ಶಿಸಲು ಬರುವವರಿಗೆ, ವೇಷಭೂಷಣಗಳಲ್ಲಿ ಆಚಾರಶೀಲರಂತಿದ್ದು, ಆಚರಣೆಯಲ್ಲಿ ಡಾಂಭಿಕರಾಗಿದ್ದವರಿಗೆ, ದೊಡ್ಡ ದೊಡ್ಡ ಉಪನ್ಯಾಸಗಳನ್ನು ಕೊಡುತ್ತಾ ಭಾರತೀಯ ಸಂಸ್ಕೃತಿ, ಆಧ್ಯಾತ್ಮಿಕ ತತ್ತ್ವಗಳು, ಹಿಂದೂ ನಾಗರಿಕತೆ ಮುಂತಾದ ವಿಷಯಗಳನ್ನು ಕುರಿತು ಉದ್ದುದ್ದ ಭಾಷಣಗಳನ್ನು ಮಾಡುತ್ತಾ, ತಾವು ಹೇಳುವುದಾವುದನ್ನೂ ಅನುಸರಿಸದವರಿಗೆ ಗುರುಗಳ ಸಂದರ್ಶನಾವಕಾಶ ದೊರೆಯುವುದು ದುರ್ಲಭವಾಗುತ್ತಿತ್ತು. ಮತತತ್ತ್ವಗಳನ್ನು, ಮತಾಚಾರ್ಯರು ಗಳನ್ನೂ ಪರಸ್ಪರ ಹೋಲಿಸಿ ತುಲನೆ ಮಾಡಿ, ಯಾವುದು ಶ್ರೇಷ್ಠ, ಯಾವುದು ನಿಕೃಷ್ಟ ಎಂಬುದನ್ನು ಕುರಿತು ಬುದ್ಧಿಯ ಕಸರತ್ತು ಮಾಡುವವರನ್ನೂ ಸಹ ಗುರುಗಳು ಮೆಚ್ಚುತ್ತಿರಲಿಲ್ಲ.

ಈ ಮತ ದೊಡ್ಡದೋ, ಆ ಮತ ದೊಡ್ಡದೋ ಎಂಬ ಚರ್ಚೆಯೇಕೆ? ಜೀವನು ಸಾಕಾರನೋ, ನಿರಾಕಾರನೋ ಎಂಬ ವಾದವೇಕೆ? ದೇವನು ಸಾಕಾರನೆಂದು ನಾವು ಭಾವಿಸಿದಲ್ಲಿ ಆತನ ಪಾದಾರವಿಂದದಿಂದ ಸಹಸ್ರ ಸಹಸ್ರ ಯೋಜನಗಳಿಗಿಂತ ಎಷ್ಟೋ ದೂರದಲ್ಲಿ ನಾವಿದ್ದೇವೆ. ಆ ದಿವ್ಯ ಪಾದಸನ್ನಿಧಿಯನ್ನು ಸೇರುವ ಮಾರ್ಗದಲ್ಲಿ ನಾವಿನ್ನೂ ಪರಿಶ್ರಮಿಸಬೇಕು. ಆ ಮಾರ್ಗದ ಕೊನೆಯನ್ನು ಮುಟ್ಟಿ, ಆತನ ಪರಮ ಕರುಣಾಪೂರ್ಣವಾದ, ತೇಜಃಪುಂಜವಾದ ಮುಖಾರವಿಂದ ದರ್ಶನ ಮಾಡಿದಾಗ ಮಾತ್ರ ನಾವು ಆತನು ವಿಭೂತಿ ಧರಿಸಿದ್ದಾನೋ, ತಿಲಕ ಧರಿಸಿದ್ದಾನೋ ಎಂದು ನೋಡಬಹುದು. ಆತನನ್ನು ಶಿವನೆನ್ನುವುದೋ, ವಿಷ್ಣುವೆನ್ನುವುದೋ ನಿರ್ಧರಿಸಬಹುದು. ಈಗೇಕೆ ಆ ವಿಷಯದಲ್ಲಿ ಸುಮ್ಮನೆ ಒಣ ವಾದ, ಚರ್ಚೆಗಳು? ನಾವೀಗಿರುವ ಸ್ಥಿತಿಯಲ್ಲಿ ಅದ್ವೈತ ಸತ್ಯವೋ, ವಿಶಿಷ್ಟಾದ್ವೈತ ಸತ್ಯವೋ, ದ್ವೈತ ಸತ್ಯವೋ ಎಂಬ ಚಿಂತೆಯೇಕೆ? ಯಾವುದು ಸತ್ಯವಾದರೂ ಅದರಿಂದ ನಮಗೇನಾಗುತ್ತದೆ? ಧರ್ಮಮಾರ್ಗವು ಎಲ್ಲರಿಗೂ ತೆರೆದಿದೆ. ಪ್ರತಿಯೊಬ್ಬನೂ ತನ್ನ ಅರ್ಹತೆ ಯೋಗ್ಯತೆಗಳಿಗೆ ತಕ್ಕಂತೆ ತನಗೆ ವಿಧಿಸಲ್ಪಟ್ಟ ರೀತಿಯಲ್ಲಿ ಧರ್ಮಮಾರ್ಗದಲ್ಲಿ ನಡೆಯಬೇಕು. ನಾವು ಆ ಮಾರ್ಗದಲ್ಲಿ ನಡೆದು ಅಂತಿಮ ಗುರಿಯನ್ನು ಮುಟ್ಟಿದಾಗ ಬ್ರಹ್ಮವು ಸಾಕಾರವೋ, ನಿರಾಕಾರವೋ ಎಂಬುದನ್ನು ವಿವೇಚಿಸಬಹುದು.

ಉಪದೇಶಕ್ಕಿಂತ ಸ್ವಂತ ನಡೆನುಡಿಗಳಲ್ಲಿ ತತ್ತ್ವಗಳನ್ನು ಅಳವಡಿಸಿ ಕೊಳ್ಳುವುದು ಮುಖ್ಯ. ವಿಚಾರಕ್ಕಿಂತ ಆಚಾರ ಮುಖ್ಯ. ಪ್ರತ್ಯಕ್ಷ ಕರ್ಮಾನುಷ್ಠಾನ ಮಾಡಬೇಕು. ಸೋಗು, ವೇಷ, ಡಂಭಾಚಾರ ಇವೆಲ್ಲಾ ಹೋಗಬೇಕು. ಸುಳ್ಳಾಡುವುದು ತಪ್ಪೆಂದು ಎಲ್ಲರಿಗೂ ತಿಳಿದಿದೆ. ಆದರೆ ಎಷ್ಟು ಜನ ಸುಳ್ಳು ಹೇಳುತ್ತಿಲ್ಲ? ಹಾಗೆಯೇ ಮೋಸ ಮಾಡುವುದು ತಪ್ಪೆಂದು ಗೊತ್ತಿದೆ. ಎಷ್ಟು ಜನ ಮೋಸ ಮಾಡುತ್ತಿಲ್ಲ? ಆಧುನಿಕ ಜೀವನದಲ್ಲಿ ಸುಳ್ಳು, ಮೋಸ ಮೊದಲಾದವು ಮುಖ್ಯವಾದ ಅಂಗಗಳೇ ಆಗಿಬಿಟ್ಟಿವೆ. ಸತ್ಯವಚನ, ನಿರ್ವಂಚನೆ ಇವು ಕಷ್ಟವಲ್ಲ. ಸುಲಭವಾಗಿ ಆಚರಿಸಬಹುದಾದ ಧರ್ಮಗಳು. ಈ ಸಾಮಾನ್ಯಧರ್ಮಗಳೇ ಹೀನಸ್ಥಿತಿಯಲ್ಲಿರುವಾಗ ಇಂದ್ರಿಯಾತೀತವಾದ ಬ್ರಹ್ಮಜ್ಞಾನಕ್ಕೆ ಸಂಬಂಧಪಟ್ಟ ಚರ್ಚೆ, ಭಾಷಣಗಳಿಗೆ ಅವಕಾಶವೆಲ್ಲಿದೆ?

ಪ್ರಾಮಾಣಿಕವಾದ ಶ್ರದ್ಧೆಯಿಂದ, ಅಕ್ಕರೆಯಿಂದ ಸಾಮಾನ್ಯಧರ್ಮಗಳನ್ನು ನಮ್ಮ ನಡೆನುಡಿಗಳಲ್ಲಿ ಅಳವಡಿಸಿಕೊಂಡು ಆ ಬಳಿಕ ಆಧ್ಯಾತ್ಮಿಕ ಮಾರ್ಗದಲ್ಲಿ ಪರಿಕ್ರಮಣ ಮಾಡಬೇಕೆಂಬುದು ಗುರುದೇವರ ಅಭಿಪ್ರಾಯವಾಗಿತ್ತು.

* * *



## ೩೬. ಶಿಷ್ಯಸ್ವೀಕಾರ

ಶ್ರೀಚಂದ್ರಶೇಖರ ಭಾರತೀಯವರು ಸಂಚಾರದಿಂದ ಹಿಂದಿರುಗಿ ಬಂದ ನಂತರ ಹೆಚ್ಚೆಚ್ಚು ಏಕಾಂತವಾಸಿಗಳಾಗುತ್ತಾ ಬಂದರೆಂದೂ, ಅವರ ತಪಶ್ಚರ್ಯೆ ಅತ್ಯಂತ ಕಠಿಣವೂ, ಉಗ್ರವೂ ಆಗುತ್ತಾ ಬಂದಿತೆಂದೂ ಈ ಹಿಂದೆ ಓದಿದೆವಷ್ಟೆ. ತಪಸ್ಸು ತೀವ್ರವಾದಂತೆಲ್ಲಾ ಅವರು ಜನವೃಂದದಿಂದ ದೂರವಾಗುತ್ತಾ ಬಂದರು. ಅಂತರ್ಮುಖಿಗಳಾಗುತ್ತಾ ಬಂದರು. ಮಠದ ಲೌಕಿಕ ವ್ಯವಹಾರ ಗಳಲ್ಲಿ ಸಲಹೆ, ಮಾರ್ಗದರ್ಶನ ನೀಡುವುದನ್ನು ನಿಲ್ಲಿಸಿಬಿಟ್ಟರು. ಪ್ರಾಪಂಚಿಕ ವಿಷಯಗಳಲ್ಲಂತೂ ಪೂರ್ಣ ಪರಾಙ್ಮುಖರಾಗಿಬಿಟ್ಟರು. ಗುರುವರ್ಯರು ಸದಾಕಾಲವೂ ಹೀಗೆಯೇ ಇದ್ದುಬಿಟ್ಟರೆ, ಮಠದ ಆಡಳಿತ ವಿಷಯದಲ್ಲಿ ಸೂಕ್ತ ನಿರ್ದೇಶನ ನೀಡುವವರಾರು? ನ್ಯೂನತೆಗಳನ್ನೂ, ಲೋಪದೋಷ ಗಳನ್ನೂ ತೋರಿಸಿಕೊಟ್ಟು ಪರಿಹಾರಮಾರ್ಗವನ್ನು ಸೂಚಿಸುವವರಾರು?

ಈ ಯೋಚನೆ ಶಿಷ್ಯವರ್ಗದವರಿಗೂ, ಮಠದ ಕಾರ್ಯಭಾರಿಗಳಿಗೂ ಪ್ರಬಲವಾಗುತ್ತಾ ಬಂದಿತು. ಗುರುದೇವರು ಬಹಿರ್ಮುಖರಾಗಿದ್ದು ತಮ್ಮ ದೈನಂದಿನ ಅನುಷ್ಠಾನಗಳಲ್ಲಿ ನಿರತರಾಗಿದ್ದಾಗ ಈ ಯೋಚನೆಯನ್ನು ಶಿಷ್ಯರು ನಮ್ರರಾಗಿ ನಿವೇದಿಸಿಕೊಂಡು, ಇದಕ್ಕೆ ಪರಿಹಾರವನ್ನು ಸೂಚಿಸಬೇಕೆಂದು ಬಿನ್ನವಿಸಿಕೊಂಡರು. ಈ ವಿಷಯವಾಗಿ ಮೊದಲೇ ತೀರ್ಮಾನ ಮಾಡಿಕೊಂಡಿ ದ್ದಂತೆ ಗುರುಗಳು ತಾವು ಶಿಷ್ಯ ಪರಿಗ್ರಹ ಮಾಡುವುದಾಗಿ ತಿಳಿಸಿ, ಯೋಗ್ಯ ವಟುವನ್ನು ಆರಿಸುವಂತೆ ಮಠದ ಕಾರ್ಯಭಾರಿಗಳಿಗೂ, ಆಪ್ತಶಿಷ್ಯವರ್ಗ ದವರಿಗೂ ಆಣತಿಯಿತ್ತರು. ತಮ್ಮ ಮಾರ್ಗದರ್ಶನದಲ್ಲಿ ಶಿಷ್ಯರನ್ನು ತಯಾರು ಮಾಡಿ ಆ ಬಳಿಕ ತಾವು ಸದಾಕಾಲವೂ ತಪಸ್ಸಿನಲ್ಲಿರುವುದು ಅವರ ಇಚ್ಛೆಯಾಗಿತ್ತು.

ಶ್ರೀಗಳವರ ಅಣತಿಯಂತೆ ಸತ್ಕುಲಪ್ರಸೂತರಾಗಿದ್ದ ಶ್ರೀ ಶ್ರೀನಿವಾಸ ಎಂಬ ಬಾಲಕನನ್ನು ಶೃಂಗೇರಿಗೆ ಕರೆಯಿಸಿಕೊಂಡು ಅಲ್ಲಿಯೇ ಅವರಿಗೆ ಉಪನಯನ ವನ್ನೂ ನೆರವೇರಿಸಿದರು. ಪ್ರೌಢವಿದ್ಯೆ ಮತ್ತು ಶಾಸ್ತ್ರಗಳಲ್ಲಿ ತರಬೇತಿ ನೀಡಲು ಆರಂಭಿಸಿದರು. ಶ್ರೀನಿವಾಸರು ಶ್ರೀಚಂದ್ರಶೇಖರ ಭಾರತಿಯವರಿಂದ ಅನುಗ್ರಹಿಸಲ್ಪಟ್ಟು ಕ್ರಿಸ್ತಶಕ ೧೯೩೧ರ ಮೇ ೨೨ ರಂದು ಶ್ರೀ ಅಭಿನವ

ವಿದ್ಯಾತೀರ್ಥ ಎಂಬ ಅಭಿದಾನದಿಂದ ಆಶ್ರಮ ಪ್ರವೇಶ ಮಾಡಿದರು. ಜಗನ್ಮಾತೆಯಾದ ಶ್ರೀಶಾರದೆಯ ಅನುಗ್ರಹದಿಂದಲೂ, ಗುರುವರ್ಯರ ಆಶೀರ್ವಾದದಿಂದಲೂ ಶ್ರೀಮದಭಿನವ ವಿದ್ಯಾತೀರ್ಥರು ತಮ್ಮ ವಿದ್ಯಾಭ್ಯಾಸವನ್ನೂ, ಅನುಷ್ಠಾನವನ್ನೂ ಶ್ರದ್ಧೆಯಿಂದ ಆಚರಿಸುತ್ತಿದ್ದರು.

ಶಿಷ್ಯಸ್ವೀಕಾರದ ದಿನವೇ ಶ್ರೀಚಂದ್ರಶೇಖರ ಭಾರತಿಯವರೂ ಮತ್ತು ಬಾಲಯತಿವರ್ಯರೂ ಉತ್ಸವದಲ್ಲಿ ಹೊರಟು ಶಿಷ್ಯರಿಗೆಲ್ಲಾ ದರ್ಶನವನ್ನು ಕೊಡಬೇಕಾಗಿತ್ತು. ಅದಕ್ಕೆ ಸಿದ್ಧತೆಗಳು ನಡೆದಿದ್ದವು. ಸಮಸ್ತ ರಾಜಮರ್ಯಾದೆಗಳೂ ಸಿದ್ಧವಾಗಿದ್ದವು. ಮುಂಬದಿಯಲ್ಲಿ ಸ್ವರ್ಣಪಾಲಕಿಯೂ, ಅದರ ಹಿಂಬದಿಯಲ್ಲಿ ರಜತ ಪಾಲಕಿಯೂ ಇಡಲ್ಪಟ್ಟಿದ್ದವು. ಯತಿಗಳಿಬ್ಬರೂ ಶ್ರೀಶಾರದೆಯ ದರ್ಶನವನ್ನು ಪಡೆದು ಅಲಂಕರಿಸಲ್ಪಟ್ಟಿದ್ದ ಪಾಲಕಿಗಳತ್ತ ಬಂದಿದ್ದರು. ಅತ್ಯಂತ ಕುತೂಹಲಾವಿಷ್ಟವಾಗಿ ಬಂದಿದ್ದ ಜನಸ್ತೋಮವು ಯತಿದ್ವಯರನ್ನು ಕಂಡೊಡನೆಯೇ ಹರ್ಷೋದ್ಗಾರಗೈದಿತು. ಬಾಲಯತಿಯವರನ್ನು ನಡೆಸಿಕೊಂಡು ಸಿಂಹರಾಜನಂತೆ ಗಂಭೀರವಾಗಿ ಬರುತ್ತಿದ್ದ ಶ್ರೀಚಂದ್ರಶೇಖರ ಭಾರತಿಯವರು ಇದ್ದಕ್ಕಿದ್ದಂತೆ ಶಿಷ್ಯರ ಕೈಯನ್ನು ಬಿಟ್ಟು ಹಿಂಬದಿಯಲ್ಲಿದ್ದ ರಜತ ಪಾಲಕಿಯಲ್ಲಿ ಕುಳಿತುಬಿಟ್ಟರು! ವಾಡಿಕೆಯಂತೆ ಹಿರಿಯ ಗುರುಗಳು ಸ್ವರ್ಣಪಾಲಕಿಯಲ್ಲೂ, ಕಿರಿಯ ಗುರುಗಳು ರಜತ ಪಾಲಕಿಯಲ್ಲೂ ಮಂಡಿಸಬೇಕಾಗಿತ್ತು. ಆದರೆ ಹಿರಿಯ ಗುರುಗಳು ರಜತ ಪಾಲಕಿಯಲ್ಲಿ ಕುಳಿತು ಶಿಷ್ಯರಿಗೆ ಸ್ವರ್ಣಪಾಲಕಿಯಲ್ಲಿ ಕೂಡುವಂತೆ ಸೂಚನೆಯಿತ್ತರು. ಶಿಷ್ಯಸ್ವಾಮಿಗಳು ಕಿಂಕರ್ತವ್ಯಮೂಢರಾದರು. ಶಿಷ್ಯರೆಲ್ಲರೂ ತಬ್ಬಿಬ್ಬಾದರು. ಹಲವು ಹಿರಿಯ ಶಿಷ್ಯರು ದೈನ್ಯದಿಂದ ಸ್ವರ್ಣಪಾಲಕಿಯಲ್ಲಿ ಮಂಡಿಸುವಂತೆ ಗುರುಗಳನ್ನು ಪ್ರಾರ್ಥಿಸಿದರು. ಆದರೆ ಪ್ರಯೋಜನವಾಗಲಿಲ್ಲ. ಕಡೆಗೆ ಮಠದ ಕಾರ್ಯಭಾರಿಯಾಗಿದ್ದ ಶ್ರೀಕಂಠಶಾಸ್ತ್ರಿಗಳೇ ವಿಜ್ಞಾಪನೆ ಮಾಡಿಕೊಂಡರು. ಆಗ ಶ್ರೀಶ್ರೀಗಳವರು "ಇಂದಿನ ಕಾರ್ಯಕಲಾಪಗಳ ಪ್ರಾಮುಖ್ಯತೆಯನ್ನೇ ಮರೆತಿರೇನು? ಇಂದಿನಿಂದ ಈ ಪೀಠಕ್ಕೆ ಸಲ್ಲಬೇಕಾದ ಎಲ್ಲಾ ಮರ್ಯಾದೆ, ಗೌರವ, ಲಾಂಛನ, ಬಿರುದುಬಾವಲಿಗಳು ಅವರಿಗೇ ಸಲ್ಲಬೇಕು" ಎಂದು ಶಿಷ್ಯರನ್ನು ತೋರಿಸುತ್ತಾ ನುಡಿದರು. "ನಮಗಲ್ಲ ತಿಳಿಯಿತೇ? ನಮ್ಮನ್ನು ನಮ್ಮ ಪಾಡಿಗೆ ಬಿಡಿ. ಇನ್ನು ಮುಂದೆ ನಮಗೆ ಬೇಕಾಗಿರತಕ್ಕ ಒಂದೇ ಒಂದು ಅಗತ್ಯವೆಂದರೆ ನಮ್ಮನ್ನು ನಮ್ಮಷ್ಟಕ್ಕೆ ಬಿಡುವುದು" ತಾವು ಇಚ್ಛೆಸಿದಂತೆಯೇ ಗುರುದೇವರು ಶಿಷ್ಯಸ್ವೀಕಾರವಾದ ದಿನವೇ ಮಠದ ಎಲ್ಲಾ ಲೌಕಿಕ, ವೈದಿಕ ವ್ಯವಹಾರಾದಿಗಳನ್ನು ಬಿರುದು ಬಾವಲಿಗಳನ್ನೂ



ಕಿರಿಯ ಸ್ವಾಮಿಗಳಿಗೆ ವಹಿಸಿ ತಾವು ನಿಶ್ಚಿಂತರಾಗಿ ಸ್ವತಂತ್ರರಾದರು, ಸ್ವಚ್ಛಂದರಾಗಿ ಆತ್ಮವಿಲಾಸರತರಾದರು.

ಬಾಲಯತಿಗಳ ಸರ್ವತೋಮುಖವಾದ ಅಭ್ಯುದಯದಲ್ಲಿ ಗುರುದೇವರು ವಿಶೇಷ ಆಸಕ್ತಿಯನ್ನು ವಹಿಸಿದ್ದರು. ಅವರು ಸಂನ್ಯಸ್ತರಾಗುವ ಮುನ್ನವೇ ಅವರ ಗುರುಗಳಾಗಿದ್ದ ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಯವರು ವಿದೇಹಮುಕ್ತರಾಗಿದ್ದುದರಿಂದ ಅವರಿಗೆ ಮಾರ್ಗದರ್ಶನ ದೊರೆತಿರಲಿಲ್ಲ. ಆದರೆ ಶ್ರೀಮದಭಿನವ ವಿದ್ಯಾತೀರ್ಥರಿಗೆ ತಮ್ಮ ಗುರುಗಳಿಂದಲೇ ಮಾರ್ಗದರ್ಶನ ಪಡೆಯುವ ಅಪೂರ್ವ ಭಾಗ್ಯ ದೊರೆತಿತ್ತು. ಶ್ರೀಚಂದ್ರಶೇಖರ ಭಾರತಿಯವರ ದಿವ್ಯ ಕರುಣಾಕಟಾಕ್ಷದಲ್ಲಿ ಶ್ರೀವಿದ್ಯಾತೀರ್ಥರು ಅಭ್ಯುದಯ ಹೊಂದುತ್ತಾ ಬಂದು ಗುರುವರ್ಯರ ನಿರೀಕ್ಷೆಯಂತೆ ಅಸಾಧಾರಣ ಪಾಂಡಿತ್ಯ ಗಳಿಸಿ ವಿದ್ಯಾತೀರ್ಥರೆಂಬ ಅಭಿದಾನಕ್ಕೆ ಅನ್ವರ್ಥವೇ ಆದರು.

ಶಿಷ್ಯಸ್ವಾಮಿಗಳು ತಮ್ಮ ಮಾರ್ಗದರ್ಶನವಿಲ್ಲದೇ ಸ್ವತಂತ್ರರಾಗಿ ಮುಂದುವರೆಯುವ ಶಕ್ತಿ ಸಾಮರ್ಥ್ಯಗಳನ್ನು ಪಡೆದಿದ್ದಾರೆಂದು ಮನದಟ್ಟಾದ ಬಳಿಕ ಹಿರಿಯ ಗುರುಗಳು ಪುನಃ ತಮ್ಮ ಪೂರ್ವಸ್ಥಿತಿಗೆ ಹಿಂದಿರುಗಿದರು. ಬಹಿರ್ಮುಖರಾಗಿದ್ದಾಗ ಪೂಜಾನುಷ್ಠಾನಗಳ ವಿನಾ ಉಳಿದ ಸಮಯಗಳಲ್ಲಿ ಮೌನವಾಗಿರುತ್ತಿದ್ದರು. ಅವರ ಏಕಾಂತಪ್ರಿಯತೆ ಎಷ್ಟು ಹೆಚ್ಚಾಯಿತೆಂದರೆ ಕ್ರಮೇಣ ಅವರು ಹೊರಗೆ ಬರುವುದನ್ನೇ ನಿಲ್ಲಿಸಿಬಿಟ್ಟರು. ಉತ್ಸವಾದಿಗಳ ಸಮಯದಲ್ಲಿ ಸಾವಿರಾರು ಜನ ಭಕ್ತಾದಿಗಳು ಬಂದಾಗಲೂ ಹೊರಗೆ ಕಾಣಿಸಿಕೊಳ್ಳುತ್ತಿರಲಿಲ್ಲ. ಒಮ್ಮೊಮ್ಮೆ ಹೊರಗೆ ಬಂದರೂ ಕೇವಲ ಕೆಲವೇ ನಿಮಿಷಗಳು ಕಾಣಿಸಿಕೊಳ್ಳುತ್ತಿದ್ದರು. ಆಗ ತೇಜೋಮಯವಾದ ಅವರ ಮುಖಾರವಿಂದದ ದರ್ಶನ ಲಭಿಸುತ್ತಿತ್ತೇ ವಿನಾ ಅವರ ದಿವ್ಯವಾಣಿಯನ್ನು ಆಲಿಸುವ ಸೌಭಾಗ್ಯ ದೊರೆಯುತ್ತಿರಲಿಲ್ಲ. ಆದರೆ ಅವರ ದರ್ಶನ ಮಾತ್ರದಿಂದಲೇ ಭಕ್ತರ ಹೃದಯದಲ್ಲಿ ಶ್ರದ್ಧೆ ಭಕ್ತಿಗಳು ಪುಟಿದೇಳುತ್ತಿದ್ದವು, ಹರ್ಷ ಉತ್ಸಾಹಗಳು ಚಿಮ್ಮುತ್ತಿದ್ದವು.

ಶಿಷ್ಯಸ್ವಾಮಿಗಳು ಮಠದ ಕಾರ್ಯಭಾರವನ್ನು ವಹಿಸಿಕೊಂಡುದರಿಂದ ಗುರುದೇವರು ನಿಶ್ಚಿಂತರಾಗಿ ಆತ್ಮಸಾಧನೆಯಲ್ಲಿ ನಿರತರಾದರು. ಪರಮವಿರಾಗಿಯಾಗಿದ್ದ ಅವರು ಈ ಮೊದಲೇ ಎಲ್ಲಾ ವೈಭವ ಆಡಂಬರಗಳನ್ನು ತ್ಯಜಿಸಿದ್ದರು. ನಿರಾಡಂಬರ ಮೂರ್ತಿಯಾದ ಅವರು ಕಠಿಣ ವ್ರತನಿಯಮಾದಿಗಳಿಂದ ತಪೋನುಷ್ಠಾನಗಳನ್ನು ತೀವ್ರಗೊಳಿಸಿದರು. ತಮ್ಮ ವೈಯಕ್ತಿಕ ಅಗತ್ಯಗಳನ್ನು ಅತ್ಯಲ್ಪ ಪ್ರಮಾಣಕ್ಕೆ ಇಳಿಸಿಕೊಂಡು ತಮ್ಮ ಶಕ್ತಿಯನ್ನೆಲ್ಲಾ ಊರ್ಧ್ವಮಾರ್ಗದತ್ತ

ಚಲಿಸಲು ನಿರ್ದೇಶಿಸಿದರು.

ಶ್ರೀವಿದ್ಯೋಪಾಸನೆಯೂ ಸಹ ಬ್ರಹ್ಮವಿದ್ಯೋಪಾಸನೆಯ ಮತ್ತೊಂದು ಸ್ವರೂಪವೆಂದು ಹಿಂದೆಯೇ ಓದಿದ್ದೇವಲ್ಲವೇ? ಗುರುವರ್ಯರು ಶ್ರೀಚಕ್ರದ ಬಾಹ್ಯಾರಾಧನೆಯೊಡನೆ ಅದರಲ್ಲಿ ಅಡಗಿರುವ ಗೂಢತತ್ತ್ವದ ಧ್ಯಾನವನ್ನೂ ಸತತವಾಗಿ ಆಚರಿಸುತ್ತಾ ಬಂದಿದ್ದರು. 'ಅಂತರ್ಮುಖ ಸಮಾರಾಧ್ಯಾ' ಎಂಬ ಶ್ರೀದೇವಿಯ ನಾಮವನ್ನು ಅಕ್ಷರಶಃ ಸತ್ಯವಾಗಿಸಿದ್ದರು. ಸಹಸ್ರದಳಪದ್ಮಸ್ಥಳಾದ ಶ್ರೀದೇವಿಯು ಅಭಿವರ್ಷಿಸುವ ಜ್ಞಾನಸುಧಾ ಸಂಪಾತದಲ್ಲಿ ಅವರು ಆತ್ಮಾನಂದವನ್ನು ಅನುಭವಿಸುತ್ತಿದ್ದರು.

ಗುರುದೇವರು ಬಹಿರ್ಮುಖರಾಗಿದ್ದ ಸಂದರ್ಭದಲ್ಲಿ ಅವರನ್ನು ದರ್ಶನ ಮಾಡಿದ ಶಿಷ್ಯರು ಮತ್ತೊಮ್ಮೆ ಸಂಚಾರವನ್ನು ಕೈಗೊಳ್ಳಬೇಕೆಂದು ಪ್ರಾರ್ಥಿಸಿದರು. ಮೊದಮೊದಲು ಶೃಂಗೇರಿಯನ್ನು ಬಿಟ್ಟು ಹೊರಡಲು ಗುರುಗಳು ಒಪ್ಪಲಿಲ್ಲ. ಸಂಚಾರವೆಂದರೆ ತಪೋನುಷ್ಠಾನಕ್ಕೆ ಅಡಚಣೆಯಲ್ಲವೇ? ಆದರೆ ಶಿಷ್ಯರು ಬಿಡಲಿಲ್ಲ. ಬಹುವಿಧವಾಗಿ ಬೇಡಿಕೊಂಡರು, ಬಲವಂತ ಮಾಡಿದರು. ಕಡೆಗೆ ಒಪ್ಪಿಗೆ ಕೊಟ್ಟ ಗುರುಗಳು ತಮ್ಮ ಪರಿವಾರವು ಮಿತವಾಗಿರಬೇಕೆಂದೂ, ಮಠದ ಬಿರುದು, ಬಾವಲಿ, ವಿಶೇಷ ಲಾಂಛನಗಳು, ರಾಜೋಚಿತ ಉಪಕರಣಗಳು ಮುಂತಾದವು ಇರಕೂಡದೆಂದೂ ತಿಳಿಸಿದರು. ಮಿತಪರಿವಾರದೊಡನೆ ಕೇವಲ ಕೆಲವು ಸ್ಥಳಗಳಿಗೆ ಮಾತ್ರ ಹೊರಡುವುದಾಗಿ ತಿಳಿಸಿದರು. ಪ್ರಾರ್ಥನೆ ಸಲ್ಲಿಸಿದ್ದ ಶಿಷ್ಯರು ಇದನ್ನೇ ಮಹಾಪ್ರಸಾದವೆಂದು ಭಾವಿಸಿ ಹರ್ಷಪಟ್ಟರು.

ಕ್ರಿಸ್ತಶಕ ೧೯೩೮ರಲ್ಲಿ ಸಂಚಾರವನ್ನು ಆರಂಭಿಸಿ ಬೆಂಗಳೂರಿಗೆ ದಯಮಾಡಿಸಿದ ಗುರುಗಳು ಹಲವು ದಿನಗಳ ಕಾಲ ಅಲ್ಲಿಯೇ ಇದ್ದು ಆಧ್ಯಾತ್ಮಿಕ ಪ್ರಭೆಯನ್ನು ಬೀರಿದರು. ಅಲ್ಲಿ ಕ್ರಿ.ಶ.೧೯೦೭ರಲ್ಲಿ ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀ ಸ್ವಾಮಿಯವರಿಂದ ಸ್ಥಾಪಿಸಲ್ಪಟ್ಟಿದ್ದ ಶ್ರೀಶಂಕರಾಚಾರ್ಯರ ದೇವಾಲಯಕ್ಕೆ ಅಭಿಮುಖವಾಗಿ ಶ್ರೀಶಾರದಾಂಬಾ ದೇವಾಲಯವೂ ನಿರ್ಮಿಸಲ್ಪಟ್ಟಿದ್ದು ಗುರುದೇವರು ಶ್ರೀಶಾರದಾಂಬಾ ಪ್ರತಿಷ್ಠೆ ಮುಂತಾದ ಉತ್ಸವಗಳನ್ನು ನೆರವೇರಿಸಿದರು. ಬೆಂಗಳೂರಿನಲ್ಲಿ ಪ್ರವಾಹೋಪಾದಿಯಂತೆ ಬರುತ್ತಿದ್ದ ಜನಸಂದಣಿ, ಗಡಿಬಿಡಿ ಗೊಂದಲಗಳಲ್ಲಿ ಗುರುವರ್ಯರಿಗೆ ಅಗತ್ಯವಾದ ಏಕಾಂತ ದೊರಕಲಿಲ್ಲ. ಅಲ್ಲಿಂದ ಹೊರಟು ಮೈಸೂರಿಗೆ ದಯಮಾಡಿಸಿ ಮಹಾರಾಜರಿಗೆ ದರ್ಶನವಿತ್ತು ಮುಂದೆ ಘಟ್ಟವಿಳಿದು ಕೊಯಮತ್ತೂರಿನ ಮೂಲಕ ಕಾಲಟೀ ಕ್ಷೇತ್ರಕ್ಕೆ ಆಗಮಿಸಿದರು. ಮಾರ್ಗಮಧ್ಯೆ ಎಲ್ಲಿಯೂ ಹೆಚ್ಚುಕಾಲ ನಿಲ್ಲಲಿಲ್ಲ.



ಕಾಲಟಿಯಲ್ಲಿ ಗುರುಗಳು ಸುಮಾರು ಹತ್ತು ತಿಂಗಳ ಕಾಲ ನೆಲಸಿದ್ದರು. ಇಲ್ಲಿಗೂ ಸಹ ಭಕ್ತರ ಪ್ರವಾಹ ನುಗ್ಗಿತು. ಗುರುದೇವರ ದರ್ಶನ, ಉಪದೇಶಗಳಿಗೆ ಹಂಬಲಿಸುತ್ತಾ ದಕ್ಷಿಣದೇಶದ ವಿವಿಧ ಭಾಗಗಳಿಂದ ಜನ ತಂಡೋಪತಂಡವಾಗಿ ಬರಲಾರಂಭಿಸಿದರು. ಗುರುದೇವರ ಕಾಲಟಿಯ ವಾಸಕ್ಕೆ ತಿರುವಾಂಕೂರಿನ ಮಹಾರಾಜರೂ, ಮಂತ್ರಿವರ್ಯರೂ ಸಕಲ ಅನುಕೂಲಗಳನ್ನು ತೃಪ್ತಿಕರವಾಗಿ ಮಾಡಿಕೊಟ್ಟು ಗುರುಗಳ ಅನುಗ್ರಹಕ್ಕೆ ಪಾತ್ರರಾದರು. ಶ್ರೀರಮಣ ಮಹರ್ಷಿಗಳ ಶಿಷ್ಯ ಶ್ರೀವೇದಾಂತಂ ರಾಮಯ್ಯನವರು ತಮ್ಮ ಅನುಯಾಯಿಗಳೊಡನೆ ಕಾಲಟಿಗೆ ಬಂದು ಗುರುದೇವರ ದರ್ಶನ ಮಾಡಿದರು.

ಮೊದಲಿನಿಂದಲೂ ಮೌನ ಏಕಾಂತಪ್ರಿಯರಾದ ಗುರುಗಳಿಗೆ ಈ ಸಂಚಾರಕಾಲದಲ್ಲಿ ಅವೆರಡೂ ಲಭ್ಯವಾಗಲಿಲ್ಲ. ಹೋದೆಡೆಯಲ್ಲೆಲ್ಲಾ ಜನ ಇರುವೆಗಳಂತೆ ಮುತ್ತುತ್ತಿದ್ದರು.ಈ ಮಹಾಪುರುಷರ ಹೆಸರನ್ನು ಕೇಳಿದವರು ದೂರದೂರದಿಂದ ಬಂದು ದರ್ಶನಕ್ಕಾಗಿ ಹಾತೊರೆಯುತ್ತಿದ್ದರು. ಹಲವು ನಿಮಿಷಗಳ ದರ್ಶನಕ್ಕಾಗಿ ಹಲವು ಗಂಟೆಗಳೇ ಕಾದು ನಿಲ್ಲುತ್ತಿದ್ದರು. ತಮ್ಮ ಭಕ್ತಿಗೌರವಗಳನ್ನು ಸಮರ್ಪಿಸಿ ಆಶೀರ್ವಾದ ಪಡೆಯಲು ಭಕ್ತರು ಕಾತರರಾಗಿದ್ದರು. ಹೀಗೆ ಹೋದೆಡೆಯಲ್ಲಾ ಜನಪ್ರವಾಹವೇ ಹರಿದು ಬರುತ್ತಿದ್ದಾಗ ಗುರುಗಳಿಗೆ ವಿಶ್ರಾಂತಿಯೆಲ್ಲಿಯದು? ಏಕಾಂತವಾಸಕ್ಕೆ ಅವಕಾಶವೆಲ್ಲಿಯದು?

ಕ್ರಿ.ಶ.೧೯೪೦ರಲ್ಲಿ ಸಂಚಾರವನ್ನು ಸಮಾಪ್ತಗೊಳಿಸಿದ ಗುರುಗಳು ಶೃಂಗೇರಿಗೆ ಹಿಂದಿರುಗಿ ತಾಯವಾತ್ಸಲ್ಯದ ಮಡಿಲಿಗೆ ಹಿಂದಿರುಗಿದ ಮಗುವಿನಂತೆ ತೃಪ್ತರೂ ಸಂತೋಷಚಿತ್ತರೂ ಆದರು.

* * *

# ೩೭. ಸಹಸ್ರ ಚಂಡೀಯಾಗ, ರುದ್ರಹೋಮ

ಜ್ಞಾನ, ಭಕ್ತಿ, ಕರ್ಮ, ವೈರಾಗ್ಯ ಮತ್ತು ಯೋಗ ಮುಂತಾದ ಮಾರ್ಗಗಳಲ್ಲಿ ಪ್ರತಿಯೊಂದರಲ್ಲೂ ತಮ್ಮ ಸಾಧನೆಯನ್ನು ನಡೆಸಿ ಆತ್ಮಸಾಕ್ಷಾತ್ಕಾರ ಪಡೆದಿದ್ದ ಗುರುಗಳು ಜ್ಞಾನಿಯ ಅತ್ಯುಚ್ಚ ಸ್ಥಿತಿಯಾದ ಅವಧೂತತ್ವವನ್ನು ಮುಟ್ಟಿದ್ದರು. ಸದಾಕಾಲವೂ ಆತ್ಮಾನಂದದ ಉನ್ಮತ್ತಾವಸ್ಥೆಯಲ್ಲಿಯೇ ಇರುತ್ತಿದ್ದರು. ತಮ್ಮ ತಪಶ್ಚರ್ಯೆಯಿಂದ ಯೋಗಾನುಷ್ಠಾನದಿಂದ ಪೂರ್ಣವೈರಾಗ್ಯದಿಂದ ಗುರುದೇವರು ಆಧ್ಯಾತ್ಮಿಕ ಪ್ರಭಾವಲಯದಲ್ಲಿ ಬೆಳಗುವ ಮಹಾಜ್ಯೋತಿಯಂತಾದರು.

ಗುರುದೇವರು ತಮ್ಮ ಅರವತ್ತನೆಯ ಸಂವತ್ಸರವನ್ನು ಸಮೀಪಿಸುತ್ತಿದ್ದಾಗ ಅನೇಕ ಮಂದಿ ಶಿಷ್ಯರು ಅವರ ಷಷ್ಟ್ಯಬ್ದಿ ಉತ್ಸವವನ್ನು ಅತ್ಯಂತ ವಿಜೃಂಭಣೆಯಿಂದಲೂ, ವೈಭವದಿಂದಲೂ ನಡೆಸುವ ಉತ್ಸಾಹ ಹೊಂದಿ, ಗುರುಗಳಲ್ಲಿ ತಮ್ಮ ಸಂಕಲ್ಪವನ್ನು ನಿವೇದಿಸಿಕೊಂಡರು. ಗುರುಗಳಾದರೋ ಈ ವೈಭವ ವಿಜೃಂಭಣೆ ಉತ್ಸವಾದಿಗಳಿಂದ ಬಹಳ ಹಿಂದೆಯೇ ದೂರವಾಗಿಬಿಟ್ಟಿದ್ದರು. ಶಿಷ್ಯಪರಿಗ್ರಹಣ ಮಾಡಿ ತಮ್ಮ ಉತ್ತರಾಧಿಕಾರಿಯನ್ನು ನಿಯಮಿಸಿದೊಡನೆಯೇ ರಾಜಲಾಂಛನಗಳಾದ ಕಿರೀಟಧಾರಣೆ, ಸಿಂಹಾಸನಾರೋಹಣ, ಪಾಲಕಿಉತ್ಸವ, ನವರಾತ್ರಿ ಕಾಲದಲ್ಲಿ ನಡೆಯುತ್ತಿದ್ದ ದರ್ಬಾರು ಮುಂತಾದುವೆಲ್ಲವನ್ನೂ ಶಿಷ್ಯಸ್ವಾಮಿಗಳಿಗೇ ವಹಿಸಿ, ತಾವು ಪೂರ್ಣವೈರಾಗ್ಯವನ್ನಂಗೀಕರಿಸಿ, ಅತ್ಯಂತ ಸರಳ ಜೀವನವನ್ನು ನಡೆಸುತ್ತಿದ್ದರು. ಈಗ ಶಿಷ್ಯರು ಷಷ್ಟ್ಯಬ್ದಿ ಉತ್ಸವವನ್ನು ಮಹಾವೈಭವದಿಂದ ಆಚರಿಸಬೇಕೆಂದರೆ ಗುರುವರ್ಯರು ಸಮ್ಮತಿಸುವುದುಂಟೆ?

ಆದರೆ ಶಿಷ್ಯರು ಬಿಡಲಿಲ್ಲ. ಮತ್ತೆ ಮತ್ತೆ ಬಿನ್ನವಿಸಿಕೊಂಡು ಅದನ್ನು ಕೇವಲ ಸಾರ್ವಜನಿಕ, ಲೌಕಿಕ ಸಮಾರಂಭವಾಗಿ ನಡೆಸದೇ, ಲೋಕಕಲ್ಯಾಣಾರ್ಥವಾಗಿ ಅತಿರುದ್ರ ಸ್ವಾಹಾಕಾರ ಮಹಾಯಾಗ, ಸಹಸ್ರ ಚಂಡೀಹೋಮ, ಪಾರಾಯಣಾದಿಗಳು ಮತ್ತು ಪೂಜಾದಿಗಳನ್ನು ನೆರವೇರಿಸುವುದರ ಮೂಲಕ ಆಚರಣೆ ಮಾಡುವುದಾಗಿ ವಿಜ್ಞಾಪನೆ ಮಾಡಿ, ಗುರುದೇವರ ಅನುಮತಿಯನ್ನು ದೊರಕಿಸಿಕೊಂಡರು. ಹಾಗೆ ಅನುಮತಿ ನೀಡಿದರೂ ಸಹ ಗುರುಗಳು ಆ ಹೋಮಹವನಾದಿಗಳು ತಮ್ಮ ಷಷ್ಟ್ಯಬ್ದಿಯ



ಅಂಗವಾಗಿ ಇರಕೂಡದೆಂದು ಸ್ಪಷ್ಟಪಡಿಸಿದ್ದರು.

ಶೃಂಗೇರಿಯಲ್ಲಿ ಮತ್ತೊಮ್ಮೆ ಉತ್ಸಾಹ, ಚಟುವಟಿಕೆಗಳು ಆರಂಭವಾದವು. ಉತ್ಸವದ ವಾರ್ತೆ ಭಾರತಾದ್ಯಂತ ಇರುವ ಶಿಷ್ಯರಿಗೂ, ಭಕ್ತರಿಗೂ ತಲುಪಿತು. ಯೋಗಪುರುಷರೊಬ್ಬರ ಷಷ್ಟ್ಯಬ್ದಿ ಸಮಾರಂಭದಲ್ಲಿ ಭಾಗವಹಿಸುವುದೆಂದರೆ ಸಾಮಾನ್ಯವೇ? ಅಂತಹವರ ದರ್ಶನವಾಗುವುದೇ ಪುಣ್ಯ. ಅವರಿಗೆ ಸಂಬಂಧಿಸಿದ ಉತ್ಸವಾದಿಗಳನ್ನು ನಡೆಸುವುದು ಪರಮಪುಣ್ಯವಲ್ಲವೆ? ಎಲ್ಲೆಡೆಯ ಶಿಷ್ಯರಿಂದ ಸೇವೆಗಾಗಿ ಕಾಣಿಕೆಗಳು ಬರಲಾರಂಭಿಸಿದವು. ವಿಶೇಷವಾದ ಉತ್ಸವ ಸಮಿತಿಯು ಹಗಲಿರುಳೂ ದುಡಿಯಿತು. ವಿವಿಧ ಸ್ಥಳಗಳಿಂದ ಬರುವ ಭಕ್ತಾದಿಗಳ ವಸತಿ, ಊಟೋಪಚಾರಗಳಿಗೆ ಏರ್ಪಾಟುಗಳು ನಡೆದವು. ಶೃಂಗೇರಿಯತ್ತ ವಾಹನಗಳ ಪ್ರವಾಹವೇ ಬರಲಾರಂಭಿಸಿತು. ಬಸ್ಸು, ಕಾರು, ಗಾಡಿ ಮುಂತಾದ ಎಲ್ಲಾ ವಾಹನ ಸೌಕರ್ಯಗಳನ್ನು ಉಪಯೋಗಿಸಿಕೊಂಡು ಗುರುದರ್ಶನಕ್ಕಾಗಿ ಜನರು ಬರಲಾರಂಭಿಸಿದರು.

ಶ್ರೀಮದಭಿನವ ವಿದ್ಯಾತೀರ್ಥರ ಮೇಲ್ವಿಚಾರಣೆಯಲ್ಲಿ ಎಲ್ಲಾ ಏರ್ಪಾಡುಗಳು ನಡೆಯುತ್ತಿದ್ದವು. ಗುರುವರ್ಯರು ಲೋಕಕಲ್ಯಾಣಾರ್ಥವಾಗಿ ನಡೆಯುತ್ತಿದ್ದ ಈ ಕಾರ್ಯದ ಎಲ್ಲಾ ಸಿದ್ಧತೆಗಳನ್ನು ಕಾರ್ಯಭಾರಿಗಳಿಂದ ವಿಚಾರಿಸಿ ಸೂಕ್ತ ಸಲಹೆಗಳನ್ನು ನೀಡುತ್ತಿದ್ದರು. ಸದಾಕಾಲವೂ ಅಂತರ್ಮುಖಿಗಳಾಗಿದ್ದು ಯಾವ ಕಾರ್ಯದಲ್ಲೂ ಪ್ರವೇಶಿಸದೆ ತಮ್ಮಷ್ಟಕ್ಕೆ ತಾವಿರುತ್ತಿದ್ದ ಶ್ರೀಜಗದ್ಗುರು ಮಹಾಸ್ವಾಮಿಯವರು ಈಗ ಎಲ್ಲವನ್ನೂ ವಿಚಾರಿಸುವುದು, ಸಲಹೆ ನೀಡುವುದನ್ನು ಕಂಡ ಶಿಷ್ಯವರ್ಗಕ್ಕೆ ಉಂಟಾದ ಸಂತೋಷಕ್ಕೆ ಮೇರೆಯೇ ಇರಲಿಲ್ಲ. ಬಹಿರಾಡಂಬರ, ಪ್ರಚಾರ, ಪ್ರದರ್ಶನಗಳಿಂದ ವಿಮುಖರಾಗಿದ್ದ ಗುರುವರ್ಯರು ಆಸಕ್ತಿಯಿಂದ ಎಲ್ಲರನ್ನೂ ಮಾತನಾಡಿಸಿ ಪ್ರೋತ್ಸಾಹಿಸುತ್ತಿದ್ದುದು ಶಿಷ್ಯರಿಗೆ ದಶಭುಜ ಬಂದಷ್ಟು ಹುಮ್ಮಸ್ಸು, ಉತ್ಸಾಹಗಳನ್ನು ತುಂಬಿತ್ತು. ಗುರುಗಳು ಹೋಮಾದಿ ಕಾರ್ಯಗಳು ಆರಂಭವಾಗುವ ಮೊದಲು ಶಿಷ್ಯರಿಗೆ ಮತ್ತೊಮ್ಮೆ ದರ್ಶನ ನೀಡಿ, ಈ ಪುಣ್ಯಕಾರ್ಯದಿಂದ ಸರ್ವವ್ಯಾಪಿಯಾದ ಭಗವಂತನಿಗೆ ಖಂಡಿತವಾಗಿಯೂ ತೃಪ್ತಿಯಾಗುವುದೆಂದೂ, ಹೋಮದ ಪೂರ್ಣಾಹುತಿಯ ದಿನ ಭಗವಂತನ ಮೆಚ್ಚುಗೆಯ ಪ್ರತೀಕವಾಗಿ ಮೋಡಗಳು ಹರ್ಷವರ್ಷವನ್ನು ಕರೆಯುವುವೆಂದೂ ನುಡಿದು ಎಲ್ಲರಿಗೂ ಶ್ರೇಯಸ್ಸಾಗುವಂತೆ ಆಶೀರ್ವದಿಸಿ ಮತ್ತೆ ಏಕಾಂತವಾಸಕ್ಕೆ ದಯಮಾಡಿಸಿದರು.

ತಮ್ಮ ಷಷ್ಟ್ಯಬ್ದಿಯ ಕಾಲಕ್ಕೆ ಅದನ್ನಾಚರಿಸುವ ಸಲುವಾಗಿಯೇ

ಉತ್ಸವಾದಿಗಳು ಕೂಡದೆಂದು ಗುರುವರ್ಯರು ನುಡಿದಿದ್ದರಷ್ಟೆ. ಅವರ ಆಜ್ಞೆಯಂತೆ ಕೆಲವು ದಿನಗಳಾದ ಬಳಿಕವೇ ಈ ಯಾಗಾದಿಗಳನ್ನು ನಡೆಸಲು ನಿಶ್ಚಯಿಸಲಾಗಿತ್ತು. ಆ ಪ್ರಕಾರವಾಗಿಯೇ ವೈದಿಕಮಹಾಶಯರುಗಳು ಶ್ರೀಮದಭಿನವ ವಿದ್ಯಾತೀರ್ಥರ ಅಧ್ಯಕ್ಷತೆಯಲ್ಲಿ ಯಾಗಕಾರ್ಯಾರಂಭ ಮಾಡಿದರು. ಜಗದ್ಗುರು ಮಹಾಸ್ವಾಮಿಯವರು ಅಂತರ್ಮುಖರಾಗಿದ್ದರೂ ಸಂಕಲ್ಪಿಸಿದ್ದ ಕಾರ್ಯಗಳೆಲ್ಲವೂ ನಡೆಯಲೇಬೇಕೆಂದು ಮೊದಲೇ ಆಜ್ಞಾಪಿಸಿದ್ದರು. ತಮ್ಮ ಅಂತರ್ಮುಖತೆಯಿಂದ ಯಾವ ಕಾರ್ಯವೂ ನಿಲ್ಲಬಾರದೆಂದೂ, ಲೋಕಕಲ್ಯಾಣಾರ್ಥವಾಗಿ ಎಲ್ಲವೂ ಜರುಗಬೇಕೆಂದೂ ತಿಳಿಸಿದ್ದರು. ಅದರಂತೆಯೆ ಕಿರಿಯ ಸ್ವಾಮಿಗಳೇ ಯಾಗಸಂಕಲ್ಪ ಮಾಡಿದರು. ಅತಿರುದ್ರ ಸ್ವಾಹಾಕಾರ ಮಹಾಯಾಗವೂ, ಸಹಸ್ರಚಂಡೀಹೋಮವೂ ನಡೆದವು. ಜಗದ್ಗುರುಗಳು ಅಪ್ಪಣೆ ಕೊಡಿಸಿದ್ದಂತೆ ಯಾಗದ ಪೂರ್ಣಾಹುತಿಯ ಕಾಲಕ್ಕೆ ಸರಿಯಾಗಿ [೧೯/೦೩/೧೯೫೪] ವರುಣದೇವನು ಪುಷ್ಪವೃಷ್ಟಿಯನ್ನು ಕರೆದನು. ಅದೇಸಮಯಕ್ಕೆ ಸರಿಯಾಗಿ ಕೆಲವೇ ಕ್ಷಣಗಳ ಕಾಲ ಹೊರಬಂದ ಗುರುದೇವರು ಎಲ್ಲಾ ಕಲಾಪಗಳನ್ನು ವೀಕ್ಷಿಸಿದರೆಂದೂ, ಆಗ ಜನಸ್ತೋಮದಲ್ಲಿದ್ದ ಕೆಲವರಿಗೆ ಅವರ ದರ್ಶನವಾಯಿತೆಂದೂ ಪ್ರತೀತಿಯುಂಟು. ಸರ್ವವ್ಯಾಪಿಯಾದ ಈಶ್ವರನ ಅಂಶವೇ ಆಗಿರತಕ್ಕ ಗುರುದೇವರ ತಪೋಮಹಿಮೆಯನ್ನು ಪೂರ್ಣವಾಗಿ ಅರಿತವರಾರು?

ಏಕಾಂತದ ಶಾಂತ ವಾತಾವರಣದಲ್ಲಿ ಅವರಿಗಿದ್ದ ಸ್ವಭಾವಸಿದ್ಧವಾದ ಸಹಜಪ್ರವೃತ್ತಿಯು, ಸಹಸ್ರ ಚಂಡೀಹೋಮದ ಸಂದರ್ಭದಲ್ಲಿ ಹೆಚ್ಚು ಸುಸ್ಪಷ್ಟವೂ, ಸುವ್ಯಕ್ತವೂ ಆಯಿತು. ರಾಷ್ಟ್ರದ ಎಲ್ಲೆಡೆಗಳಿಂದಲೂ ಸಾವಿರ ಸಾವಿರ ಸಂಖ್ಯೆಯಲ್ಲಿ ಭಕ್ತಾದಿಗಳು, ಆ ಅಪೂರ್ವ ಯಜ್ಞವೀಕ್ಷಣೆಗಾಗಿಯೂ, ಶ್ರೀಗುರುದೇವರನ್ನು ಸಂದರ್ಶಿಸಿ ತಮ್ಮ ಭಕ್ತಿ ಗೌರವಗಳನ್ನು ಸಲ್ಲಿಸುವುದಕ್ಕಾಗಿಯೂ ಶೃಂಗೇರಿಗೆ ಬಂದು ನೆರೆದಿದ್ದರು. ಗುರುದೇವರು ಆಗಾಗ ಆ ಯಾಗ ವ್ಯವಸ್ಥೆಗಳೆಲ್ಲವನ್ನೂ ಆಮೂಲಾಗ್ರವಾಗಿ ವಿಚಾರಿಸಿ ತಿಳಿದುಕೊಳ್ಳುತ್ತಿದ್ದರೂ ಸಹ, ತಾವು ಮಾತ್ರ ಹೊರಗೆ ಬರಲೇ ಇಲ್ಲ. ಅವರಿಗೆ ಲವಲೇಶವಾದರೂ ಮಮಕಾರವಿದ್ದು ತಮ್ಮ ವೈಯಕ್ತಿಕ ಕೀರ್ತಿ ಪ್ರತಿಷ್ಠೆಯಲ್ಲಿ ಸ್ವಲ್ಪವೇ ಸ್ವಲ್ಪವಾದರೂ ಆಸಕ್ತಿಯಿದ್ದಿದ್ದಲ್ಲಿ, ಯಾಗ ಸಮಯದಲ್ಲಿ ಹಲವು ನಿಮಿಷಗಳಾದರೂ ಹೊರಕ್ಕೆ ಬಂದು, ಎಲ್ಲರಿಗೂ ದರ್ಶನವನ್ನು ಕರುಣಿಸಿ, ಶಿಷ್ಯಕೋಟಿಯು ಅರ್ಪಿಸುತ್ತಿದ್ದ ಭಕ್ತಿ ಶ್ರದ್ಧೆಯಿಂದ ಸಂತೋಷಪಡುತ್ತಿದ್ದರು. ಆದರೆ ಅವರು ತಮ್ಮ ಏಕಾಂತಸ್ಥಾನವನ್ನು ಬಿಟ್ಟು ಹೊರಬರಲೇ ಇಲ್ಲ.



ಶ್ರೀಗುರುವರ್ಯರನ್ನು ಬಹಳವರ್ಷಗಳ ನಂತರ ದರ್ಶನ ಮಾಡುವ ಆಸೆಯಿಂದ ದೂರದೂರದಿಂದ ಬಂದವರು ಸ್ವಲ್ಪಮಟ್ಟಿಗೆ ನಿರಾಶರಾದರು. ಅವರನ್ನು ಪ್ರತ್ಯಕ್ಷವಾಗಿ ಕಾಣಲಾಗದಿದ್ದರೂ, ತಮ್ಮ ಹೃದಯದಲ್ಲಿಯೇ ಅವರ ದಿವ್ಯಮೂರ್ತಿಯನ್ನು ಕಲ್ಪಿಸಿಕೊಂಡು ಭಕ್ತಿನಮ್ರತೆಗಳಿಂದ ಮಾನಸಪೂಜೆ ಸಲ್ಲಿಸಿದರು. ಕಿರಿಯ ಸ್ವಾಮಿಗಳನ್ನೇ ಸಂದರ್ಶಿಸಿ ಆನಂದಪಟ್ಟರು.

ಜನಸಂದಣಿಯೆಲ್ಲವೂ ಕರಗಿಹೋದ ಕೆಲವು ದಿನಗಳ ನಂತರ ಗುರುಗಳು ಹೊರಗೆ ಕಾಣಿಸಿಕೊಂಡರು.

ಆಗ ಗುರುದೇವರನ್ನು ದರ್ಶಿಸಿದ ಶಿಷ್ಯರೊಬ್ಬರು "ಮಹಾಸನ್ನಿಧಾನದ ದರ್ಶನಕ್ಕಾಗಿ ಸಹಸ್ರಾರು ಜನ ಭಕ್ತರು ಕಾದಿದ್ದರು. ಆ ಉತ್ಸವಕಾಲದಲ್ಲಿ ಮಹಾಸ್ವಾಮಿಯವರನ್ನು ಕುರಿತಾದ ಭಾವನೆಗಳೇ ಭಕ್ತಾದಿಗಳ ಮನಸ್ಸನ್ನೆಲ್ಲಾ ವ್ಯಾಪಿಸಿಬಿಟ್ಟಿದ್ದವು. ಹತ್ತಿರದಲ್ಲಿಲ್ಲದಿದ್ದರೆ ದೂರದಿಂದಲಾದರೂ ಸನ್ನಿಧಾನದ ದರ್ಶನ ಲಭಿಸಿಯೇ ಲಭಿಸುತ್ತದೆಂದು ಭಾವಿಸಿಕೊಂಡಿದ್ದ ಅವರು ಆಶಾಭಂಗ ಹೊಂದಿ ಆ ದುಗುಡವನ್ನು ತಮ್ಮ ಹೃದಯಗಳಲ್ಲಿ ತುಂಬಿಕೊಂಡು ಹಿಂದಿರುಗಿದರು" ಎಂಬುದಾಗಿ ಬಿನ್ನವಿಸಿದರು. ಸ್ವಭಾವಜನ್ಯವಾದ ಮಂದಹಾಸ ಬೀರುತ್ತಾ ತಮ್ಮದೇ ಆದ ವಿಶಿಷ್ಟಶೈಲಿಯಲ್ಲಿ ಗುರುದೇವರು "ಅದು ಒಳ್ಳೆಯದೇ ಆಯಿತಲ್ಲವೇ? ನಾನೊಂದು ವೇಳೆ ಅವರಿಗೆ ಕಾಣಿಸಿಕೊಂಡಿದ್ದರೆ ಅವರ ಕುತೂಹಲವೋ, ಹಂಬಲವೋ ಅದು ಏನಾದರಾಗಿರಲಿ, ಕೂಡಲೇ ತಣಿದು ಬಿಡುತ್ತಿತ್ತು. ಅವರೆಲ್ಲಾ ಸ್ವಾಭಾವಿಕವಾಗಿ, ಸಹಜವಾಗಿ ಮುಂದಿನ ಕ್ಷಣದಲ್ಲಿಯೇ ನನ್ನನ್ನು ಮರೆತುಬಿಡುತ್ತಿದ್ದರಲ್ಲವೇ?" ಎಂದರು.

ಭಾರತಾದ್ಯಂತ ಅನೇಕ ಸಂನ್ಯಾಸಿಗಳೂ, ಸಾಧುಸಂತರೂ, ಮಠಾಧಿಪತಿಗಳೂ ಈ ಉತ್ಸವಕ್ಕೆ ಆಗಮಿಸಿದ್ದರು. ಅವರಲ್ಲಿ ಸಜ್ಜನಗಡದ ಶ್ರೀಶ್ರೀಧರ ಸ್ವಾಮಿಗಳೂ, ಹರಿಹರಪುರ ಮಠದ ಶ್ರೀಸ್ವಯಂಪ್ರಕಾಶ ಅಭಿನವ ರಾಮಾನಂದ ಸರಸ್ವತಿಯವರೂ ಪ್ರಮುಖರು.

ಬಂದ ಭಕ್ತರೆಲ್ಲರಿಗೂ ಸಮರ್ಪಕವಾಗಿ ಪೂಜಾದಿಗಳಿಗೆ, ಪ್ರಸಾದ ವಿನಿಯೋಗಕ್ಕೆ, ಊಟೋಪಚಾರಗಳಿಗೆ ವ್ಯವಸ್ಥೆಯಾಗಿದ್ದು ಬಂದವರೆಲ್ಲರೂ ಶ್ರೀಶಾರದಾದೇವಿ, ಶ್ರೀನೃಸಿಂಹ ಭಾರತೀ ಮಹಾಸ್ವಾಮಿಗಳ ಅಧಿಷ್ಠಾನ ಮತ್ತು ಶ್ರೀಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳ ದರ್ಶನ ಪಡೆದು ಶ್ರೀ ಜಗದ್ಗುರು ಚಂದ್ರಶೇಖರ ಭಾರತೀ ಮಹಾಸ್ವಾಮಿಗಳನ್ನು ತಂತಮ್ಮ ಹೃದಯದಲ್ಲಿ ದರ್ಶನಗೈದು ಉತ್ಸವದ ಸವಿನೆನಪುಗಳನ್ನೂ, ಭಗವಂತನ ಅನುಗ್ರಹವನ್ನೂ ಹೊತ್ತು ಆನಂದದಿಂದ ಹಿಂದಿರುಗಿದರು.

* * *

# ೩೮. ಮತ್ತೆ ಬಹಿರ್ಮುಖರಾದರು

ಉತ್ಸವಾದಿಗಳು ಕಳೆದ ಸ್ವಲ್ಪ ದಿನಗಳ ಬಳಿಕ ಗುರುವರ್ಯರು ಪುನಃ ಬಹಿರ್ಮುಖರಾಗಿ, ನಿತ್ಯನೈಮಿತ್ತಿಕ ಕರ್ಮಾದಿಗಳಲ್ಲಿ, ಪೂಜಾನುಷ್ಠಾನಗಳಲ್ಲಿ ನಿರತರಾದರು.

ಸಾಧಾರಣವಾಗಿ ಗುರುಗಳು ಬಹಿರ್ಮುಖರಾದ ಸುದ್ದಿ ಬಲು ಬೇಗ ವ್ಯಾಪಿಸಿ, ಜನರು ಒಡನೆಯೇ ಅವರ ದರ್ಶನಕ್ಕಾಗಿ ಧಾವಿಸಿ ಬರುತ್ತಿದ್ದರು. ಅವರಿಂದ ಯಾವ ಮಾತುಕತೆಗಳನ್ನಾಗಲೀ, ಉಪದೇಶ, ಬೋಧನೆಗಳನ್ನಾಗಲೀ ಪಡೆಯದೇ ಇದ್ದರೂ, ತೇಜೋಮಯವಾದ ಅವರ ವದನಾರವಿಂದದ ದರ್ಶನ ಮಾತ್ರದಿಂದಲೇ ಭಾವುಕರಾದ ಭಕ್ತರು ಪುಲಕಿತರಾಗಿ ಆನಂದಬಾಷ್ಪ ಸುರಿಸುತ್ತಿದ್ದರು. ಬಹಳಕಾಲ ತಾಯಿಯಿಂದ ತಪ್ಪಿಸಿಕೊಂಡು ಅಲೆಯುತ್ತಿದ್ದ ಮಗು ಮತ್ತೆ ತಾಯನ್ನು ಕಂಡಾಗ ಅನುಭವಿಸುವ ಹರ್ಷಸಂತೋಷವನ್ನು ಗುರುದೇವರ ದರ್ಶನದಿಂದ ಶಿಷ್ಯಾವಳಿಯು ಅನುಭವಿಸುತ್ತಿತ್ತು.

ಗುರುಗಳವರಲ್ಲಿ ವೈಯಕ್ತಿಕ ಸಂದರ್ಶನ ಪಡೆಯುವ ಅಭಿಲಾಷೆಯುಳ್ಳವರು, ಕೆಲ ಸಂದರ್ಭಗಳಲ್ಲಿ ಮೊದಲು ತಾವು ಭೇಟಿಗಾಗಿ ಬರುವುದಾಗಿ ತಿಳಿಸಿ, ತಮ್ಮ ದರ್ಶನಲಾಭ ದೊರೆಯಬಹುದೇ ಎಂದು ವಿಚಾರಿಸಿ ತಿಳಿದು ಕೊಳ್ಳುತ್ತಿದ್ದರು. ವೈಯಕ್ತಿಕ ಭೇಟಿ, ಮಾತುಕತೆಗಳಿಗೆ ಸಾಧಾರಣವಾಗಿ ಅವರ ಅನುಮತಿಯನ್ನು ಪಡೆಯಬೇಕಾಗುತ್ತಿತ್ತು. ಇಂತಹ ಭೇಟಿಗಳನ್ನು ಗುರುಗಳು ಸಾಮಾನ್ಯವಾಗಿ ನಿರಾಕರಿಸದಿದ್ದರೂ, ಒಮ್ಮೊಮ್ಮೆ ಭೇಟಿ ದೊರೆಯುವುದು ದುರ್ಲಭವಾಗುತ್ತಿತ್ತು. ಕೇವಲ ಪ್ರಚಾರ, ಪ್ರತಿಷ್ಠೆ, ತಮ್ಮ ಐಶ್ವರ್ಯ, ಪಾಂಡಿತ್ಯ, ವಿದ್ವತ್ಪ್ರದರ್ಶನ, ಅಗ್ಗಳಿಕೆಯನ್ನು ತೋರಲು ಬಂದವರಿಗೆ ದರ್ಶನ ದೊರೆಯುವುದು ಸುಲಭಸಾಧ್ಯವಾಗಿರಲಿಲ್ಲ.ಅನುಪಯುಕ್ತವಾದ ಮಾತುಕತೆ, ದರ್ಶನಶಾಸ್ತ್ರಗಳ, ಮತತತ್ತ್ವಗಳ ತುಲನಾತ್ಮಕವಾದ ಚರ್ಚೆ ಇವೆಲ್ಲವೂ ಪ್ರಾಮಾಣಿಕವಾಗಿ ಮುಕ್ತಿಮಾರ್ಗದಲ್ಲಿ ನಡೆಯುವವರಿಗೆ ಅನವಶ್ಯಕವೆಂದು ಗುರುಗಳು ಭಾವಿಸಿದ್ದರು ಮತ್ತು ಅಂತಹ ಚರ್ಚೆಗಾಗಿ ಬಂದವರಿಗೆ ಅದನ್ನು ಹೇಳಿಯೂ ಬಿಡುತ್ತಿದ್ದರು. ಒಂದು ಮತದಿಂದ ಇನ್ನೊಂದು ಮತಕ್ಕೆ ಪ್ರವೇಶ ಪಡೆಯಲು ಸಲಹೆಗಾಗಿ, ಅನುಮತಿಗಾಗಿ ಬಂದವರಿಗೂ ಇದೇ ರೀತಿಯ ಉತ್ತರ ಸಿದ್ಧವಿರುತ್ತಿತ್ತು. ಪ್ರತಿಯೊಬ್ಬರೂ ತಾವು ಜನ್ಮ ಪಡೆದ ಮತದಲ್ಲಿಯೇ



ಮುಕ್ತಿಮಾರ್ಗವನ್ನರಸಬೇಕೆಂದು ಗುರುಗಳು ಬೋಧಿಸುತ್ತಿದ್ದರು. ಮತಪರಿವರ್ತನೆಯೆಂದರೆ ಅದೇನು ಸಾಮಾನ್ಯವಾದ ಕಾರ್ಯವೇ? ಮತಾಂತರ ಹೊಂದಿದವರಿಗಂತೂ ದರ್ಶನವು ದುರ್ಲಭವೇ ಅಗುತ್ತಿತ್ತು.

ಒಮ್ಮೊಮ್ಮೆ ಪ್ರಾಮಾಣಿಕವಾಗಿ ಪೂಜ್ಯಭಾವದಿಂದ ಬಂದವರಿಗೂ ನಿರಾಶೆ ಕಾದಿರುತ್ತಿತ್ತು. ಇದಕ್ಕೆ ಕಾರಣವೂ ಇತ್ತು. ಮುಕ್ತಿಯ ಹಾದಿಯಲ್ಲಿ ನಡೆಯುತ್ತಿದ್ದು ಒಂದು ಮಾರ್ಗದಲ್ಲಿ ಹೆಜ್ಜೆಯಿಟ್ಟು ತನ್ನ ಗುರಿಯತ್ತ ಹೊರಟಾತ ಆ ಮಾರ್ಗದಲ್ಲಿಯೇ ಪೂರ್ಣಶ್ರದ್ಧೆ ನಂಬಿಕೆಗಳಿಂದ ಮುಂದುವರೆಯಬೇಕು. ಒಂದು ವೇಳೆ ತಾನಿಟ್ಟ ಹೆಜ್ಜೆ ತಪ್ಪೆನಿಸಿದರೆ, ಗುರುವಿನ ಸಹಾಯದಿಂದ ತನ್ನನ್ನು ತಾನೇ ತಿದ್ದಿಕೊಳ್ಳಬೇಕು. ಧ್ಯೇಯಸಾಧನೆಗಾಗಿ ಮರಳಿ ಯತ್ನ ಮಾಡಬೇಕು. ಇಂತಹವರಿಗೆ ಪ್ರಾರಂಭದಲ್ಲಿ ಧ್ಯೇಯಬಿಂದುವಿನತ್ತ ನಿರ್ದೇಶಿಸಿದ ಗುರುವು ಆ ಮಾರ್ಗವನ್ನೂ ಸೂಚಿಸುತ್ತಾನೆಯಲ್ಲವೆ? ನಡುವೆ ಬೇರೊಬ್ಬ ಗುರುವಿನತ್ತ ಸಾಧಕನು ಬಂದನೆಂದು ಇಟ್ಟುಕೊಳ್ಳೋಣ. ಈ ಗುರುವು ಬೇರೊಂದು ಮಾರ್ಗವನ್ನು ತೋರಿಸಿ ಗುರಿಯತ್ತ ನಡೆಯಲು ಆಜ್ಞಾಪಿಸುತ್ತಾನೆ. ಸಾಧಕನು ತನ್ನ ಮೊದಲ ಯತ್ನವನ್ನು ಅಲ್ಲಿಗೇ ನಿಲ್ಲಿಸಿ ಈ ನೂತನ ಮಾರ್ಗದಲ್ಲಿ ನಡೆಯಲು ಆರಂಭಿಸುತ್ತಾನೆ. ಮತ್ತೊಬ್ಬ ಗುರುವು ಮತ್ತೊಂದು ಮಾರ್ಗವನ್ನು ತೋರಿಸಿದಲ್ಲಿ ಆತ್ತಲೂ ಹೋಗುತ್ತಾನೆ. ಇಂತಹ ವ್ಯಕ್ತಿಗಳು ಬಂದು ಸಂದರ್ಶನಕ್ಕಾಗಿ ಹಾತೊರೆದಾಗ ಗುರುವರ್ಯರು ಅವರನ್ನು ಅವರ ಗುರು ತೋರಿದ ಹಾದಿಯಲ್ಲಿಯೇ ಸಾಧನೆ ಮುಂದುವರೆಸುವಂತೆ ಪ್ರೇರಿಸುತ್ತಿದ್ದರು. ಈ ರೀತಿಯ ಮನೋದಾರ್ಢ್ಯವಿಲ್ಲದವರಿಗೆ ದರ್ಶನವನ್ನೇ ದಯಪಾಲಿಸುತ್ತಿರಲಿಲ್ಲ.

ಮತ್ತೆ ಕೆಲವರಿಗೆ ದರ್ಶನ ಕೊಡುವುದರಿಂದ ಯಾವ ಪ್ರಯೋಜನವೂ ಇಲ್ಲವೆಂದು ಅರಿತಿದ್ದ ಗುರುಗಳು ಭೇಟಿ ದೊರಕದೆಂದು ಹೇಳಿಕಳುಹಿಸಿ ಬಿಡುತ್ತಿದ್ದರು. ದೊಡ್ಡ ದೊಡ್ಡ ಅಧಿಕಾರದಲ್ಲಿರುವವರಿಗೂ ಇದೇ ಉತ್ತರ ದೊರೆಯುತ್ತಿತ್ತು. ಯಾರು ತಮ್ಮನ್ನು ತಾವು ತಿದ್ದಿಕೊಳ್ಳಲಾರರೋ ಅಂತಹವರಿಗೆ ಉಪದೇಶ, ಉಪನ್ಯಾಸವಿತ್ತು ಏನು ಪ್ರಯೋಜನ? ಕೆಲವರು ತಮ್ಮ ತಪ್ಪು ಅರಿವಾದಾಗ ತಿದ್ದಿಕೊಳ್ಳುತ್ತಾರೆ. ಮತ್ತೆ ಕೆಲವರು ತಮ್ಮದು ತಪ್ಪೆಂದು ತಿಳಿದಿದ್ದರೂ ಆ ಮಾರ್ಗದಲ್ಲಿಯೇ ಹೋಗುತ್ತಾರೆ. ತಮ್ಮದು ಅನಾಚಾರ, ಅಧರ್ಮವೆಂದು ತಿಳಿದೂ ಸಹ ಮತ್ತೆ ಮತ್ತೆ ಅದೇ ಮಾರ್ಗದಲ್ಲಿ ನಿಷ್ಕ್ರಮಿಸುತ್ತಾರೆ. ಇಂತಹವರಿಗೆ ದರ್ಶನ ಕೊಡುವುದರಿಂದ ಆಗುವ ಪ್ರಯೋಜನವೇನು? ಕೇವಲ ಸ್ಥಾನ, ಪದವಿ, ಅಧಿಕಾರ, ಐಶ್ವರ್ಯ, ಪ್ರತಿಷ್ಠೆಗಳಿಗೆ ಜೋತುಬಿದ್ದವರಿಗೆ ತೀರ್ಥಯಾತ್ರೆ

ದೇವತಾದರ್ಶನ ಮುಂತಾದವು ಬೂಟಾಟಿಕೆ ಯಲ್ಲವೇ? ತಮ್ಮ ಹೆಗ್ಗಳಿಕೆಯ ಪ್ರಚಾರಕ್ಕೆ ಇಂತಹ ಭೇಟಿಗಳು ಒಂದು ಮಾರ್ಗವೆಂದು ಅಂತಹವರು ಭಾವಿಸುತ್ತಾರಲ್ಲವೇ?

ದರ್ಶನ ನಿರಾಕರಿಸಲ್ಪಟ್ಟವರು ಹಲವರಾದರೆ ದರ್ಶನಲಾಭ ಪಡೆದವರೂ ಹಲವರಿದ್ದರು. ಭಾರತೀಯ ಹಾಗೂ ಪಾಶ್ಚಾತ್ಯ ತತ್ತ್ವಶಾಸ್ತ್ರಗಳಲ್ಲಿ ಅಧ್ಯಯನ ನಡೆಸಿದವರೂ, ವಿದ್ವತ್ತಿನ ಗಣಿಯೂ, ಎಲ್ಲರ ಮಾನ್ಯತೆಗೆ ಪಾತ್ರರಾದವರೂ ಆದ ಡಾ॥ ಸರ್ವಪಲ್ಲಿ ರಾಧಾಕೃಷ್ಣನ್‌ರವರು ತಾವು ಅಧ್ಯಯನ ಮಾಡಿದ್ದ ಪೌರ್ವಾತ್ಯ ದರ್ಶನಗಳಿಗೆ ಪ್ರತ್ಯಕ್ಷ ನಿದರ್ಶನವಾಗಿದ್ದ ಶ್ರೀ ಚಂದ್ರಶೇಖರ ಭಾರತೀ ಮಹಾಸ್ವಾಮಿಗಳವರ ದರ್ಶನಲಾಭ ಪಡೆದ ಪ್ರಮುಖರು. ಮತ್ತೊಬ್ಬರು ಭಾರತದ ರಾಷ್ಟ್ರಾಧ್ಯಕ್ಷರಾದ ಡಾ॥ ರಾಜೇಂದ್ರ ಪ್ರಸಾದರು. ನಾಡಿನ ಮಹೋನ್ನತ ಪದವಿಯಲ್ಲಿದ್ದರೂ, ನಿಗರ್ವಿಯಾಗಿದ್ದ, ಭಾರತೀಯ ಪರಂಪರೆಯಲ್ಲಿ, ಧರ್ಮದಲ್ಲಿ ಶ್ರದ್ಧೆ ನಂಬಿಕೆಗಳನ್ನು ಹೊಂದಿದ್ದ ಈ ಮಹನೀಯರೂ ಸಹ, ಶೃಂಗೇರಿಗೆ ಆಗಮಿಸಿ ಶ್ರೀಶಾರದಾದೇವಿಯ ಸನ್ನಿಧಿಯಲ್ಲಿ ತಪಶ್ಚಕ್ರವರ್ತಿಯೂ, ವಿಭೂತಿಪುರುಷರೂ, ಪರಮವಿರಾಗಿಯೂ ಆಗಿದ್ದ ಗುರುವರ್ಯರ ದರ್ಶನ ಪಡೆದರು. ಭಾರತದ ರಾಷ್ಟ್ರಾಧ್ಯಕ್ಷ, ಉಪರಾಷ್ಟ್ರಪತಿಗಳಿಬ್ಬರೂ ಶ್ರೀಗುರುದೇವರ ಅಗಾಧ ಪಾಂಡಿತ್ಯ, ಆಳವಾದ ಅನುಭವ, ಅಪರಿಮಿತವಾದ ಜ್ಞಾನ ಇವುಗಳನ್ನು ಕಂಡು ಹರ್ಷಸಂತೋಷಚಿತ್ತರಾದರು.

* * *



## ೩೯. ಮಹಾಪ್ರಸ್ಥಾನ

ರಾಷ್ಟ್ರಾಧ್ಯಕ್ಷರು ಬಂದು ತೆರಳಿದ ನಂತರ ಶ್ರೀಗುರುವರ್ಯರು ಮತ್ತೆ ಅಂತರ್ಮುಖಿಗಳಾಗಲಿಲ್ಲ. ಎಂದಿನಂತೆ ತಮ್ಮ ನಿತ್ಯಾನುಷ್ಠಾನ, ಪೂಜಾದಿಗಳಲ್ಲಿ ನಿರತರಾದರು. ಆ ಮೊದಲು ಆಷಾಢಮಾಸದ ವ್ಯಾಸ ಪೂರ್ಣಿಮೆಯಲ್ಲಿ ತಾವೇ ಚಾತುರ್ಮಾಸ್ಯ ವ್ರತಸಂಕಲ್ಪವನ್ನು ಕೈಗೊಂಡು ಭಕ್ತವೃಂದಕ್ಕೆ ಸಂತೋಷವನ್ನುಂಟುಮಾಡಿದ್ದರು. ಇದೇ ರೀತಿಯಲ್ಲಿ ನವರಾತ್ರಿಯ ಕಾಲದಲ್ಲಿಯೂ ಗುರುಗಳು ಬಹಿರ್ಮುಖರಾಗಿದ್ದರೆ ಅನೇಕ ಭಕ್ತರಿಗೆ ದರ್ಶನಲಾಭ ದೊರಕಬಹುದೆಂದೂ, ಆ ವರ್ಷದ ನವರಾತ್ರಿಯಲ್ಲಿ ಇಬ್ಬರು ಗುರುಗಳನ್ನೂ ಒಟ್ಟಿಗೆ ಕಾಣಬಹುದೆಂದೂ ಅನೇಕರು ಭಾವಿಸಿದ್ದರು. ಈ ಮಧ್ಯೆ ಇನ್ನೂ ಒಂದು ಸುದ್ದಿಯು ಜನಜನಿತವಾಗಿದ್ದಿತು.

ಕ್ರಿ.ಶ.೧೯೩೮ರಿಂದಾಚೆಗೆ ಗುರುವರ್ಯರು [ಮಹಾಸನ್ನಿಧಾನವಾಗಲೀ, ಸನ್ನಿಧಾನವಾಗಲೀ] ಎಲ್ಲೂ ಸಂಚಾರಕ್ಕೆ ಹೊರಟಿರಲಿಲ್ಲ. ದಕ್ಷಿಣದೇಶದಿಂದಲೂ, ಕೇರಳ, ಕರ್ನಾಟಕದ ಅನೇಕ ಕಡೆಗಳಿಂದಲೂ ಶಿಷ್ಯಮಂಡಳಿಯವರು ಗುರುಗಳ ಸಂಚಾರಕ್ಕಾಗಿ ಪದೇ ಪದೇ ಒತ್ತಾಯ ಮಾಡುತ್ತಲೇ ಇದ್ದರು. ನವರಾತ್ರಿಯ ನಂತರ ಗುರುಗಳಿಬ್ಬರೂ ಸಂಚಾರ ಹೊರಟು ಶ್ರೀಶಂಕರ ಭಗವತ್ಪಾದರ ಜನ್ಮಸ್ಥಳವಾದ ಕಾಲಟೀಕ್ಷೇತ್ರಕ್ಕೆ ಪ್ರಯಾಣ ಬೆಳಸಿ ಶ್ರೀಚಂದ್ರಶೇಖರ ಭಾರತೀಯವರು ಅಲ್ಲಿಯೇ ಉಳಿದುಕೊಳ್ಳುವರೆಂತಲೂ, ಶ್ರೀವಿದ್ಯಾತೀರ್ಥರು ದಕ್ಷಿಣದೇಶಕ್ಕೆ ಪ್ರಯಾಣ ಹೊರಡುವರೆಂತಲೂ ಸುದ್ದಿ ಹರಡಿತ್ತು. ಅದಕ್ಕೆ ಪೂರ್ವಭಾವಿಯಾಗಿ ಶ್ರೀಶ್ರೀಗಳವರು ಬಹಿರ್ಮುಖರಾಗಿ ಆ ವರ್ಷದ ಚಾತುರ್ಮಾಸ್ಯ ವ್ರತದೀಕ್ಷೆಯನ್ನು ಕೈಗೊಂಡುದೂ ಮತ್ತು ರಾಷ್ಟ್ರಾಧ್ಯಕ್ಷರಾದಿಯಾಗಿ ರಾಜಪ್ರಮುಖರಿಗೆ ದರ್ಶನವಿತ್ತುದೂ ಸಹ ಈ ಸುದ್ದಿಗೆ ಪುಷ್ಟಿ ನೀಡಿತ್ತು. ಗುರುಗಳು ಈ ಬಾರಿ ಸಂಚಾರ ಕೈಗೊಳ್ಳುವರೆಂದು ಎಲ್ಲರಲ್ಲೂ ನಂಬಿಕೆ ಮೂಡಿತ್ತು. ಅವರ ಚರ್ಯೆಗಳು ವಿಶ್ವಾಸವನ್ನು ಮೂಡಿಸಿದ್ದವು.

ಆ ವರ್ಷದ ನವರಾತ್ರಿ ಉತ್ಸವಕ್ಕೆ ವಿಶೇಷವಾದ ಏರ್ಪಾಟುಗಳು ನಡೆದವು. ಪ್ರತಿ ನವರಾತ್ರಿಯಲ್ಲೂ ಸಾಧಾರಣವಾಗಿ ಅಂತರ್ಮುಖರಾಗಿರುತ್ತಿದ್ದ ಗುರುಗಳು ಈ ಬಾರಿ ಬಹಿರ್ಮುಖರಾಗಿದ್ದುದರಿಂದ ಜನ ಅಧಿಕ ಸಂಖ್ಯೆಯಲ್ಲಿ ಬರುವ ನಿರೀಕ್ಷೆಯಿತ್ತು. ಎಲ್ಲೆಡೆಗಳಿಂದಲೂ ಆಗಮಿಸುವ ಭಕ್ತವೃಂದಕ್ಕೆ

ವಸತಿಸೌಕರ್ಯ, ಊಟೋಪಚಾರಗಳ ವ್ಯವಸ್ಥೆಗಳೆಲ್ಲವೂ ಮಾಡಲ್ಪಟ್ಟವು. ನವರಾತ್ರಿಯ ಕಾಲದಲ್ಲಿ ಆಗಬೇಕಾದ ಪೂಜಾದಿಗಳಿಗೆ ದಾನಧರ್ಮಗಳಿಗೆ ಅಗತ್ಯವಾದ ಪದಾರ್ಥಗಳು ರಾಶಿರಾಶಿಯಾಗಿ ಸಂಗ್ರಹಿಸಲ್ಪಟ್ಟವು. ಶೃಂಗೇರಿಯು ಚೈತನ್ಯಭರಿತವಾಗಿ ತುಂಬಿತುಳುಕುತ್ತಿತ್ತು.

ಪ್ರತಿದಿನವೂ ಗುರುದೇವರು ಪೂಜಾನುಷ್ಠಾನಗಳಲ್ಲಿ ನಿರತರಾಗಿರುತ್ತಿದ್ದರು. ಭಕ್ತಾದಿಗಳಿಗೆ ದರ್ಶನ ನೀಡುವುದು, ಯೋಗಕ್ಷೇಮ ವಿಚಾರಿಸುವುದು, ಶ್ರೀಶಾರದಾದೇವಿಯ ಮಂದಿರಕ್ಕೆ ದಯಮಾಡಿಸಿ ದರ್ಶನ ಪಡೆಯುವುದು, ತಮ್ಮ ಅನುಷ್ಠಾನಗಳನ್ನು ಕ್ರಮವಾಗಿ ನೆರವೇರಿಸುವುದು ಮುಂತಾದ ಕಾರ್ಯಗಳನ್ನೆಲ್ಲಾ ಯಾವ ಲೋಪವೂ ಇಲ್ಲದಂತೆ ನಡೆಸುತ್ತಿದ್ದರು. ಅವರ ನಡವಳಿಕೆ ಮಾತುಕತೆಗಳು ಅವರು ಶೀಘ್ರದಲ್ಲಿ ಅಂತರ್ಮುಖರಾಗಲಾರರೆಂಬ ನಂಬಿಕೆ ಮೂಡಿಸಿತ್ತು. ಎಂದಿನಂತೆ ಗುರುದರ್ಶನಕ್ಕೆ ಜನ ಬರುತ್ತಲೇ ಇದ್ದರು.

ಶ್ರೀ ಜಯ ಸಂವತ್ಸರದ ಭಾದ್ರಪದ ಬಹುಳ ಅಮಾವಾಸ್ಯೆಯಂದು [೨೪/೯/೧೯೫೪] ಬ್ರಾಹ್ಮೀ ಮುಹೂರ್ತಕ್ಕೆ ಮೊದಲೇ ಗುರುದೇವರು ಸ್ನಾನಕ್ಕಾಗಿ ತುಂಗಾನದಿಯತ್ತ ಹೊರಟರು. ಅವರನ್ನು ಅತ್ಯಂತ ಭಕ್ತಿಶ್ರದ್ಧೆಗಳಿಂದ ಸೇವಿಸುತ್ತಿದ್ದ ಮಹಾಬಲ ಭಟ್ಟರೆಂಬುವರು ನಮ್ರರಾಗಿ "ಸ್ನಾನಕ್ಕೆ ಬಿಸಿನೀರು ಸಿದ್ಧವಾಗಿದೆ. ಹೀಗೆ ದಯಮಾಡಿಸಬೇಕು" ಎಂದು ನಿವೇದಿಸಿದರು. ಆದರೆ ಗುರುಗಳು "ನದಿಯಲ್ಲಿಯೇ ಸ್ನಾನ ಮಾಡುವೆವು" ಎಂದು ನುಡಿದು ನೃಸಿಂಹವನದ ತಮ್ಮ ವಾಸಸ್ಥಳದಿಂದ ತುಂಗಾನದಿಯತ್ತ ದಡದಡನೆ ಧಾವಿಸಿದರು. ಆಗ ಮಳೆಗಾಲವಾಗಿದ್ದು ತುಂಗೆಯು ತುಂಬಿ ಹರಿಯುತ್ತಿದ್ದಳು. ಎರಡು ದಡಗಳನ್ನು ಮೀರಿ ಪ್ರವಹಿಸಿದ್ದ ತುಂಗೆ ವರ್ಷಾಕಾಲದಲ್ಲಿ ಗಂಗೆಯಾಗಿ ನೋಡುವವರಿಗೆ ರುದ್ರರಮಣೀಯಳಾಗಿ ತೋರುತ್ತಿದ್ದಳು. ಸಾಮಾನ್ಯ ದಿನಗಳಲ್ಲಿ ಆಹ್ಲಾದಿನಿಯಾಗಿ, ಉಲ್ಲಾಸಿನಿಯಗಿ ಜುಳು ಜುಳು ಹರಿವ ತುಂಗೆ ವರ್ಷಋತುವಿನಲ್ಲಿ ವಿಶೇಷ ಜಲರಾಶಿಯಿಂದ ಕೂಡಿ, ಆಷಾಢದ ಮುಗಿಲ ಆರ್ಭಟವನ್ನೆಲ್ಲಾ ತಾನೇ ಪಡೆದು ಸಾಗರಗಾಮಿಯಗಿ ಭೋರ್ಗರೆಯುತ್ತಿದ್ದಳು ಎಂದು ಯಾರಿಗಾದರೂ ಕಂಡೊಡನೆಯೇ ವೇದ್ಯವಾಗುತ್ತಿತ್ತು. ಆ ಅಸಾಧ್ಯ ಜಲರಾಶಿ, ಮಹಾಪ್ರವಾಹ, ಹದವನ್ನು ಮೀರಿ ಹರಿಯುವ ಆ ಮಹಾನದಿಯನ್ನು ಕಂಡವರಿಗೆ ಏಕಕಾಲದಲ್ಲಿ ಭೀತಿಗೌರವಗಳು ಮೂಡುತ್ತಿದ್ದವು, ಇಂತಹ ಮಹಾಪ್ರವಾಹ ಕಾಲದಲ್ಲಿ ಶ್ರೀಚಂದ್ರಶೇಖರ ಭಾರತಿಯವರು ತುಂಗಾಸ್ನಾನಕ್ಕಾಗಿ ಆಗಮಿಸಿ ಸಂಧ್ಯಾಮಂಟಪದಲ್ಲಿ ಬಂದು ನಿಂತರು.

ಹಿಂದೆ ಹಿಂದೆಯೇ ಮಡಿವಸ್ತ್ರಗಳನ್ನು ತೆಗೆದುಕೊಂಡು ಮಹಾಬಲಭಟ್ಟರೂ



ಓಡಿಬಂದರು. ಗುರುವರ್ಯರು ತುಂಬಿ ಹರಿಯುತ್ತಿದ್ದ ತುಂಗೆಯನ್ನೊಮ್ಮೆ ತುಂಬು ಭಾವನೆಯಿಂದ ನೋಡಿದರು. ಹಾಗೆಯೇ ಶ್ರೀಚಕ್ರದಲ್ಲಿ ವಿರಾಜಮಾನಳಾಗಿದ್ದ ಶಾರದೆಯ ಆಲಯವನ್ನೊಮ್ಮೆ ನೋಡಿ ಬಳಿಕ ನೀರಿನಲ್ಲಿಳಿದರು. ಸ್ನಾನಕ್ಕಾಗಿ ಸಂಕಲ್ಪಮಾಡಿ ಪೂರ್ವಾಭಿಮುಖವಾಗಿ ನಿಂದು, ಪೂರಕ ಕುಂಭಕ ಕ್ರಮದಿಂದ ಪ್ರಾಣಾಯಾಮ ಮಾಡಿ ಶ್ವಾಸಬಂಧ ಮಾಡಿದರು. ಕೆಲಕಾಲ ನಿಶ್ಚಲವಾಗಿ ಜಲರಾಶಿಯ ನಡುವೆ ಸ್ಥಾಣುವಿನಂತೆ ನಿಂತ ಗುರುದೇವರು ಪಂಚಪ್ರಾಣಗಳನ್ನೂ ನಿಶ್ಚಲಮಾಡಿ ಬ್ರಹ್ಮರಂಧ್ರದ ಮೂಲಕ ಹೊರಹೊರಡಿಸಿದರು. ಮಹಾಸ್ವಾಮಿಗಳಲ್ಲಿದ್ದ ತೇಜಸ್ಸು ವಿಶ್ವವಿರಾಟನಲ್ಲಿ ಸೇರಿತು. ಆ ಚೇತನವು ವಿಶ್ವಚೇತನದಲ್ಲಿ ಒಂದಾದಾಗ, ಪಂಚಭೂತಾತ್ಮಕವಾದ ದೇಹವು ಮಗುವು ತಾಯ ತೊಡೆಯ ಮೇಲುರುಳುವಂತೆ ತುಂಗೆಯಲ್ಲುರುಳಿತು. ದಿಗ್ಭ್ರಾಂತರಾದ ಮಹಾಬಲಭಟ್ಟರು ಕೂಡಲೇ ನೀರಿಗೆ ಧುಮುಕಿದರು. ಅತ್ಯಂತ ವೇಗದಿಂದಲೂ, ರಭಸದಿಂದಲೂ ಹರಿಯುತ್ತಿದ್ದ ತುಂಗೆಯಲ್ಲಿ ಕಾತರ ಉದ್ವೇಗಗಳಿಂದ ಈಜಿದ ಭಟ್ಟರು ಮಹತ್ಪ್ರಯತ್ನದಿಂದ ಗುರುದೇವರ ಶರೀರವನ್ನು ಹಿಡಿದು, ಕಷ್ಟದಿಂದ ಒಂದೇ ಕೈಯಲ್ಲಿ ಈಜುತ್ತಾ ದಡದತ್ತ ಸಾಗಲು ಶ್ರಮಪಡುತ್ತಿದ್ದರು. ಆ ಸಮಯದಲ್ಲಿ ಅತ್ತ ಕಡೆಯ ಸೋಪಾನದಲ್ಲಿ ಸ್ನಾನಕ್ಕಾಗಿ ಬಂದಿದ್ದ ಕೇಶವಾಚಾರಿ, ಅಹೋಬಲ ಸೋಮಯಾಜಿ ಎಂಬುವವರು ಈ ದೃಶ್ಯವನ್ನು ಕಂಡು ತಾವೂ ನೀರಿಗೆ ಧುಮುಕಿದರು. ತಮ್ಮೆಲ್ಲ ಶಕ್ತಿಯನ್ನುಪಯೋಗಿಸಿ ಅತ್ಯಂತ ಧೈರ್ಯದಿಂದಲೂ, ಸಾಹಸದಿಂದಲೂ ಗುರುದೇವರ ಶರೀರವನ್ನೂ, ಮಹಾಬಲಭಟ್ಟರನ್ನೂ ದಡಕ್ಕೆ ತಂದರು. ಆಗ ಶ್ರೀವಿದ್ಯಾತೀರ್ಥರು ತುಂಗೆಯ ಉತ್ತರದಲ್ಲಿ ಚಂದ್ರಮೌಳೀಶ್ವರ ತೊಟ್ಟಿಯಲ್ಲಿದ್ದರು. ಒಡನೆಯೇ ಈ ವರ್ತಮಾನವನ್ನು ಸ್ನಾನಕ್ಕಾಗಿ ಹೊರಡುತ್ತಿದ್ದ ಶ್ರೀವಿದ್ಯಾತೀರ್ಥ ಸ್ವಾಮಿಗಳಿಗೆ ತಿಳಿಸಲು, ಅವರೂ ಓಡೋಡಿ ಬಂದರು. ಬಲು ಬೇಗ ಗುರುವರ್ಯರು ನಿರ್ಯಾಣ ಹೊಂದಿದ ವರ್ತಮಾನವು ರಾಷ್ಟ್ರಾದ್ಯಂತ ವ್ಯಾಪಿಸಿತು.[೧೬]

ತಮ್ಮ ಗುರುಗಳ ನಿರ್ಯಾಣದಿಂದ ಶ್ರೀವಿದ್ಯಾತೀರ್ಥ ಸ್ವಾಮಿಗಳು ಅತ್ಯಂತ ದುಃಖದಲ್ಲಿ ಮುಳುಗಿದರು. ಇಪ್ಪತ್ಮೂರು ವರ್ಷಗಳ ಕಾಲ ತಮಗೆ ಆಧ್ಯಾತ್ಮಿಕ ಮಾರ್ಗದರ್ಶನ ಮಾಡಿ, ಆಶ್ರಮೋಚಿತ ಧರ್ಮಗಳಲ್ಲಿ ಉಪದೇಶವಿತ್ತು

೧೬ ಸ್ವಾಮಿ ಶ್ರೀ ರಾಮತೀರ್ಥರೂ ಸಹ ಹೀಗೆಯೇ ಗಂಗಾಮಾತೆಯ ಮಡಿಲಲ್ಲಿ ದೀಪಾವಳಿಯ ಅಮಾವಾಸ್ಯೆಯಂದು ಶರೀರತ್ಯಾಗ ಮಾಡಿದ್ದರೆಂಬ ರೋಮಾಂಚಕ ಘಟನೆಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಮಠದ ಆಡಳಿತ ನಿರ್ವಹಣೆ, ವ್ಯವಹಾರಾದಿಗಳಲ್ಲಿ ತಿಳಿವಳಿಕೆಯಿತ್ತು, ತಮ್ಮ ಯೋಗಕ್ಷೇಮ, ಆಧ್ಯಾತ್ಮಿಕ ಅಭ್ಯುದಯದಲ್ಲಿ ಆಸಕ್ತರಾಗಿದ್ದು ಸದಾ ತಮ್ಮನ್ನು ಜೋಪಾನ ಮಾಡಿದ ಪ್ರಿಯರೂ, ಪೂಜ್ಯರೂ ಆದ ಶ್ರೀ ಚಂದ್ರಶೇಖರ ಭಾರತೀ ಸ್ವಾಮಿಗಳವರು ಇನ್ನಿಲ್ಲ! ಶ್ರೀ ವಿದ್ಯಾತೀರ್ಥರಿಗಿದು ತುಂಬಲಾರದ ನಷ್ಟ, ಅವರಿಗೆ ಭರಿಸಲಾರದ ದುಃಖವಾಯಿತು.

ಗುರುದೇವರ ಶರೀರವನ್ನು ದಡಕ್ಕೆ ತಂದೊಡನೆಯೇ ಪಂಡಿತರುಗಳೂ, ವೈದ್ಯರೂ ಓಡೋಡಿ ಬಂದರು. ಸ್ವಲ್ಪವಾದರೂ ಶ್ವಾಸೋಚ್ಛ್ವಾಸವಿದೆಯೇನೋ ಎಂಬ ಆಸೆಯಿಂದ, ಹೇಗಾದರೂ ಗುರುಗಳನ್ನು ಉಳಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯಿಂದ ಪರೀಕ್ಷೆ ನಡೆಸಿದರು. ಅವರ ಪ್ರಯತ್ನಗಳಾವುವೂ ಫಲಿಸಲಿಲ್ಲ. ಜಲಪ್ರವಾಹದಲ್ಲಿ ಸಿಲುಕಿದ್ದ ದೇಹವು ಪದ್ಮಾಸನಸ್ಥವಾಗಿಯೇ ಇದ್ದು ಎರಡು ಹಸ್ತಗಳೂ ಧ್ಯಾನಮುದ್ರೆಯನ್ನು ತೋರುತ್ತಿದ್ದುವೆಂದು ಈ ಅಪೂರ್ವ ದೃಶ್ಯವನ್ನು ಕಂಡ ಭಾಗ್ಯವಂತರು ಇಂದಿಗೂ ನುಡಿಯುತ್ತಾರೆ. ಅವರ ಶರೀರದಲ್ಲಿ ಮುಳುಗಿ ಮರಣಹೊಂದಿದ ಚಿಹ್ನೆಗಳಾಗಲೀ ಅಥವಾ ಆಕಸ್ಮಿಕವಾಗಿ ನೀರಿಗೆ ಬಿದ್ದವರು ಬದುಕಲು ಮಾಡುವ ಹೋರಾಟದ ಲಕ್ಷಣಗಳಾಗಲೀ ಕಂಡುಬಾರದ್ದನ್ನು ನೋಡಿದ ವೈದ್ಯರು ವಿಸ್ಮಿತರಾದರು. ಗುರುದೇವರು ಜೀವಿಸಿದ್ದಾಗ ಎಲ್ಲರನ್ನೂ ಹೇಗೆ ಆಶ್ಚರ್ಯಗೊಳಿಸಿದರೋ, ದೇಹತ್ಯಾಗ ಮಾಡಿದಾಗಲೂ ಹಾಗೆಯೇ ಎಲ್ಲರನ್ನೂ ಚಕಿತಗೊಳಿಸಿದ್ದರು. ಪಶ್ಚಿಮಾಂಬುಧಿಯಲ್ಲಿಳಿಯುವ ವೃದ್ಧಸೂರ್ಯನ ದಿವ್ಯ ತೇಜಸ್ಸಿನಿಂದ ಗುರುವರ್ಯರ ಮುಖವು ಪ್ರಕಾಶಿಸುತ್ತಿತ್ತು. ವಿಭೂತಿಪುರುಷರೂ, ಮಹಾತಪಸ್ವಿಗಳೂ ಆಗಿದ್ದ ಶ್ರೀ ಚಂದ್ರಶೇಖರ ಭಾರತಿಯವರು ದೇಹಬಂಧನವನ್ನು ಕಳಚಿಕೊಂಡು ವಿಶ್ವವ್ಯಾಪಿಯಾಗಿದ್ದರು. ಬೆಳಕು ತಾನು ಬಂದಲ್ಲಿಗೇ ಹಿಂದಿರುಗಿತ್ತು.

ಗುರುಗಳು ಭೀಷ್ಮರಂತೆ ಇಚ್ಛಾಮರಣಿಗಳಾಗಿದ್ದರು. ಮರಣ ಯಾರಿಗೆ? ಗುರುವರ್ಯರಿಗಂತೂ ಅಲ್ಲ. ಅವರು ಚಿರಾಯುಗಳಾಗಿದ್ದರು. ಪಂಚಭೂತಾತ್ಮಕವಾದ ದೇಹ ಎಂದಿದ್ದರೂ ಹೋಗಲೇಬೇಕಲ್ಲವೇ? ವಿಷ್ಣುವಿನ ಅವತಾರವೆಂದು ಪರಿಗಣಿಸಲ್ಪಡುವ ಶ್ರೀರಾಮನು ಸರಯೂ ನದಿಯಲ್ಲಿ ತನ್ನ ದೇಹತ್ಯಾಗ ಮಾಡಿದನು. ಗೀತಾಚಾರ್ಯನಾದ ಕೃಷ್ಣನೂ ವ್ಯಾಧನೊಬ್ಬನ ಬಾಣ ನಿಮಿತ್ತವಾಗಿ ದೇಹತ್ಯಾಗ ಮಾಡಿದನು. ಶ್ರೀ ಶಂಕರ ಭಗವತ್ಪಾದರು ಹಿಮವತ್ಪರ್ವತದಲ್ಲಿ ಅದೃಶ್ಯರಾದರು. ಶ್ರೀ ವಿದ್ಯಾಶಂಕರರೂ ಸಹ ಲಂಬಿಕಾಯೋಗ ನಿರತರಾಗಿ ಗುಹಾಪ್ರವೇಶ ಮಾಡಿದ್ದರು. ಮಹಾಪುರುಷರ ಜನನ, ಜೀವನದಂತೆಯೇ ಮರಣವೂ ಸಹ ಮಹತ್ವಪೂರ್ಣವಾಗಿಯೇ ಇರುತ್ತದಲ್ಲವೇ?



ಶ್ರೀವಿದ್ಯಾತೀರ್ಥ ಸ್ವಾಮಿಗಳ ದುಃಖಕ್ಕೆ ಪಾರವಿರಲಿಲ್ಲ. ಅವರು ದುಃಖದಿಂದ ಕುಂದಿದ್ದರೂ ಮುಂದಿನ ಕಾರ್ಯಗಳತ್ತ ಗಮನ ಕೊಡಬೇಕಾಗಿತ್ತು. ಅವರ ದುಃಖವು ಇತರರು ಸಮಾಧಾನಗೊಳಿಸುವುದರಿಂದ ಶಮನವಾಗುವ ದುಃಖವಾಗಿರಲಿಲ್ಲ. ಸುದ್ದಿ ತಲುಪಿದ ಕೂಡಲೇ ಹರಿಹರಪುರ ಮಠದ ಶ್ರೀಸ್ವಯಂಪ್ರಕಾಶ ಅಭಿನವ ರಾಮಾನಂದ ಸರಸ್ವತಿ ಸ್ವಾಮಿಯವರು ಶೃಂಗೇರಿಗೆ ಆಗಮಿಸಿದರು. ಸುತ್ತಮುತ್ತಲ ಊರಿನ ಜನಗಳೆಲ್ಲಾ ಸಿಕ್ಕಸಿಕ್ಕ ವಾಹನಗಳಲ್ಲಿ ಆ ಮಹಾಪುರುಷರ ಅಂತಿಮ ದರ್ಶನ ಪಡೆಯಲು ಶೃಂಗೇರಿಗೆ ಧಾವಿಸಿದರು. ಮಠದ ಸಂಪ್ರದಾಯದಂತೆ ಶ್ರೀಗಳವರ ಕಳೇಬರಕ್ಕೆ ನಡೆಯಬೇಕಾದ ಸಂಸ್ಕಾರಗಳೆಲ್ಲವೂ ಯಥಾವಿಧಿಯಾಗಿ ನಡೆದವು. ಯತಿಗಳು ಮುಕ್ತರಾದಾಗ ನೆತ್ತಿಯಲ್ಲಿರುವ ಬ್ರಹ್ಮರಂಧ್ರವನ್ನು ತೆರೆಯುವುದಕ್ಕಾಗಿ ಶಿರಸ್ಸಿನ ಮೇಲೆ ತೆಂಗಿನಕಾಯಿಗಳನ್ನೊಡೆಯುವುದು ವಾಡಿಕೆ. ಶ್ರೀಚಂದ್ರಶೇಖರ ಭಾರತಿಯವರ ಶಿರಸ್ಸಿನಲ್ಲಿ ಒಂದು ನಾರಿಕೇಳ ಫಲದ ಸ್ಪರ್ಶಕ್ಕೇ ಬ್ರಹ್ಮರಂಧ್ರವು ತೆರೆಯಲ್ಪಟ್ಟಿತು! ಅವರಿಗೆ ಅತ್ಯಂತ ಪೂಜ್ಯರೂ, ಪರಮಪ್ರಿಯರೂ ಆಗಿದ್ದ ಅವರ ಗುರುಗಳು ಶ್ರೀಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳವರ ಸಮಾಧಿಯ ಉತ್ತರ ಪಾರ್ಶ್ವದಲ್ಲೇ ಶ್ರೀಚಂದ್ರಶೇಖರ ಭಾರತಿಯವರ ಕಳೇಬರವೂ ಸಹ ಸಮಾಧಿ ಮಾಡಲ್ಪಟ್ಟಿತು.

ಯಾವುದಾದರೊಂದು ವಸ್ತುವು ನಮ್ಮ ಬಳಿಯಿರುವವರೆಗೆ ಅದರ ಬೆಲೆ ನಮಗೆ ತಿಳಿಯುವುದಿಲ್ಲ. ಅತಿ ಪರಿಚಯದ ಕಾರಣ ಆ ವಸ್ತುವನ್ನು ಒಂದು ವಿಧದ ಅನಾದರ, ಔದಾಸೀನ್ಯ, ಉಪೇಕ್ಷೆಗಳಿಂದ ನಾವು ಕಾಣುತ್ತೇವೆ. ಅದು ನಮ್ಮಲ್ಲಿ ಇರುವವರೆಗೆ ನಾವದನ್ನು ಗುರುತಿಸುವುದೇ ಇಲ್ಲ. ಅದರ ಮಹತ್ವವನ್ನೂ ಯೋಗ್ಯತೆಯನ್ನೂ ತಿಳಿದುಕೊಳ್ಳುವುದೇ ಇಲ್ಲ. ಆ ವಸ್ತುವು ಕಳೆದುಹೋದಾಗ ಅದರ ಮಹತ್ವ ನಮಗೆ ಅರಿವಾಗುತ್ತದೆ. ಆಗ ದಿಙ್ಮೂಢರಂತೆ ಅಯ್ಯೋ ಹೋಯಿತಲ್ಲಾ ಎಂದು ವ್ಯಥೆ ಪಡುತ್ತೇವೆ, ದುಃಖಿಸುತ್ತೇವೆ. ಆ ವಸ್ತುವಿನ ವಿಷಯದಲ್ಲಿ ನಾವು ನಡೆದುಕೊಂಡ ರೀತಿಗೆ ಪಶ್ಚಾತ್ತಾಪ ಪಡುತ್ತೇವೆ. ಆಗ ಎಂದರೆ ನಮ್ಮ ಕಣ್ಣು ತೆರೆದಾಗ ಅದರ ಗುಣಗಳು, ಸ್ವಭಾವ, ಮಹತ್ತು ಇವೆಲ್ಲಾ ಒಂದೊಂದಾಗಿ ನಮ್ಮ ದೃಷ್ಟಿಪಟಲದ ಮೇಲೆ ಸುಳಿದು ನಮಗೆ ನಿಜವಾಗಿಯೂ ನಷ್ಟವಾಯಿತೆಂದು ಖಿನ್ನರಾಗುತ್ತೇವೆ. ಇದು ನಿನ್ನೆ ಮೊನ್ನೆಯ ಕತೆಯಲ್ಲ. ಮಾನವ ಸಂತತಿ ಆರಂಭವಾದಾಗಿನಿಂದಲೂ ತಿಳಿದುಬಂದ ಅನುಭವ. ಶ್ರೀಚಂದ್ರಶೇಖರ ಭಾರತಿಯವರು ಜೀವಿಸಿದ್ದಾಗ ಅವರ ಹಿರಿಮೆಯನ್ನರಿತು ಅವರು ತೋರಿದ ಹಾದಿಯಲ್ಲಿ ನಡೆಯಬೇಕೆಂದು

ನಮಗನ್ನಿಸಲಿಲ್ಲ. ಅವರು ವಿದೇಹಮುಕ್ತರಾಗಿ ನಮ್ಮನ್ನು ಬಿಟ್ಟುಹೋದ ಬಳಿಕ ಒಂದೊಂದಾಗಿ ಅವರ ಹಿರಿಮೆಯ ಚಿತ್ರಗಳು ನಮ್ಮ ಮುಂದೆ ಸುಳಿಯುತ್ತವೆ. ಲೌಕಿಕ ಜೀವನಕ್ಕೆ ಅವರು ಕೊಡುತ್ತಿದ್ದ ಸಲಹೆಗಳು, ಹೃದಯ, ಮನಸ್ಸುಗಳ ವಿಕಾಸಕ್ಕೆ ಅಗತ್ಯವಾಗಿದ್ದ ಮಧುರತರವಾದ ಉಪದೇಶಗಳು, ಪಾರಮಾರ್ಥಿಕ ದೃಷ್ಟಿ ತಾನಾಗಿ ಉಂಟಾಗುವಂತೆ ಮಾಡುತ್ತಿದ್ದ ವಿಚಾರ ಪ್ರಚೋದಕವಾದ ಬೋಧನೆಗಳು ಒಂದೊಂದಾಗಿ ನಮ್ಮ ಕಣ್ಮುಂದೆ ಸುಳಿಯುತ್ತವೆ. ಅವರು ತೋರಿದ ಮಾರ್ಗದಲ್ಲಿ ನಡೆಯಲಿಲ್ಲವಲ್ಲಾ ಎಂದು ಮರುಗುತ್ತೇವೆ. ಕೊರಗುತ್ತೇವೆ. ಎಲ್ಲಾ ದೊಡ್ಡವರ ವಿಷಯದಲ್ಲೂ ನಾವು ನಡೆದುಕೊಂಡುದು, ನಡೆದುಕೊಳ್ಳುತ್ತಾ ಇರುವುದು ಹೀಗೆಯೇ ಅಲ್ಲವೆ?

ತಮ್ಮ ಎರಡನೆಯ ಸಂಚಾರ ಕಾಲದಲ್ಲಿ ಶ್ರೀಗುರುನಾಥರು ಬೆಂಗಳೂರಿನಲ್ಲಿ ಸ್ವಲ್ಪಕಾಲವಿದ್ದರೆಂದು ಹಿಂದೆ ಓದಿದೆವಲ್ಲವೆ? ಅಲ್ಲಿಂದ ಕಾಲಟೀಕ್ಷೇತ್ರಕ್ಕೆ ಪ್ರಯಾಣ ಮಾಡುವ ಮುನ್ನ ಎಲ್ಲರಿಗೂ ಫಲ ಮಂತ್ರಾಕ್ಷತೆಯನ್ನು ಅನುಗ್ರಹಿಸುತ್ತಿದ್ದರು. ವಯಸ್ಕರಾದ ಶಿಷ್ಯರೊಬ್ಬರು ಬಿಕ್ಕುತ್ತಿರುವುದನ್ನು ಕಂಡು ಗುರುಗಳು "ಏಕೆ ಅಳುತ್ತಿದ್ದೀರಿ?" ಎಂದು ಕೇಳಿದರು. "ಕಳೆದ ಎಂಟು ತಿಂಗಳುಗಳಿಂದಲೂ ನನಗೆ ಗುರುಗಳ ದರ್ಶನವಾಗುತ್ತಿತ್ತು. ಆಶೀರ್ವಾದವೂ, ಉಪದೇಶವೂ ದೊರಕುತ್ತಿದ್ದವು. ಇನ್ನುಮೇಲೆ ನನಗೆ ಗುರುದೇವರ ದರ್ಶನ ದೊರೆಯುವುದಿಲ್ಲ. ಮತ್ತೊಮ್ಮೆ ಅವರನ್ನು ಕಾಣುತ್ತೇನೆಯೋ ಇಲ್ಲವೋ" ಎಂದು ಕಣ್ಣೊರೆಸಿಕೊಂಡು ನುಡಿದರು ಆ ಶಿಷ್ಯರು. "ನಿಮಗೆ ಉಪದೇಶವಿತ್ತು ಅನುಗ್ರಹಿಸಿದ ಗುರುವಾರು?" ಮತ್ತೆ ಪ್ರಶ್ನಿಸಿದರು ಗುರುಗಳು. "ತಾವೇ ಮಹಾಸ್ವಾಮಿ" ನಮ್ರವಾಗಿ ನುಡಿದರು ಆತ. ಹಾಗಾದರೆ ನಾನು ನಿಮ್ಮ ಗುರುವಾಗಿದ್ದ ಪಕ್ಷದಲ್ಲಿ ಏನೂ ಪ್ರಯೋಜನವಾಗಲಿಲ್ಲ. ಈ ಎಂಟು ತಿಂಗಳಿನಿಂದಲೂ ನನ್ನ ಉಪದೇಶ ಪಡೆದು ನೀವು ಕಲಿತಿದ್ದು ಇಷ್ಟೇ ಆದರೆ ನನ್ನನ್ನು ಮರೆಯುವುದೇ ಲೇಸು" ಎಂದರು ಗುರುಗಳು. "ಅದೇಕೆ ಮಹಾಸ್ವಾಮಿ?" ಎಂದು ಶಿಷ್ಯರು ಕೇಳಲು "ಈ ದೇಹವನ್ನೇ ಗುರುವೆಂದು ನೀವು ಭಾವಿಸಿದಲ್ಲಿ ನನ್ನ ಉಪದೇಶವೆಲ್ಲಾ ವ್ಯರ್ಥ ತಾನೆ? ಇಂದು ಇದ್ದು ನಾಳೆ ಹೋಗುವ ಈ ದೇಹವಲ್ಲ ನಿಮ್ಮ ಗುರು. ಗುರು ನಿಮ್ಮೊಳಗೇ ಶಕ್ತಿಸ್ವರೂಪಿಯಾಗಿ ಇದ್ದಾನೆ" ಎಂದಿದ್ದರು ಗುರುಗಳು. ಅದರಂತೆ ಅವರ ಪಾಂಚಭೌತಿಕ ದೇಹ ನಮ್ಮಿಂದ ಕಣ್ಮರೆಯಾಯಿತು. ಆದರೆ ಅವರ ಮಹಾ ಆತ್ಮ ಎಲ್ಲೆಡೆಯೂ ವ್ಯಾಪಿಸಿ ವಿರಾಟ್‌ಮಯವಾಯಿತು.



ದೇಶಾದ್ಯಂತವೂ ಶೋಕಸಭೆ, ಸಂತಾಪ ಸಭೆಗಳಾದವು. ಸಭೆಗಳಲ್ಲಿ ಅವರ ಅಗಾಧಪಾಂಡಿತ್ಯ, ನಡೆನುಡಿಗಳು, ಸಚ್ಚಾರಿತ್ರ್ಯ, ದಿವ್ಯಾನುಭವ, ಹೃದಯವೈಶಾಲ್ಯ ಮುಂತಾಗಿ ಗುಣಗಾನಗಳಾದವು. ಬ್ರಾಹ್ಮಣ, ಬ್ರಾಹ್ಮಣೇತರ, ಹಿಂದು, ಮುಸಲ್ಮಾನರು, ಕ್ರೈಸ್ತರು ಎಲ್ಲರೂ ಅನುತಾಪವನ್ನೂ, ದುಃಖವನ್ನೂ ವ್ಯಕ್ತಪಡಿಸಿದರು. ಶ್ರದ್ಧಾಂಜಲಿಯನ್ನರ್ಪಿಸಿದರು. ಅನೇಕ ಕಡೆಗಳಲ್ಲಿ ಗುರುವರ್ಯರ ಆರಾಧನೆಗಳು ನಡೆದವು. ರಾಷ್ಟ್ರಾಧ್ಯಕ್ಷರೂ, ಉಪರಾಷ್ಟ್ರಾಧ್ಯಕ್ಷರೂ, ರಾಜಮಹಾರಾಜರುಗಳೂ ಎಲ್ಲರೂ ತಮ್ಮ ಭಕ್ತಿ ಗೌರವಗಳನ್ನು ಅರ್ಪಿಸಿದರು.

* * *

## ೪೦. ಸಿಂಹಾವಲೋಕನ

ಶ್ರೀಶಂಕರ ಭಗವತ್ಪಾದರು ಸ್ಥಾಪಿಸಿದ ದಕ್ಷಿಣಾಮ್ನಾಯ ಪೀಠದಲ್ಲಿ ಬೆಳಗಿದ ಮಹಾತಪಸ್ವಿಗಳ ಪರಂಪರೆಯಲ್ಲಿ ಶ್ರೀಚಂದ್ರಶೇಖರ ಭಾರತಿಯವರು ಮೂವತ್ನಾಲ್ಕನೆಯವರು. ಅವರ ಜೀವನ ಮತ್ತು ಅಂತ್ಯ ಎಲ್ಲವೂ ವೈಶಿಷ್ಟ್ಯ ಪೂರ್ಣವಾಗಿಯೂ ವಿಸ್ಮಯಕಾರಕವಾಗಿಯೂ ಇದ್ದವು. ಅಖಿಲ ಭಾರತ ವ್ಯಾಪ್ತಿಯುಳ್ಳ ಒಂದು ಮಠದ ಅಧ್ಯಕ್ಷರಾಗಿ ಸಂಪ್ರದಾಯಗಳು, ನೀತಿನಿಯಮಗಳು, ಪರಂಪರಾಗತ ಕಟ್ಟುಪಾಡುಗಳು ಇತ್ಯಾದಿಗಳ ಬಂಧನಕ್ಕೆ ಸಿಲುಕಿದ್ದರೂ ಸಹ ಇವೆಲ್ಲವುಗಳ ಮಧ್ಯೆ ಸ್ಥಿತಪ್ರಜ್ಞರಂತೆ, ನಿರ್ಲಿಪ್ತರಾಗಿಯೇ ಇದ್ದರು. ತಾವರೆ ಎಲೆಯ ಮೇಲಿನ ನೀರಿನ ಬಿಂದುವಿನಂತೆ ಸರ್ವಸ್ವವನ್ನೂ ತ್ಯಾಗಮಾಡಿ, ಸಂನ್ಯಾಸಿಯಾಗಿ, ಪರಿವ್ರಾಜಕನಾಗಿ ವೈರಾಗ್ಯಮಾರ್ಗದಲ್ಲಿ ಇರಬೇಕಾದವರಿಗೆ ಒಂದು ದೊಡ್ಡ ಮಠದ ಆಡಳಿತ, ವ್ಯವಸ್ಥೆ ಮುಂತಾದವು ಗಂಟುಬಿದ್ದವು. ಬ್ರಹ್ಮ ಚಿಂತನೆ, ತಪೋನುಷ್ಠಾನ, ಜ್ಞಾನಪ್ರಸಾರ ಇತ್ಯಾದಿ ಧರ್ಮೋದ್ಧಾರ ಕಾರ್ಯವೆಲ್ಲಿ? ಆಡಳಿತ ವ್ಯವಸ್ಥೆ, ಆಸ್ತಿಪಾಸ್ತಿಗಳ ವ್ಯವಹಾರ, ಖರ್ಚುವೆಚ್ಚಗಳ ಲೆಕ್ಕಾಚಾರ ಮುಂತಾದ ಈ ಲೌಕಿಕ ವ್ಯಾಪಾರವೆಲ್ಲಿ? ಮಹಾಜ್ಞಾನಿಗಳೂ, ತಪೋನಿಧಿಯೂ ಆಗಿದ್ದ ಶ್ರೀಚಂದ್ರಶೇಖರ ಭಾರತಿಯವರು ಇಂತಹ ವ್ಯಾವಹಾರಿಕ ವಿಷಯಗಳಲ್ಲಿ ನಿರಾಸಕ್ತರಾಗಿಯೇ ಇದ್ದರು. ಎಲ್ಲಾ ಲೌಕಿಕ ವ್ಯವಹಾರವನ್ನೂ ದಕ್ಷತೆಯಿಂದ ನಿರ್ವಹಿಸಲು ಸರ್ಕಾರದ ಅಧಿಕಾರಿಯೊಬ್ಬರನ್ನು ನೇಮಿಸಿಕೊಳ್ಳುವ ವ್ಯವಸ್ಥೆ ಇವರ ಕಾಲದಲ್ಲಿಯೇ ಪ್ರಪ್ರಥಮವಾಗಿ ಜಾರಿಗೆ ಬಂದಿತು. ಆಡಳಿತ, ಖರ್ಚುವೆಚ್ಚ ಮುಂತಾದ ವ್ಯವಹಾರಗಳು ಅದರಲ್ಲೂ ಮಠ, ದೇವಾಲಯಗಳಿಗೆ ಸಂಬಂಧಿಸಿದುವು ಮನಸ್ಸಿಗೆ ತೃಪ್ತಿ ಸಮಾಧಾನಗಳನ್ನು ಕೊಡುವುದಕ್ಕಿಂತ ಇರುವ ಅಲ್ಪಸ್ವಲ್ಪ ಶಾಂತಿಸಂತೋಷವನ್ನೂ ಕಳೆಯತಕ್ಕವು. ವ್ಯವಹಾರ ಜಗತ್ತಿನಲ್ಲಿ ಅವರು ತಳೆದಿದ್ದ ನಿರಾಸಕ್ತಿಯು ಸ್ವಾಭಾವಿಕವಾಗಿ ಬಂದುದಾಗಿತ್ತಲ್ಲದೇ ಅದನ್ನು ನಿರ್ವಹಿಸುವ ಶಕ್ತಿ ಸಾಮರ್ಥ್ಯಗಳ ಕೊರತೆಯಿಂದಲ್ಲ.

ಅನೇಕ ಶಿಷ್ಯರೂ, ಭಕ್ತರೂ ಗುರುಗಳ ದರ್ಶನಕ್ಕಾಗಿ ಬರುತ್ತಿದ್ದರು. ಇವರಲ್ಲಿ ಎಲ್ಲ ಜಾತಿಯ, ಎಲ್ಲ ರೀತಿಯ ಜನರೂ ಇರುತ್ತಿದ್ದರು. ಭಯಭೀತಿಗಳ



ನಾಶಕ್ಕಾಗಿ, ರೋಗರುಜಿನಗಳ ನಿವಾರಣೆಗಾಗಿ, ಕಷ್ಟನಷ್ಟಗಳ ಪರಿಹಾರಕ್ಕಾಗಿ ಬರುತ್ತಿದ್ದ ಜನ ಅನೇಕರು. ಗುರುವರ್ಯರು ದುಃಖಿಗಳಿಗೂ, ಆರ್ತಿಗಳಿಗೂ ಪರಮಮಿತ್ರರಾಗಿದ್ದರು. ಕೆಲವು ಸಂದರ್ಭಗಳಲ್ಲಿ–ಅವು ಅನಿವಾರ್ಯ ವಾಗಿದ್ದಾಗ ಮಾತ್ರ– ತಮ್ಮ ಯೋಗಶಕ್ತಿಯಿಂದಲೂ, ಮಂತ್ರಶಕ್ತಿಯಿಂದಲೂ ಅನೇಕ ಲೀಲೆಗಳನ್ನು ನಡೆಸುತ್ತಿದ್ದರು. ಭೂತ ಭವಿಷ್ಯತ್ತನ್ನು ಕ್ಷಣಮಾತ್ರದಲ್ಲಿ ಅರಿಯುವ ಶಕ್ತಿಯುಳ್ಳವರಾಗಿದ್ದ ಅವರು ಕೆಲಸಂದರ್ಭಗಳಲ್ಲಿ ಅದನ್ನು ಪ್ರಕಾಶಪಡಿಸುತ್ತಲೂ ಇದ್ದರು. ನೇಪಾಳದ ರಾಜ ತ್ರಿಭುವನರು ಸಿಂಹಾಸನಚ್ಯುತರಾಗಿ ಭಾರತಕ್ಕೆ ಓಡಿಬಂದಿದ್ದ ಸಮಯದಲ್ಲಿ ಶ್ರೀಗುರುದೇವರು ರಾಜಾ ತ್ರಿಭುವನರಿಗೆ ಶ್ರೀಮುಖವೊಂದನ್ನು ಕಳುಹಿಸಿ ಶ್ರೀಪಶುಪತಿನಾಥ, ಶ್ರೀಶಾರದಾದೇವಿಯ ಅನುಗ್ರಹದಿಂದ ರಾಜ್ಯವನ್ನು ಮತ್ತೆ ಗಳಿಸುತ್ತಾರೆಂದು ಆಶೀರ್ವದಿಸಿದ್ದರು. ಹಾಗೆಯೇ ರಾಜಾ ತ್ರಿಭುವನರು ತಮ್ಮ ರಾಜ್ಯವನ್ನು ಮತ್ತೆ ಗಳಿಸಿಕೊಂಡರು.

ಒಮ್ಮೆ ಹಲವಾರು ಅಧಿಕಾರಿಗಳು ಶ್ರೀಗಳವರ ದರ್ಶನಕ್ಕೆ ಬಂದಿದ್ದಾಗ ಮಾತನಾಡುತ್ತಿದ್ದಂತೆಯೇ ಕೆಲಕಾಲ ಮೌನವಾಗಿದ್ದ ಗುರುಗಳು "ಪಾಪ, ಕೇರಳದಲ್ಲಿ ಮಳೆಯ ದೆಸೆಯಿಂದ ಎಷ್ಟೊಂದು ಅನಾಹುತವಾಗಿಬಿಟ್ಟಿದೆ. ಎಷ್ಟೊಂದು ಗುಡಿಸಲುಗಳು ಪ್ರವಾಹದಲ್ಲಿ ಕೊಚ್ಚಿಹೋಗುತ್ತಿವೆ. ಎಷ್ಟೊಂದು ಜನ ಅನಾಥರಾಗುತ್ತಿದ್ದಾರೆ" ಎಂದು ನುಡಿದರು. ಹತ್ತಿರವಿದ್ದವರಿಗೆ ಇದೇನೆಂದು ಅರ್ಥವಾಗಲಿಲ್ಲ. ಆದರೆ ಮರುದಿನ ಬಂದ ವರ್ತಮಾನ ಪತ್ರಿಕೆಯಲ್ಲಿ ಕೇರಳದಲ್ಲಿ ಹಿಂದಿನ ದಿನ ನಡೆದ ಮಳೆ, ಪ್ರವಾಹಗಳ ಹಾವಳಿಯ ಕತೆ! ಇಂತಹ ಅನೇಕ ನಿದರ್ಶನಗಳಿವೆ.

ಅನೇಕರು ತಮ್ಮ ಕಷ್ಟನಷ್ಟ, ದುಃಖ,ದಾರಿದ್ರ್ಯ, ರೋಗರುಜಿನ ಮುಂತಾದ ಅಡ್ಡಿ ಅಡಚಣೆಗಳಿಗೆ ಪರಿಹಾರವನ್ನು ಬೇಡಿ ಗುರುವರ್ಯರನ್ನು ಆಶ್ರಯಿಸುತ್ತಿದ್ದರು. ಕರುಣಾಮೂರ್ತಿಯಾದ ಗುರುದೇವರು ಅಂತಹವರಿಗೆಲ್ಲ ಸೂಕ್ತ ಸಹಾಯ ಭರವಸೆಗಳನ್ನು ನೀಡುತ್ತಿದ್ದರು. ಪ್ರಸಾದವನ್ನು ಕರುಣಿಸುತ್ತಿದ್ದರು. ಅವರಲ್ಲಿ ಶರಣಾಗತರಾಗಿ ಬಂದವರು ತಮ್ಮ ದುಃಖ, ಕಾರ್ಪಣ್ಯ, ರೋಗರುಜಿನಗಳಿಂದ ಮುಕ್ತರಾಗಿ ಪುನರ್ಜನ್ಮ ಪಡೆದುಕೊಂಡು ಶ್ರದ್ಧಾವಂತರಾಗಿ ಹಿಂತಿರುಗುತ್ತಿದ್ದರು.

ಹೀಗೆ ತಮ್ಮ ಲೌಕಿಕ ಕಷ್ಟಗಳಿಗೆ ಪರಿಹಾರ ದೊರಕಿಸಿಕೊಂಡ ಜನ ಗುರುಗಳಲ್ಲಿ ಅನನ್ಯ ಭಕ್ತಿಯನ್ನೂ ಪೂಜ್ಯತೆಯನ್ನೂ ಹೊಂದಿದ್ದವರೇ ಆಗಿದ್ದರು. ಧಾರ್ಮಿಕ ವಿಷಯಗಳಲ್ಲಿ ಸ್ವಲ್ಪವೂ ನಂಬಿಕೆಯಿರದ ಕೇವಲ ಪ್ರಾಪಂಚಿಕ

ದೃಷ್ಟಿಯುಳ್ಳವರು, ನಾಸ್ತಿಕರು ಗುರುವರ್ಯರಲ್ಲಿ ಬಂದಾಗ ಅವರ ದೃಷ್ಟಿಮಾತ್ರದಿಂದಲೇ ಪರವಶರಾಗಿ ಅವರಲ್ಲಿ ಗೌರವವನ್ನೂ, ಪೂಜ್ಯತೆಯನ್ನೂ ತಾಳುತ್ತಿದ್ದರು. ಒಂದೆರಡು ಮಾತುಗಳಿಂದ, ಕರಗಳ ಸಂಜ್ಞೆಯಿಂದ ಅಂತಹವರಲ್ಲಿ ವಿಶೇಷ ಬದಲಾವಣೆಯಾಗಿ ಅವರು ಗುರುದೇವರ ಅನುಗ್ರಹವನ್ನೂ, ಆಶೀರ್ವಾದವನ್ನೂ ಪ್ರಾರ್ಥಿಸುತ್ತಿದ್ದರು. ಧಾರ್ಮಿಕ ವಿಷಯಗಳಲ್ಲಿಯೂ, ಸನಾತನ ತತ್ತ್ವಗಳಲ್ಲಿಯೂ ಶ್ರದ್ಧೆ ನಂಬಿಕೆಗಳನ್ನು ಗಳಿಸಿಕೊಂಡು ತಮ್ಮ ತಮ್ಮ ಸಾಧನೆಯಲ್ಲಿ ಮುಂದುವರೆಯಲು ಶಕ್ತಿ ಉತ್ಸಾಹವನ್ನು ಪಡೆಯುತ್ತಿದ್ದರು.

ಗುರುದೇವರು ಅನೇಕರ ಲೌಕಿಕ ದುಃಖಸಂಕಷ್ಟಗಳನ್ನೂ, ಆಧ್ಯಾತ್ಮಿಕ ಸಂದೇಹ ಸಂಶಯಗಳನ್ನೂ ನಿವೃತ್ತಿ ಮಾಡುತ್ತಿದ್ದರು. ಕೆಲವೊಮ್ಮೆ ಅವರು ನಡೆಸುತ್ತಿದ್ದ ಪವಾಡಗಳಿಂದ ಆಕರ್ಷಿತರಾಗಿ ಜನ ಅವರಲ್ಲಿಗೆ ಬರುತ್ತಿದ್ದರು. ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ನಡೆಯುತ್ತಿದ್ದ ಇಂತಹ ಅಸಾಧಾರಣ ಲೀಲೆಗಳು ಕ್ರಮೇಣ ಬಲು ಕಡಿಮೆಯಾಗಿದ್ದವು. ಗುರುಗಳು ಹೆಚ್ಚು ಹೆಚ್ಚಾಗಿ ಅಂತರ್ಮುಖಿಗಳಾಗುತ್ತಿದ್ದುದು ಇದಕ್ಕೆ ಕಾರಣವಾಗಿತ್ತು. ಜನವೂ ತಮ್ಮಲ್ಲಿ ಅಡಗಿರುವ ಶಕ್ತಿಯನ್ನರಿತುಕೊಂಡು ಧೈರ್ಯ, ಸಾಹಸಗಳಿಂದ ಜೀವನವನ್ನು ಎದುರಿಸಬೇಕೆಂದು ಗುರುಗಳು ಹೇಳುತ್ತಿದ್ದರು.

ಅವರಲ್ಲಿ ನಿಜವಾದ ಜ್ಞಾನವನ್ನು ಅರಿಯುವ ಆಸಕ್ತಿಯಿಂದ ಬಂದವರೂ, ಆತ್ಮಸಾಧನೆಯ ಮಾರ್ಗದಲ್ಲಿನ ವಿಘ್ನಗಳ ಪರಿಹಾರಕ್ಕಾಗಿ ಬಂದವರೂ ಹಲವರಿದ್ದರು. ಹಾಗೆ ಬಂದವರಿಗೆ ಯಾವಾಗಲೂ ಮೋಕ್ಷದ್ವಾರವು ತೆರೆದೇ ಇರುತ್ತಿತ್ತು. "ಇತ್ತೀಚೆಗೆ ತಮ್ಮ ದರ್ಶನವೇ ದೊರಕದೇ ಶಿಷ್ಯರೆಲ್ಲರೂ ನಿರಾಶರಾಗಿದ್ದಾರೆ" ಎಂದು ಭಕ್ತರೊಬ್ಬರು ಬಿನ್ನವಿಸಲಾಗಿ, "ನನ್ನನ್ನು ಕಾಣಲು ಬರುವವರಿಗೆ ನಾವೊಬ್ಬ ವೈದ್ಯರೋ, ಮಾಂತ್ರಿಕರೋ ಆಗಿರಬೇಕೆಂಬ ಭಾವನೆಯೇ ತುಂಬಿರುತ್ತದೆ. ಶ್ರೀಶಂಕರ ಭಗವತ್ಪಾದರು ಈ ಪೀಠ ಸ್ಥಾಪನೆ ಮಾಡಿದುದು ಆ ಕಾರಣಕ್ಕಾಗಿಯೇನು?" ಎಂದು ಮರುನುಡಿದಿದ್ದರು. "ಆಧ್ಯಾತ್ಮಿಕ ವಿಷಯಗಳಲ್ಲಿ ತಮ್ಮಿಂದ ಮಾರ್ಗದರ್ಶನ ಬಯಸಿ ಬಂದವರಿಗೂ ಹೀಗೆಯೇ ತಮ್ಮ ದರ್ಶನ ಲಭ್ಯವಾಗದೇ ಅಪಾರ ನಷ್ಟವಾಗುತ್ತಿದೆ" ಎಂದು ಶಿಷ್ಯರು ಅರಿಕೆ ಮಾಡಿದಾಗ "ಹಾಗೆ ನಿಜವಾಗಿಯೂ, ಪ್ರಾಮಾಣಿಕವಾಗಿ ಬಂದವರು ಹೇಗಾದರೂ ನಮ್ಮನ್ನು ಕಂಡೇ ಕಾಣುತ್ತಾರೆ. ಅಗತ್ಯವಾದ ಮಾರ್ಗದರ್ಶನವನ್ನು ಪಡೆಯುತ್ತಾರೆ" ಎಂದು ಗುರುವರ್ಯರು ಮರು ನುಡಿದುದನ್ನು ನಾವು ಹಿಂದೆಯೇ ಓದಿದ್ದೇವೆ.

ಆಷಾಢಭೂತಿಗಳಿಗೂ, ಡಾಂಭಿಕರಿಗೂ, ಚೂಪುಗಾರರಿಗೂ ಅವರಲ್ಲಿ ಬರುವ



ಅವಕಾಶವೇ ದೊರೆಯುತ್ತಿರಲಿಲ್ಲ. ಇನ್ನು ಅವರಲ್ಲಿ ನಿಜವಾಗಿ ಮಾರ್ಗದರ್ಶನ ಬಯಸಿದವರು ಅವರನ್ನು ಹುಡುಕಿಕೊಂಡು ಬರಬೇಕಾಗಿಯೂ ಇರಲಿಲ್ಲ. ಮನಸಾ ಸ್ಮರಿಸಿದರೆ ಅಂತಹವರಿಗೆ ಗುರುಗಳೇ ಅಂತಃಪ್ರೇರಣೆಯ ಮೂಲಕ ಆಧ್ಯಾತ್ಮಿಕ ಸ್ಫೂರ್ತಿಯನ್ನು ನೀಡುತ್ತಿದ್ದರು. ಇಂದಿಗೂ ಶ್ರೀಚಂದ್ರಶೇಖರ ಭಾರತಿಯವರನ್ನು ಧ್ಯಾನಿಸುವುದರ ಮೂಲಕ ಜೀವನದಲ್ಲಿ ಶ್ರದ್ಧೆ ನಂಬಿಕೆಗಳನ್ನು ಗಳಿಸಿಕೊಂಡು ಅನೇಕರು ಆತ್ಮಸಾಧನೆಯಲ್ಲಿ ಮುಂದುವರೆಯುತ್ತಿದ್ದಾರೆ. ಗುರುದೇವರೇ ಎಂ.ಎಸ್ ಮಂತ್ರೇಶ್ವರಶರ್ಮರೆಂಬ ಭಕ್ತರಿಗೆ ಅಪ್ಪಣೆ ಕೊಡಿಸಿದಂತೆ "ನೀವು ಇನ್ನೊಮ್ಮೆ ಶೃಂಗೇರಿಗೆ ಬರುವ ಮೊದಲು ನಾವು ಈ ನಶ್ವರವಾದ ಶರೀರಬಂಧನದಿಂದ ಮುಕ್ತರಾಗಿದ್ದಲ್ಲಿ ನೀವು ನಮ್ಮನ್ನು ಸ್ಮರಿಸಿದರೆ ಸಾಕು, ನಾವು ನಿಮ್ಮಲ್ಲಿಯೇ ಇರುವೆವು" ಎಂಬ ಗುರುವಾಣಿಯಂತೆ ಅನೇಕ ಜನರು ಅಂತಃಪ್ರೇರಣೆಯ ಮೂಲಕ ಇಂದಿಗೂ ಅವರ ಮಾರ್ಗದರ್ಶನ ಪಡೆಯುತ್ತಾ ಅಭ್ಯುದಯ ಹೊಂದುತ್ತಿದ್ದಾರೆ.

* * *

# ೪೧. ಮಹಾಬೋಧಕ

ಈ ಹಿಂದಿನ ಅಧ್ಯಾಯಗಳಲ್ಲಿ ಗುರುದೇವರ ಉಪದೇಶಗಳೇನೆಂಬುದನ್ನು ಓದಿದ್ದೇವೆ. ಈಗ ಮತ್ತೊಮ್ಮೆ ಅವುಗಳನ್ನೆಲ್ಲಾ ಮನನ ಮಾಡೋಣ.

ಅದ್ವೈತಮತದ ಆಚಾರ್ಯರಾಗಿದ್ದ ಶ್ರೀಚಂದ್ರಶೇಖರ ಭಾರತಿಯವರು ನೇಮನಿಷ್ಠೆಗಳಿಗೂ, ಆಚಾರ ವಿಚಾರಗಳಿಗೂ ಬಹಳ ಪ್ರಸಿದ್ಧರಾಗಿದ್ದವರು. ವೇದಶಾಸ್ತ್ರಪುರಾಣಾದಿಗಳಲ್ಲಿ ಅದ್ವಿತೀಯ ಪಂಡಿತರೂ ಆಗಿದ್ದರು. ಪ್ರತಿಯೊಬ್ಬರೂ ಅವರವರ ಕರ್ಮಗಳನ್ನು ಶ್ರದ್ಧೆಯಿಂದಲೂ, ಆದರದಿಂದಲೂ ಆಚರಿಸಬೇಕೆಂದು ನುಡಿಯುತ್ತಿದ್ದ ಅವರು ಸನಾತನ ಧರ್ಮದ ವಿಶ್ವವ್ಯಾಪಕತ್ವದಲ್ಲಿ ಅಚಲ ವಿಶ್ವಾಸ ಹೊಂದಿದ್ದರೂ, ಇತರ ಮತಗಳಲ್ಲಿಯೂ ಸಾಧನಪಥವುಂಟೆಂದು ನುಡಿಯುತ್ತಿದ್ದರು.

ಒಮ್ಮೆ ಶಿಷ್ಯರೊಬ್ಬರು ತಾವು ಆರು ಜನ ಜೀವನ್ಮುಕ್ತರನ್ನು ಕಂಡಿರುವುದಾಗಿಯೂ ಅವರಲ್ಲೊಬ್ಬರು ಮುಸಲ್ಮಾನರು, ಒಬ್ಬರು ಕುರುಬರು, ಒಬ್ಬರು ಶ್ರೀವೈಷ್ಣವರು, ಇನ್ನಿಬ್ಬರು ಇತರ ಜಾತಿಯವರೆಂದು ತಿಳಿಸಿ, ಅವರೆಲ್ಲರ ಸುತ್ತುಮುತ್ತಲ ಸನ್ನಿವೇಶಗಳೆಲ್ಲವೂ ಭಿನ್ನವಾದರೂ ಅವರ ನಡೆನುಡಿ ಅನುಭವ, ನಂಬಿಕೆಗಳು ಅದ್ವೈತವನ್ನೇ ಸೂಚಿಸುತ್ತವೆಯೆಂದು ನುಡಿದು, ಹೀಗಿರಲು ಸಾಧ್ಯವೇ ಎಂದು ಪ್ರಶ್ನಿಸಿದರು. ಗುರುವರ್ಯರು **"ಹಾಗೇಕಿರಬಾರದು? ಜೀವನ್ಮುಕ್ತರಲ್ಲಿ ವ್ಯತ್ಯಾಸವಿರಲು ಹೇಗೆ ಸಾಧ್ಯ? ಅದ್ವೈತಾನುಭವವು ಶ್ರೀಶಂಕರ ಭಗವತ್ಪಾದರ ಶಿಷ್ಯರ ಸ್ವತ್ತೇ? ಅದು ವಿಶ್ವ ತತ್ತ್ವ, ಶಾಶ್ವತ ತತ್ತ್ವ. ಅದು ಅನಾದಿ ಕಾಲದಿಂದಲೂ, ಶ್ರೀಶಂಕರ ಭಗವತ್ಪಾದರಿಗೂ ಮೊದಲಿನಿಂದ ಇತ್ತು. ಅದನ್ನು ಯಾರು ಬೇಕಾದರೂ ಸಾಕ್ಷಾತ್ಕಾರ ಮಾಡಿಕೊಳ್ಳಬಹುದು"**ಎಂದು ಮರುನುಡಿದರು.

ಯಾವ ಮತಾನುಯಾಯಿಗಳು ಬಂದರೂ, ಅವರನ್ನು ಅವರವರ ಮತಗಳ ಕಡೆ ತಿರುಗಿಸಿ, ಆ ಮತಗಳಲ್ಲಿಯೂ ಆತ್ಮಸಾಧನೆಯ ಮಾರ್ಗವಿದೆ, ಜ್ಞಾನಿಗಳೂ, ಮಹಾತ್ಮರೂ ಇದ್ದಾರೆ ಎಂಬುದನ್ನು ಮನದಟ್ಟು ಮಾಡಿಕೊಟ್ಟು ತಮ್ಮಲ್ಲಿ ಬಂದ ಪ್ರತಿಯೊಬ್ಬರಿಗೂ ಅವರವರ ಮತಗಳಲ್ಲಿ ಶ್ರದ್ಧೆ ನಂಬಿಕೆಗಳನ್ನು ಮೂಡಿಸುತ್ತಿದ್ದರು. ಭಾರತೀಯತೆಗೆ ಮಾರುಹೋದ ಪಾಶ್ಚಾತ್ಯ ವಿದ್ಯಾವಂತರೊಬ್ಬರು, ತಾವು ಹಿಂದುವಾಗಿ ಮತಾಂತರ ಹೊಂದಬೇಕೆಂಬ ಪ್ರಬಲ ಇಚ್ಛೆಯಿಂದ ಗುರುವರ್ಯರಲ್ಲಿ ಬಂದಾಗ ಶ್ರೀಶ್ರೀಗಳು ಅವರಿಗೆ



ಕ್ರೈಸ್ತಮತದಲ್ಲಿಯೇ ನಂಬಿಕೆಯುಂಟಾಗುವಂತೆ ಉಪದೇಶ ನೀಡಿದ್ದರು. ಅವರ ಉಪದೇಶ ಅದೆಷ್ಟು ಪರಿಣಾಮಕಾರಿಯಾಗಿತ್ತೆಂದರೆ ಆತ ಅವರಿಗೆ ಸಾಷ್ಟಾಂಗವೆರಗಿ "ಸ್ವಾಮೀಜಿ, ತಮ್ಮ ದಯಾಮಯ ಬೋಧನೆಗೆ ನಾನೆಷ್ಟು ವಂದಿಸಿದರೂ ಸಾಲದು. ತಮ್ಮ ಸನ್ನಿಧಿಯಿಂದ ಹಿಂದಿರುಗುವಾಗ ನಾನು ಮೊದಲಿಗಿಂತಲೂ ಹೆಚ್ಚು ಶ್ರದ್ಧಾವಂತನಾಗಿ, ಉತ್ತಮ ಕ್ರೈಸ್ತ ಧರ್ಮಿಯಾಗುವೆನೆಂದು ನಾನಿಲ್ಲಿಗೆ ಬಂದಾಗ ನಂಬಿರಲಿಲ್ಲ. ಕ್ರೈಸ್ತ ಧರ್ಮಿಯನ್ನು ಉತ್ತಮ ಕ್ರೈಸ್ತನಾಗುವಂತೆಯೂ, ಹಿಂದೂ ಧರ್ಮಿಯನ್ನು ಉತ್ತಮ ಹಿಂದುವಾಗುವಂತೆಯೂ ಬೋಧಿಸಿ ಪ್ರೇರೇಪಿಸುವುದೇ ಧರ್ಮೋಪದೇಶಕರಾದ ತಮ್ಮ ಉದ್ದೇಶವಾಗಿದ್ದರೆ ತಮ್ಮ ಧರ್ಮವು ವಿಶ್ವವಿಶಾಲವೆಂಬುದರಲ್ಲಿ ಸಂದೇಹವಿಲ್ಲ. ದಯಮಾಡಿ ನನ್ನ ಧರ್ಮಾಭೀಷ್ಟವು ನೆರವೇರುವಂತೆ ಆಶೀರ್ವದಿಸಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ" ಎಂದು ಬಿನ್ನವಿಸಿದನು. ಧರ್ಮೋತ್ಥಾನವೆಂದರೆ ಇದೇ ಅಲ್ಲವೇ? ಜಗದ್ಗುರುವೆಂದರೆ ಎಲ್ಲರಿಗೂ ಅವರವರ ಮತಧರ್ಮದಲ್ಲಿಯೇ ಸಾಧನಾಮಾರ್ಗ ತೋರಿಸಿ ಬೋಧಿಸುವವರಲ್ಲವೇ?

ಮತಾಚಾರದಲ್ಲಿ ಇರುವ ಲೋಪದೋಷಗಳನ್ನೋ, ಜನಗಳಲ್ಲಿರತಕ್ಕ ಅಂಧ ಶ್ರದ್ಧೆಯನ್ನೋ, ಮತಗಳಿಗೆ ಸಂಬಂಧಿಸಿದ ಯಾವ ವಿಷಯವನ್ನಾದರೂ ಸಹ ಗುರುಗಳಲ್ಲಿ ನಿವೇದಿಸಿಕೊಳ್ಳಬಹುದಾಗಿತ್ತು. ಯಾವ ಸಂದರ್ಭದಲ್ಲೂ ಗುರುಗಳು ಉದ್ವಿಗ್ನಗೊಂಡುದಾಗಲೀ, ಕೋಪಗೊಂಡುದಾಗಲೀ ಇಲ್ಲ. ನಿಧಾನವಾಗಿ ಎಲ್ಲಾ ವಿಚಾರಗಳನ್ನೂ ಚರ್ಚಿಸಿ, ವಿವರಿಸುತ್ತಾ, ಪ್ರಶ್ನಕರ ಮನಸ್ಸಿನಲ್ಲಿದ್ದ ಎಲ್ಲ ಸಂದೇಹಗಳನ್ನೂ ಹೊರಹೊರಡಿಸುತ್ತಾ ಕೇಳುವವರಿಗೆ ಹೃದ್ಯವಾಗುವಂತೆ ತಿಳಿವಳಿಕೆ ನೀಡುತ್ತಿದ್ದರು. ಬುದ್ಧಿವಂತಿಕೆಗಿಂತಲೂ ಹೃದಯವಂತಿಕೆಗೆ ಶ್ರೀಗಳವರು ಹೆಚ್ಚು ಬೆಲೆ ಕೊಡುತ್ತಿದ್ದರು. ಹತ್ತಾರು ಮತಗಳ ಧರ್ಮಗ್ರಂಥಗಳನ್ನು ಓದಿ ತುಲನಾತ್ಮಕ ಅಭ್ಯಾಸ ಮಾಡುವುದರಿಂದ ಉಪಯೋಗವೇನು? ವಿದ್ಯುಚ್ಛಕ್ತಿಯನ್ನು ಉತ್ಪನ್ನ ಮಾಡುವ ವಿಷಯದಲ್ಲಿ ಗಂಟೆಗಟ್ಟಲೆ ಉಪನ್ಯಾಸ ಮಾಡುವುದರಿಂದ ವಿದ್ಯುಚ್ಛಕ್ತಿ ಮೂಡಿ ಬೆಳಕಾಗುತ್ತದೆಯೇ? ವ್ಯವಸಾಯ ವಿಷಯವಾಗಿ ದೇಶವಿದೇಶಗಳಿಗೆಲ್ಲಾ ಪ್ರವಾಸ ಮಾಡಿ ಹತ್ತಾರು ಪದವಿಗಳನ್ನು ಸಂಪಾದಿಸಿಕೊಂಡು ಬಂದರೆ ದೇಶದಲ್ಲಿ ವ್ಯವಸಾಯಾಭಿವೃದ್ಧಿಯಾದಂತಾಯಿತೇ? ಹೆಚ್ಚು ಬೆಳೆ ಬೆಳೆಯುತ್ತದೆಯೇ? ಈ ದಿಸೆಯಲ್ಲಿ ಈಗ ನಡೆಯಬೇಕಾದುದು ಕೆಲಸವೇ ವಿನಾ ಚರ್ಚೆಯಲ್ಲ. ಮತಗ್ರಂಥಗಳ ಅಧ್ಯಯನದಿಂದ ಬುದ್ಧಿಯ ಕುತೂಹಲವನ್ನು ತಣಿಸಬಹುದೇ ವಿನಾ ಯಾವುದಾದರೊಂದು ಮಾರ್ಗದಲ್ಲಿ ಸಾಧನೆ ಮಾಡಿದಂತಾಗುವುದಿಲ್ಲ.

ಶ್ರೀಗಳವರು ಬುದ್ಧಿಮಾರ್ಗದಲ್ಲಿಯೂ ಕೆಲಸ ಮಾಡಬೇಕೆಂದು ಹೇಳುತ್ತಿದ್ದರು. ಹಾಗೆಂದರೆ ಗ್ರಂಥ ರಚನೆಯಲ್ಲ, ಮತತತ್ತ್ವಗಳ ಅನುಷ್ಠಾನ. ಅದಕ್ಕೆ ಅಗತ್ಯವಾದ ಸ್ಫೂರ್ತಿಯು ಹೃದಯದಿಂದ ದೊರಕಬೇಕೇ ವಿನಾ ಬುದ್ಧಿಯಿಂದ ದೊರಕಲಾರದು. ಸಂಶಯಾತ್ಮಕವಾದ ಬುದ್ಧಿಗೆ ಯಾವುದರಲ್ಲಿ ತಾನೇ ನಂಬಿಕೆ ಬಂದೀತು? ಹೃದಯದ ಆಣತಿಯಂತೆ ಬುದ್ಧಿಯು ನಡೆದರೆ ಧರ್ಮಶ್ರದ್ಧೆ ಮೂಡುವುದರಲ್ಲಿ ಸಂದೇಹವೇ ಇರುವುದಿಲ್ಲ.

ಇಂದಿನ ವೈಜ್ಞಾನಿಕ ವಿಶ್ವದಲ್ಲಿ ವಿಪತ್ಪರಂಪರೆಗಳ ಸುಳಿಯಲ್ಲಿ ಭಯಭೀತಿಗಳ ಹಾವಳಿಯಲ್ಲಿ ದಿನದಿನಕ್ಕೂ ಹೆಚ್ಚುತ್ತಿರುವ ಅಭದ್ರತೆ, ಕಷ್ಟಕಾರ್ಪಣ್ಯಗಳಲ್ಲಿ ಮನುಷ್ಯನನ್ನು ಉಳಿಸುವುದು ಧಾರ್ಮಿಕಶ್ರದ್ಧೆ ಮತ್ತು ನಂಬಿಕೆ. ಇನ್ನೊಬ್ಬರಿಗೆ ಉಪದೇಶ ಮಾಡುವುದಕ್ಕಿಂತಲೂ ಮುಖ್ಯವಾದುದು ಸ್ವಂತ ಆಚರಣೆಯಿಂದ ಅನುಕರಣೀಯನಾಗಬೇಕಾದುದು. ಸತ್ಯವಚನ, ನಿರ್ವಂಚನೆ, ನಿಸ್ವಾರ್ಥ, ಅನುಕಂಪ ಮುಂತಾದ ಸಾಮಾನ್ಯ ಧರ್ಮಗಳನ್ನು ಪಾಲಿಸುವುದು. ಸುಳ್ಳಾಡುವುದು ತಪ್ಪೆಂದು ಎಲ್ಲರಿಗೂ ತಿಳಿದ ವಿಷಯ. ಆದರೆ ಸುಳ್ಳನ್ನೇ ಪ್ರತಿಪಾದಿಸುವವರು ಎಷ್ಟು ಮಂದಿಯಿಲ್ಲ? ಮೋಸ ಮಾಡುವುದು ತಪ್ಪೆಂದು ಎಲ್ಲರಿಗೂ ತಿಳಿದಿದೆ. ಆದರೆ ವಂಚನೆಯ ಘಟನೆಗಳೇನಾದರೂ ಕಡಿಮೆಯಾಗಿವೆಯೇ? ಲಂಚಕೋರತನ, ಪರನಿಂದೆ, ಆತ್ಮಪ್ರಶಂಸೆ, ಅನ್ಯಾಯವೆಸಗುವುದು, ದ್ರೋಹಚಿಂತನೆ, ಸುಳ್ಳು, ತಟವಟ ಮುಂತಾದವು ಆಧುನಿಕ ಜೀವನಕ್ಕೆ, ಸಮಾಜಕ್ಕೆ ಅವಿಭಾಜ್ಯ ಅಂಗಗಳೇ ಆಗಿಬಿಟ್ಟಿವೆ. ಇವೆಲ್ಲವೂ ಕೆಟ್ಟುದೆಂದು ತಿಳಿದಿದ್ದರೂ ಜನ ಮತ್ತೆ ಮತ್ತೆ ಸ್ವಾರ್ಥದಿಂದ ದುರಾಸೆಯಿಂದ ಅವುಗಳನ್ನೇ ಆಶ್ರಯಿಸುತ್ತಾರೆ. ಈ ಸಾಮಾನ್ಯ ಧರ್ಮಾಚರಣೆಯೇ ಹೀನ ಸ್ಥಿತಿಯಲ್ಲಿರುವಾಗ ಆತ್ಮಜ್ಞಾನಕ್ಕೆ ಸಂಬಂಧಪಟ್ಟ ಚರ್ಚೆ, ವಾದಗಳು, ಉಪನ್ಯಾಸ ಭಾಷಣಗಳು ಪ್ರತಿಪಾದನೆಗಳು ಏತಕ್ಕೆ?

ಪ್ರಕಟವಾದ ನೂರಾರು ಆಧ್ಯಾತ್ಮಿಕ ಗ್ರಂಥಗಳನ್ನೂ, ಲೇಖನಗಳನ್ನೂ ಓದಿ ಮನನ ಮಾಡಿಕೊಂಡವನು ಬ್ರಹ್ಮಜ್ಞಾನಿಯೇ? ಶ್ರೀಶಂಕರ ಭಗವತ್ಪಾದರ ಅದ್ವೈತವನ್ನೂ, ಶ್ರೀರಾಮಾನುಜರ ವಿಶಿಷ್ಟಾದ್ವೈತವನ್ನೂ, ಶ್ರೀ ಮಧ್ವರ ದ್ವೈತವನ್ನೂ ಓದಿದವನು, ಅವುಗಳನ್ನು ಕುರಿತು ಭಾಷಣ ಮಾಡುವವನು ತತ್ತ್ವಜ್ಞಾನಿಯಾಗುವನೇ? ಸ್ವಾನುಭವ ಶೂನ್ಯನಾದ ಅಂತಹವನು ಇತರರಿಗೆ ಯಾವ ರೀತಿ ಸಹಾಯ ಮಾಡಬಲ್ಲನು? ಓದಿದ ಮಾತ್ರಕ್ಕೆ ಆತ ವೇದಾಂತಿ ಯಾಗಲಾರ. ಲೌಕಿಕ ಕೆಲಸಗಳಾದ ಬಡಗಿ, ಕಮ್ಮಾರ, ಅತ್ಯಂತ ಸಾಧಾರಣ ವೆಂದು ಭಾವಿಸಲ್ಪಟ್ಟಿರುವ ಗುಮಾಸ್ತೆಯ ಕೆಲಸಗಳಿಗೇ ತರಬೇತಿ ಅವಶ್ಯವಾಗಿರು



ವಾಗ ಆಧ್ಯಾತ್ಮಿಕ ವಿದ್ಯೆಗೆ ತರಪೇತು ಬೇಡವೆ? ಪುಸ್ತಕವನ್ನೋದಿದ ಮಾತ್ರಕ್ಕೆ ಯಾರಾದರೂ ತಾಂತ್ರಿಕ ವಿದ್ಯೆಯಲ್ಲಿ ಪರಿಣತಿ ಪಡೆಯಲು ಸಾಧ್ಯವೇ? ವೈದ್ಯಗ್ರಂಥಗಳನ್ನು ಓದಿದಾಕ್ಷಣ ಯಾರಾದರೂ ವೈದ್ಯರಾಗುವರೇ? ಅಂತಹವರಿಂದ ಯಾರಾದರೂ ಔಷಧಿ, ಸಲಹೆಗಳನ್ನು ಪಡೆಯಲು ಸಾಧ್ಯವೇ? ಅಂತಹವರಲ್ಲಿ ಯಾರಾದರೂ ಶಸ್ತ್ರಚಿಕಿತ್ಸೆಗಾಗಿ ಹೋಗುತ್ತಾರೆಯೇ? ಹಾಗೆಯೇ ವೇದಾಂತ ಗ್ರಂಥಗಳನ್ನು ಓದಿದ ಮಾತ್ರಕ್ಕೆ ಪರಿಣತಿ ಬರುತ್ತದೆಯೇ? ಅರ್ಹತೆ, ಯೋಗ್ಯತೆಗಳು ಬೇಡವೇ? ವೇದಾಂತವನ್ನು ಅನುಷ್ಠಾನ ಮಾಡುವ ಮುನ್ನ ಸಾಮಾನ್ಯ ಧರ್ಮಗಳನ್ನು ಪ್ರಾಮಾಣಿಕವಾಗಿ ಅನುಷ್ಠಾನ ಮಾಡಬೇಕು. ಇತರರನ್ನು ದ್ವೇಷಿಸದಿರುವುದು, ಸುಳ್ಳು ಹೇಳದಿರುವುದು, ಮೋಸ ಮಾಡದಿರುವುದು, ಇತರರ ವಸ್ತುಗಳನ್ನು ಅಪಹರಿಸದಿರುವುದು, ದಂಭವನ್ನೂ, ಸೋಗನ್ನೂ ಕಳಚಿಹಾಕಿ ಪ್ರಾಮಾಣಿಕತೆಯನ್ನು ಅಭ್ಯಸಿಸುವುದು ಇತ್ಯಾದಿ ಸಾಮಾನ್ಯ ಧರ್ಮಗಳನ್ನೂ, ಪ್ರಾಥಮಿಕ ಅಭ್ಯಾಸಗಳನ್ನೂ ಬೆಳೆಸಿಕೊಂಡು ಉತ್ತೀರ್ಣ ರಾಗಬೇಕು.

ಸಾಮಾನ್ಯಧರ್ಮ ಪಾಲನೆಯ ಆರಂಭದಲ್ಲಿ ವಿಘ್ನಗಳನ್ನು ಎದುರಿಸ ಬೇಕಾದರೂ, ಧೈರ್ಯಸ್ಥೈರ್ಯಗಳಿಂದ ಅವುಗಳನ್ನು ಅನುಷ್ಠಾನ ಮಾಡಬೇಕು. ಅದರಿಂದ ಆತನಿಗೆ ನಿಜವಾಗಿಯೂ ತೃಪ್ತಿಸಮಾಧಾನಗಳು ದೊರೆಯುತ್ತವೆ. ಸಾಮಾನ್ಯ ಧರ್ಮಗಳಲ್ಲಿ ಸ್ಥಿರತೆಯನ್ನು ಪಡೆದ ನಂತರ ಗುರುವನ್ನಾಶ್ರಯಿಸಿ ವಿಶೇಷ ಧರ್ಮವಾದ ಆತ್ಮಜ್ಞಾನವನ್ನು ಉಪದೇಶ ಪಡೆದು ಸಾಧನೆ ಮಾಡಬೇಕು. ಆಧ್ಯಾತ್ಮಿಕ ಮಾರ್ಗದಲ್ಲಿ ಪರಿಕ್ರಮಿಸುವ ಮೊದಲು ಶ್ರದ್ಧೆಯನ್ನು ಹೊಂದಿರಬೇಕು, ಎಂದರೆ ಶಾಸ್ತ್ರವಾಕ್ಯದಲ್ಲಿ ನಂಬಿಕೆ ತಳೆದಿರಬೇಕು. ಗುರು ತೋರಿದ ಹಾದಿಯಲ್ಲಿ ನಡೆಯಬೇಕು. ಅದರ ಮುಂದಿನ ಘಟ್ಟವೇ ದೈವಭಕ್ತಿ. ಅವರವರ ಅರ್ಹತೆ, ನಂಬಿಕೆಗಳಿಗೆ ತಕ್ಕಂತೆ ಶಿವ, ವಿಷ್ಣು, ದೇವಿ, ಸೂರ್ಯ, ಗಣಪತಿ ಇತ್ಯಾದಿ ಆವಿರ್ಭಾವಗಳನ್ನು ಉಪಾಸನೆಗೈಯಬೇಕು. ಭಕ್ತಿಯಿಂದ ಮನಃಪರಿಪಾಕವನ್ನು ಗಳಿಸಿಕೊಂಡು ಧ್ಯಾನಯೋಗದಲ್ಲಿ ಮನಸ್ಸನ್ನು ನಿಲ್ಲಿಸಬೇಕು. ಯೋಗವೆಂದರೆ ಮನಸ್ಸನ್ನು ಧ್ಯಾನಮೂರ್ತಿಯಲ್ಲಿ ಕೇಂದ್ರೀಕರಿಸುವುದು. ಅದಾದ ಬಳಿಕ ಜ್ಞಾನ ಅಥವಾ ಸಮ್ಯಗ್ದರ್ಶನ. ನಾಮರೂಪಾತೀತವಾದ ಇಂದ್ರಿಯ ಗೋಚರವಾಗದ ಪರವಸ್ತುವನ್ನು ಕುರಿತು ವಿಚಾರ ಮಾಡಬೇಕು. ಆಗ ಭಗವಂತನು ಆತನ ಸಮಸ್ಯೆಗಳನ್ನೆಲ್ಲಾ ಪರಿಹರಿಸುತ್ತಾನೆ. ಕಷ್ಟಗಳನ್ನೂ, ದುಃಖಗಳನ್ನೂ ನಿವಾರಿಸುತ್ತಾನೆ. ಹೀಗೆ ಶ್ರದ್ಧೆಯಿಂದ ಆತ್ಮಜ್ಞಾನ ಮಾರ್ಗದಲ್ಲಿ ಪರಿಕ್ರಮಣ ಮಾಡಿದವನು ಕೊನೆಗೆ ಸಚ್ಚಿದಾನಂದವಾದ ಪರಿಪೂರ್ಣ

ಬ್ರಹ್ಮವಾಗಿರುವ ಅದ್ವೈತಾನುಭವವನ್ನು ಹೊಂದುತ್ತಾನೆ.

ಜೀವನಕ್ಕೊಂದು ನಂಬಿಕೆ, ಧಾರ್ಮಿಕ ಆಧಾರ ಬೇಕೆಂದು ಹುಡುಕುವವರೆಲ್ಲರಿಗೂ ಶ್ರೀಚಂದ್ರಶೇಖರ ಭಾರತೀ ಸ್ವಾಮಿಗಳವರ ಮಾತು ಉಪದೇಶಗಳಲ್ಲಿ ಸರಳವಾಗಿ ಆಚರಿಸಬಹುದಾದ, ಉಪಯುಕ್ತವಾದ ಎಷ್ಟೋ ಬೋಧನೆಗಳು ಅಡಗಿವೆ. ಅವರ ಉಪದೇಶಗಳು ಕತ್ತಲಲ್ಲಿನ ದಾರಿದೀಪಗಳಾಗಿವೆ.

* * *



# ೪೨. ಶ್ರೀ ಶ್ರೀ ಅಭಿನವ ವಿದ್ಯಾತೀರ್ಥರು

ತಪೋಧನರಾದ ಶ್ರೀಜಗದ್ಗುರು ಚಂದ್ರಶೇಖರಭಾರತೀ ಸ್ವಾಮಿಗಳವರ ದಿವ್ಯ ಕಥಾನಕವನ್ನು ಆದ್ಯಗುರು ಶ್ರೀಶಂಕರ ಭಗವತ್ಪಾದರ ಸ್ಮರಣೆಯಿಂದಲ್ಲವೆ ನಾವು ಪ್ರಾರಂಭಿಸಿದುದು? ಪೂಜ್ಯ ಶ್ರೀಶಂಕರ ಭಗವತ್ಪಾದರು ಸ್ಥಾಪಿಸಿದ ದಕ್ಷಿಣಾಮ್ನಾಯ ಶ್ರೀಶಾರದಾಪೀಠದಲ್ಲಿ ಶ್ರೀಚಂದ್ರಶೇಖರ ಭಾರತಿಯವರು ಮೂವತ್ನಾಲ್ಕನೆಯ ಜಗದ್ಗುರುಗಳಾದರೆ ನಂತರ ವಿರಾಜಮಾನರಾದವರು ಶ್ರೀ ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರು ಮೂವತ್ತೈದನೆಯ ಆಚಾರ್ಯರು. ಶ್ರೀಗುರುಪರಂಪರೆಯು ಅವಿಚ್ಛಿನ್ನವಾಗಿ ದೇವಗಂಗಾ ಸಲಿಲದಂತೆ ಇಂದೂ ಪ್ರವಹಿಸುತ್ತಿದೆ, ಜ್ಞಾನವಾಹಿನಿಯಾಗಿ, ಶ್ರೀವಿದ್ಯಾತೀರ್ಥವಾಗಿ.

ಶ್ರೀಚಂದ್ರಶೇಖರ ಭಾರತಿಯವರ ಕರಕಮಲ ಸಂಜಾತರಾದ ಶ್ರೀಮದಭಿನವ ವಿದ್ಯಾತೀರ್ಥ ಶ್ರೀಪಾದರವರ ಪೂರ್ವಾಶ್ರಮದ ನಾಮಧೇಯ ಶ್ರೀನಿವಾಸರೆಂದು. ಇವರ ಪೂರ್ವಜರು ಸ್ಮೃತಿ ಮತ್ತು ಧರ್ಮಶಾಸ್ತ್ರಗಳಲ್ಲಿ ಉದ್ದಾಮ ಪಂಡಿತರಾಗಿದ್ದು ನ್ಯಾಯಾಧೀಶರಾಗಿದ್ದವರು.

ಶ್ರೀನಿವಾಸರಿಗೆ ದೈವಭಕ್ತಿ, ಧರ್ಮನಿಷ್ಠೆ ಮುಂತಾದ ಗುಣಗಳು ಬಾಲ್ಯದಲ್ಲಿಯೇ ಒಲಿದಿದ್ದವು. ಪೂಜೆ, ಭಜನೆ, ಪವಿತ್ರ ಗ್ರಂಥಗಳ ಅಧ್ಯಯನದಲ್ಲಿ ಮೊದಲಿನಿಂದಲೂ ಆಸಕ್ತರಾಗಿದ್ದ ಶ್ರೀನಿವಾಸರು ಜಗದ್ಗುರು ಶ್ರೀಚಂದ್ರಶೇಖರ ಭಾರತಿಯವರ ಕಟಾಕ್ಷಕ್ಕೆ ಪಾತ್ರರಾದರು. ಬೆಂಗಳೂರಿನಲ್ಲಿ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದ ಶ್ರೀನಿವಾಸರನ್ನು ಬೆಂಗಳೂರಿನಿಂದ ಶೃಂಗೇರಿಗೆ ಕರೆಯಿಸಿಕೊಳ್ಳಲಾಯಿತು. ಗುರ್ವಾಜ್ಞೆಯಂತೆ ಅವರಿಗೆ ಶ್ರೀಶಾರದಾಂಬಾ ಸನ್ನಿಧಿಯಲ್ಲಿಯೇ ಉಪನಯನವೂ, ಮಠದ ಶ್ರೀಸದ್ವಿದ್ಯಾಸಂಜೀವಿನೀ ಪಾಠಶಾಲೆಯಲ್ಲಿ ಪ್ರವೇಶವೂ ಆಯಿತು. ಕ್ರಮವಾಗಿ ಪ್ರೌಢವಿದ್ಯೆಯಲ್ಲಿಯೂ, ಶಾಸ್ತ್ರಗಳಲ್ಲಿಯೂ ವಿದ್ಯಾಭ್ಯಾಸವೂ ಆಯಿತು.

ದಿನೇ ದಿನೇ ಪ್ರವರ್ಧಮಾನಕ್ಕೆ ಬರುತ್ತಿದ್ದ ಶ್ರೀನಿವಾಸರನ್ನು ತಮ್ಮ ಶಿಷ್ಯರನ್ನಾಗಿ ಪರಿಗ್ರಹಿಸುವ ಉದ್ದೇಶದಿಂದಲೇ ಶ್ರೀಚಂದ್ರಶೇಖರ ಭಾರತಿಯವರು ಶೃಂಗೇರಿಗೆ ಕರೆಯಿಸಿದ್ದರು. ಗುರುವರ್ಯರು ಹೀಗೆ ಮಾಡಲು ಎರಡು ಕಾರಣಗಳಿದ್ದವು. ಅವರು ಸಂನ್ಯಾಸಾಶ್ರಮ ಸ್ವೀಕಾರ ಮಾಡುವ ಮುನ್ನವೇ ಅವರ ಗುರುಗಳು ವಿದೇಹಮುಕ್ತರಾಗಿದ್ದುದರಿಂದ ಅವರಿಗೆ ಗುರುಗಳಿಂದ

ಪ್ರತ್ಯಕ್ಷ ಮಾರ್ಗದರ್ಶನ ಪಡೆದುಕೊಳ್ಳಲಾಗಿರಲಿಲ್ಲ. ಆದ್ದರಿಂದ ಅವರು ತಮ್ಮ ಶಿಷ್ಯರನ್ನು ತಮ್ಮ ಮಾರ್ಗದರ್ಶನದಲ್ಲಿಯೇ ತಯಾರುಮಾಡಿ ಅಭ್ಯುದಯದ ಹಾದಿಯಲ್ಲಿ ಪದಾರ್ಪಣೆ ಮಾಡಿಸುವ ಅಪೇಕ್ಷೆ ಹೊಂದಿದ್ದರು. ಎರಡನೆಯದು ತಮ್ಮ ಶಿಷ್ಯರು ಎಲ್ಲಾ ವೈದಿಕ, ಲೌಕಿಕ, ಆಚಾರ, ವ್ಯವಹಾರಗಳಲ್ಲಿ ಪರಿಣತಿಯನ್ನು ಹೊಂದಿ, ಮಠದ ಎಲ್ಲಾ ಜವಾಬ್ದಾರಿಯನ್ನೂ ವಹಿಸಿಕೊಂಡಲ್ಲಿ ತಾವು ಪೂರ್ಣವಾಗಿ ತಪೋನಿರತರಾಗಿರಬಹುದು ಎಂಬುದು. ಇದಕ್ಕೆ ಶ್ರೀಜಗದಂಬೆಯ ಅನುಜ್ಞೆಯೂ ಇತ್ತು.

ಅದರಂತೆಯೇ ಪ್ರಜೋತ್ಪತ್ತಿ ಸಂವತ್ಸರದ ಜ್ಯೇಷ್ಠ ಶುದ್ಧ ಪಂಚಮಿಯ ಶುಭದಿನದಂದು ಶ್ರೀಶ್ರೀನಿವಾಸರಿಗೆ ಸಂನ್ಯಾಸ ದೀಕ್ಷೆಯನ್ನಿತ್ತು ಶಿಷ್ಯರನ್ನಾಗಿ ಪರಿಗ್ರಹಿಸಿದರು. ಶ್ರೀಮದಭಿನವ ವಿದ್ಯಾತೀರ್ಥರೆಂದು ತುರೀಯಾಶ್ರಮ ಪ್ರವೇಶ ಮಾಡಿದ ಶಿಷ್ಯಸ್ವಾಮಿಗಳು ತಮ್ಮ ಗುರುಗಳ ನಿಕಟ ಸಂಪರ್ಕ, ದಿವ್ಯ ಮಾರ್ಗದರ್ಶನ ಮತ್ತು ಉಪದೇಶಗಳನ್ನು ಸತತ ಇಪ್ಪತ್ಮೂರು ವರ್ಷಗಳ ಕಾಲ ಪಡೆದ ಮಹಾಭಾಗ್ಯಶಾಲಿಗಳು. ಶ್ರೀಚಂದ್ರಶೇಖರ ಭಾರತಿಯವರ ದಿವ್ಯವಾಣಿಯನ್ನು ಒಮ್ಮೆ ಆಲೈಸಿದರೇ ಸಾಕು, ಅದೇ ಎಂದೆಂದಿಗೂ ನಮಗೆ ದಾರಿದೀಪವಾಗಿ ಉದ್ಧರಿಸುತ್ತದೆ. ಅವರ ದಿವ್ಯಕಟಾಕ್ಷಕ್ಕೆ ಒಮ್ಮೆ ಪಾತ್ರರಾದರೆ ಅವರ ಶ್ರೀಮೂರ್ತಿ ಹೃದಯದಲ್ಲಿ ಎಂದೆಂದಿಗೂ ನೆಲಸಿ, ತಪ್ಪು ಹೆಜ್ಜೆಯಿಡುವ ಮಗುವನ್ನು ಕಾಯುವ ತಾಯಿಯಂತೆ ಕಾಯುತ್ತದೆ. ಅಂತಹುದರಲ್ಲಿ ಇಪ್ಪತ್ಮೂರು ವರ್ಷಗಳು ಸತತವಾಗಿ ಅವರ ದಿವ್ಯ ಸನ್ನಿಧಿಯಲ್ಲಿ ಬೆಳೆದು ಅವರಿಂದ ಉಪದೇಶ ಪಡೆದ ಶ್ರೀವಿದ್ಯಾತೀರ್ಥರ ಅದೃಷ್ಟ ಎಷ್ಟು ಶ್ರೇಷ್ಠತಮವಾಗಿರ ಬೇಕು?

ವೇದಶಾಸ್ತ್ರಗಳಲ್ಲಿಯೂ, ಆತ್ಮಸಾಧನೆಯಲ್ಲಿಯೂ ಪ್ರಗತಿ ಹೊಂದುತ್ತಾ ಬಂದ ಶ್ರೀವಿದ್ಯಾತೀರ್ಥರು ಹಿರಿಯ ಗುರುಗಳಿಗೆ ಎಲ್ಲಾ ವಿಧದಲ್ಲಿಯೂ ನೆರವಾದರು. ಜಗದ್ಗುರುಗಳು ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳವರಂತೆಯೇ, ಆಧ್ಯಾತ್ಮಿಕ ಮಹತ್ವ ಮತ್ತು ತಪೋನುಷ್ಠಾನಗಳಲ್ಲಿ ಶ್ರೀವಿದ್ಯಾತೀರ್ಥರು ಪ್ರಖ್ಯಾತರಾಗುತ್ತಾರೆಂದು ನುಡಿದಿದ್ದರು. ಶ್ರೀಗಳವರು ತಮ್ಮ ಶಿಷ್ಯರಲ್ಲಿ ವಾತ್ಸಲ್ಯಪೂರ್ಣರಾಗಿದ್ದು, ತಮ್ಮ ಆಶೀರ್ವಾದ, ಅನುಗ್ರಹ ಮತ್ತು ದಿವ್ಯರಕ್ಷೆಯಲ್ಲಿ ಅವರನ್ನು ತಿದ್ದಿ ರೂಪಿಸಿದರು. ಶ್ರೀವಿದ್ಯಾತೀರ್ಥರು ತಮ್ಮ ಗುರುವರ್ಯರ ನಿರೀಕ್ಷೆಯಂತೆಯೇ ಆಧ್ಯಾತ್ಮಿಕ ವಿದ್ಯೆಯಲ್ಲಿ ಅತ್ಯುತ್ತಮ ವಾದ ನೈಪುಣ್ಯವನ್ನು ಗಳಿಸಿ ತಮ್ಮ ಅಭಿದಾನಕ್ಕೆ ತಕ್ಕಂತೆ ವಿದ್ಯಾತೀರ್ಥರೇ ಆದರು.



ತಮ್ಮ ಗುರುಗಳು ವಿದೇಹಮುಕ್ತಿ ಹೊಂದಿ ಬ್ರಹ್ಮೈಕ್ಯರಾದ ಬಳಿಕ ಶ್ರೀವಿದ್ಯಾತೀರ್ಥರು ಸ್ವಲ್ಪಕಾಲ ತಪೋನಿರತರಾಗಿದ್ದು, ಅ ಬಳಿಕ ಅನೇಕ ಶಿಷ್ಯರ ಪ್ರಾರ್ಥನೆಯಂತೆ ಸನಾತನ ಧರ್ಮ ಪ್ರಸಾರಕ್ಕಾಗಿ ದಕ್ಷಿಣ ಭಾರತ ಪ್ರವಾಸ ಕೈಗೊಂಡರು. ಸಂಪ್ರದಾಯದಂತೆ ಶೃಂಗೇರಿಯ ಎಲ್ಲಾ ಆಲಯಗಳಲ್ಲಿಯೂ ಅರ್ಚನಾದಿಗಳನ್ನು ನಡೆಸಿ, ತುಂಗಾಮೂಲಕ್ಕೆ ಪ್ರಯಾಣ ಬೆಳೆಸಿ ಅಲ್ಲಿಂದ ದಕ್ಷಿಣ ಕನ್ನಡ ಜಿಲ್ಲೆಯ ಕೊಲ್ಲೂರು ಶ್ರೀಮೂಕಾಂಬಿಕೆಯನ್ನು ಪೂಜಿಸಿ, ಅ ಬಳಿಕ ಕೇರಳದಲ್ಲಿ ಸಂಚಾರಗೈದು ಕಾಲಟೀ ಮಹಾಕ್ಷೇತ್ರಕ್ಕೆ ಬಂದರು. ಆದಿಗುರು ಶ್ರೀಶಂಕರ ಭಗವತ್ಪಾದರ ಮತ್ತು ಶ್ರೀಶಾರದಾ ಸನ್ನಿಧಿಯಲ್ಲಿ ಚಾತುರ್ಮಾಸ್ಯ ಸಂಕಲ್ಪಗೈದರು. ಅಲ್ಲಿಯೇ ಶ್ರೀಗಣೇಶೋತ್ಸವದ ಅಂಗವಾಗಿ ವಿದ್ವತ್ಸದಸ್ಸೂ ನಡೆದು ಅನೇಕ ಜನ ವಿದ್ವಾಂಸರುಗಳು ಗೌರವಿಸಲ್ಪಟ್ಟರು. ನವರಾತ್ರಿ ಉತ್ಸವವೂ ಅಲ್ಲಿಯೇ ನೆರವೇರಿತು. ಸುಮಾರು ಆರು ವರ್ಷಗಳ ಕಾಲ ಸತತವಾಗಿ ಭಕ್ತಾನುಗ್ರಹಕ್ಕಾಗಿ ಸಂಚಾರದಲ್ಲಿಯೇ ಇದ್ದ ಶ್ರೀಗಳವರು ದೇಹಾಯಾಸವನ್ನು ಪರಿಗಣಿಸದೇ ಎಲ್ಲೆಲ್ಲಿಯೂ ಜ್ಞಾನಜ್ಯೋತಿಯನ್ನು ಬೆಳಗಿಸಿದರು. ಕೇರಳ, ತಮಿಳುನಾಡು, ಆಂಧ್ರ, ಕರ್ನಾಟಕಗಳಲ್ಲಿ ವಿಶೇಷವಾಗಿ ಸಂಚರಿಸಿದ ಗುರುವರ್ಯರು ಅನೇಕ ಕಡೆಗಳಲ್ಲಿ ಶ್ರೀಶಂಕರ ಮಠವನ್ನು ಸ್ಥಾಪಿಸಿದರು. ಸ್ವಹಸ್ತದಿಂದ ಅನೇಕ ದೇವಾಲಯಗಳ ಮೂರ್ತಿ ಪ್ರತಿಷ್ಠೆ, ಕುಂಭಾಭಿಷೇಕಗಳನ್ನು ನೆರವೇರಿಸಿದರು. ಕ್ರಿ.ಶ.೧೯೬೨ರಲ್ಲಿ ಮೈಸೂರಿನ ರುದ್ರಪಟ್ಟಣದಲ್ಲಿ ಶ್ರೀಗಳವರ ನೇತೃತ್ವದಲ್ಲಿ ಮಹಾರುದ್ರಯಾಗವು ನಡೆದು, ಯಾಗಾರಂಭದ ದಿನವೇ ನಮ್ಮ ಸೈನಿಕರು ಅನ್ಯಾಕ್ರಮಣವಾಗಿದ್ದ ಗೋವೆಯನ್ನು ವಶಪಡಿಸಿಕೊಳ್ಳಲು ಯುದ್ಧ ದುಂದುಭಿಯನ್ನು ಮೊಳಗಿಸಿದರು. ತಮ್ಮ ಸಂಚಾರಕಾಲದಲ್ಲಿ ಶ್ರೀಗಳವರು ಅನೇಕ ವಿದ್ವತ್ಸಭೆಗಳನ್ನು ನಡೆಸಿ ವಿದ್ವಾಂಸರಿಗೆ ಆಶ್ರಯದಾತರಾದರು, ಅನುಗ್ರಹ ಮಾಡಿದರು.

ಶೃಂಗೇರಿಯ ಪೀಠಾಚಾರ್ಯರಲ್ಲಿ ಭರತಖಂಡವನ್ನೆಲ್ಲಾ ಸಂಚರಿಸಿ, ಧರ್ಮದುಂದುಭಿ ಮೊಳಗಿಸಿದವರಲ್ಲಿ ಶ್ರೀ ಶಂಕರರ ಅನಂತರ ಶ್ರೀ ಅಭಿನವ ವಿದ್ಯಾತೀರ್ಥರು ಅಗ್ರಗಣ್ಯರು. ಶ್ರೀ ಶ್ರೀಗಳವರು ಕನ್ಯಾಕುಮಾರಿ ಯಿಂದ ಕಾಶ್ಮೀರದವರೆಗೆ ಮಾತ್ರವಲ್ಲದೇ, ನೇಪಾಳದಲ್ಲಿಯೂ ಯಾತ್ರೆ ನಡೆಸಿ ಶ್ರೀ ಶಂಕರರ ಅವತಾರದ ಉದ್ದೇಶವಾದ ಧರ್ಮಪ್ರಸಾರವನ್ನು ಮಾಡಿದರು.

ಹದಿಮೂರು ಹದಿನಾಲ್ಕನೆಯ ಶತಮಾನದಲ್ಲಿ ಜಡತೆ ಕವಿದು ನಮ್ಮ ದೇಶದ ಲೌಕಿಕ ಹಾಗೂ ಧಾರ್ಮಿಕ ಜೀವನದಲ್ಲಿ ಪ್ರಕ್ಷುಬ್ಧ ಪರಿಸ್ಥಿತಿಯುಂಟಾಗಿತ್ತು.

ಆಗ ತಪಶ್ಚಕ್ರವರ್ತಿ, ಮಹಾಯೋಗಿ ಶ್ರೀವಿದ್ಯಾತೀರ್ಥರು ವ್ಯಾಖ್ಯಾನ ಪೀಠದಲ್ಲಿದ್ದರು. ಆ ಮಹಾಪೂಜ್ಯರು ಸೊರಗಿಹೋಗಿದ್ದ ನಾಡಿಗೆ ದಿವ್ಯ ಚೇತನವನ್ನಿತ್ತು ಧರ್ಮಜಾಗೃತಿಯನ್ನು ಮೂಡಿಸಿದ್ದರು. ಪ್ರಖ್ಯಾತರಾದ ಶಿಷ್ಯರನ್ನು– ಶ್ರೀಭಾರತೀತೀರ್ಥ ಮತ್ತು ಶ್ರೀವಿದ್ಯಾರಣ್ಯರಂತಹ ಮಹಾಪೂಜ್ಯರನ್ನು ದೇಶೋದ್ಧಾರಕ್ಕಾಗಿ ನಿಯಮಿಸಿದ್ದರು. ಒಂದು ಶತಮಾನಕ್ಕಿಂತ ಹೆಚ್ಚುಕಾಲ ಶೃಂಗೇರೀ ಪೀಠದಲ್ಲಿ ವಿರಾಜಮಾನರಾಗಿದ್ದ ಗುರುಗಳು ತಮ್ಮ ದಿವ್ಯೋಪದೇಶದಿಂದ ಸನಾತನ ಧರ್ಮವನ್ನು ಉದ್ಧರಿಸಿ ಹೊಸದೊಂದು ಸಾಮ್ರಾಜ್ಯಕ್ಕೆ ಅಸ್ತಿಭಾರ ಹಾಕಿದರು. ಅವರ ಆಶೀರ್ವಾದದ ಫಲವೇ ವಿಜಯನಗರ ಸಾಮ್ರಾಜ್ಯ. ಇಂದು ಪಾಶ್ಚಾತ್ಯ ನಾಗರಿಕತೆಯ ಪ್ರಭಾವ ನಮ್ಮ ಜೀವನದ ಎಲ್ಲಾ ರಂಗಗಳ ಮೇಲೆ ವಿಪರೀತವಾಗಿ ನಾವು ಭಾರತೀಯತೆಯನ್ನೇ ಕಡೆಗಣಿಸುತ್ತಿದ್ದೇವೆ. ನಮಗೆ ಸ್ವಾಭಾವಿಕವಾಗಿದ್ದ ಶಾಂತಿ, ತೃಪ್ತಿ, ಸಹನೆ ಮುಂತಾದ ಸದ್ಗುಣಗಳು ನಾಶವಾಗಿ ಪ್ರಲೋಭನೆಗಳ ದಾಸ್ಯ ನಮ್ಮನ್ನು ಅಧೋಮಾರ್ಗಕ್ಕೆ ದೂಡುತ್ತಿದೆ. ಧರ್ಮದಲ್ಲಿ ಶ್ರದ್ಧೆ ನಂಬಿಕೆಗಳು ಸಡಿಲವಾಗುತ್ತಾ ಬಂದು ಪಾರಮಾರ್ಥಿಕ ದೃಷ್ಟಿ ಮಸಕಾಗುತ್ತಿದೆ. ಇಂತಹ ಕ್ಷೋಭೆಯಿಂದ ನಮ್ಮನ್ನು ಪಾರುಮಾಡುವ ಮಹಾನುಭಾವರ ಅಗತ್ಯ ಇಂದು ಹೆಚ್ಚಾಗಿದೆ. ಹಿರಿಯ ಲೇಖಕರೊಬ್ಬರು ನುಡಿದಂತೆ "ಅಂದು ಧರ್ಮದ ಗ್ಲಾನಿಯಾದಾಗ ಅವತರಿಸಿದ ಆ ವಿದ್ಯಾತೀರ್ಥರೇ ಇಂದು ಅದೇ ಪರಿಸ್ಥಿತಿಯಲ್ಲಿ ಶ್ರೀಮದಭಿನವ ವಿದ್ಯಾತೀರ್ಥರಾಗಿ ಅವತರಿಸುವ ಅಗತ್ಯ ಬಂದಿತು."

ಶ್ರೀವಿದ್ಯಾತೀರ್ಥರ ವ್ಯಕ್ತಿತ್ವವು ವೈಶಿಷ್ಟ್ಯಪೂರ್ಣವಾದುದು. ವೇದಶಾಸ್ತ್ರಗಳಲ್ಲಿ ಆಳವೂ, ವಿಶಾಲವೂ ಆದ ಪಾಂಡಿತ್ಯ, ಆ ಪಾಂಡಿತ್ಯಕ್ಕೊಪ್ಪುವ ಪ್ರತಿಭೆ. ಎಂತಹವರನ್ನೂ ಆಕರ್ಷಿಸುವ ದಿವ್ಯ ತೇಜಸ್ಸು. ನಿರರ್ಗಳವಾದ ವಾಗ್ವೈಖರಿ, ಧರ್ಮಪೀಠಾಧಿಪತಿಗಳಲ್ಲಿರಬೇಕಾದಂತಹ ಇತರ ಮತಗಳಲ್ಲಿ ಸಹಾನುಭೂತಿ ಮತ್ತು ಗೌರವ, ಮೇಲುಕೀಳೆನ್ನದೆ ಎಲ್ಲರೂ ಭಗವತ್ಕಟಾಕ್ಷಕ್ಕೆ ಸಲ್ಲುವರೆಂಬ ನಂಬಿಕೆ ಇವೆಲ್ಲಾ ಶ್ರೀವಿದ್ಯಾತೀರ್ಥರ ಸ್ವಭಾವದಲ್ಲಿ ಹಾಸುಹೊಕ್ಕಾಗಿತ್ತು.

ಸಂಚರಿಸಿದೆಡೆಯೆಲ್ಲಾ ಎಲ್ಲರಿಂದಲೂ, ಅತ್ಯಂತ ಸಾಧಾರಣರಿಂದ ಹಿಡಿದು ರಾಜಮಹಾರಾಜ, ರಾಜ್ಯಪಾಲ, ರಾಷ್ಟ್ರಾಧ್ಯಕ್ಷರವರೆಗೆ ಗೌರವಿಸಲ್ಪಟ್ಟು ತಮ್ಮ ಸರಳವೂ, ನಿರರ್ಗಳವೂ ಗಂಭೀರವೂ ಆದ ಶೈಲಿಯಿಂದ ಸನಾತನಧರ್ಮದ ತತ್ತ್ವವನ್ನು ಪ್ರಸಾರಮಾಡುತ್ತಾ, ಶ್ರದ್ಧೆ ನಂಬಿಕೆಗಳನ್ನು ಎಲ್ಲೆಲ್ಲಿಯೂ ಬಿತ್ತಿದರು. ಸಂಸ್ಕೃತ, ಕನ್ನಡ, ತೆಲುಗು, ತಮಿಳು ಮತ್ತು ಹಿಂದೀ ಮುಂತಾದ ಭಾಷೆಗಳಲ್ಲಿ ನಿರರ್ಗಳವಾಗಿ ಪ್ರವಹಿಸುತ್ತಿದ್ದ ಅವರ ಉಪದೇಶ ಲಹರಿ ಎಂತಹವರಲ್ಲಿಯೂ



ಆಸ್ತಿಕ್ಯವನ್ನು ಮೂಡಿಸುತ್ತಿತ್ತು. ಅವರು ನಡೆಸುತ್ತಿದ್ದ ಶ್ರೀಶಾರದಾ ಚಂದ್ರಮೌಳೀಶ್ವರ ಪೂಜೆಯು ಭಕ್ತಿ, ನಮ್ರತೆಗಳನ್ನು ಚಿಮ್ಮಿಸುತ್ತಿತ್ತು. ಶ್ರೀಮತ್ ಶಂಕರಭಗವತ್ಪಾದರು ಭಾರತವೆಲ್ಲವೂ ಒಂದೇ ಎಂಬುದರ ಸಂಕೇತವಾಗಿಯೇ ಅಲ್ಲವೇ ನಾಡಿನ ನಾಲ್ಕು ದಿಕ್ಕುಗಳಲ್ಲಿಯೂ ಚತುರಾಮ್ನಾಯ ಪೀಠಗಳನ್ನು ಸ್ಥಾಪಿಸಿದ್ದು? ಆ ಏಕತೆಯ ದುಂದುಭಿಯನ್ನು ಶ್ರೀವಿದ್ಯಾತೀರ್ಥರು ತಾವು ಹೋದೆಡೆಯಲ್ಲೆಲ್ಲಾ ಮೊಳಗಿಸಿದರು. "ಅಖಂಡ ಭಾರತಕ್ಕೆಲ್ಲಾ ಒಂದೇ ಸಂಸ್ಕೃತಿಯೆಂದೂ, ಆಂಧ್ರ, ಕರ್ನಾಟಕ, ದ್ರಾವಿಡ ಸಂಸ್ಕೃತಿಗಳೆಂದು ಭಿನ್ನಭಿನ್ನವಲ್ಲವೆಂದೂ ಅವೆಲ್ಲವೂ ಒಂದೇ ಸಂಸ್ಕೃತಿಯ ವಿವಿಧ ರೂಪಗಳೆಂದೂ ಸ್ಪಷ್ಟಪಡಿಸಿದರು. ಧರ್ಮವೇ ನಮಗೆ ಆಧಾರ. ಸಾಮಾಜಿಕ ಜೀವನದಲ್ಲಿ ಸತ್ಯ, ಅಹಿಂಸೆ, ಕರುಣೆ, ಅನುಕಂಪ, ಸಾತ್ವಿಕತೆ ಮುಂತಾದ ಸಾಮಾನ್ಯ ಧರ್ಮಗಳನ್ನು ಪಾಲಿಸುವುದರಿಂದ ಭಾರತದಲ್ಲಿ ಏಕೆ, ಅಖಂಡ ವಿಶ್ವದಲ್ಲಿಯೇ ಏಕತೆಯನ್ನು ಸಾಧಿಸಬಹುದೆಂದು" ಉಪದೇಶಗೈದರು. ಗುರುದೇವರು "ಭಾರತೀಯರಲ್ಲಿ ಭಾವೈಕ್ಯ ಮೂಡ ಬೇಕಾದರೆ, ಧರ್ಮಭಾವನೆ ಉದ್ದೀಪನಗೊಳ್ಳಬೇಕು. ರಾಷ್ಟ್ರನಾಯಕರು ದೇವರು ಧರ್ಮಗಳ ವಿಷಯದಲ್ಲಿ ಅಪನಂಬಿಕೆಯ ಮಾತುಗಳನ್ನಾಡದೆ ತಮ್ಮಷ್ಟಕ್ಕೆ ತಾವಿದ್ದು, ದೈವಶ್ರದ್ಧೆ ಸದಾಚಾರಗಳ ಪೂರ್ಣವಿಕಾಸಕ್ಕೆ ಅವಕಾಶವಿತ್ತರೆ ಸಾಕು, ಜನತೆಯಲ್ಲಿ ಧರ್ಮವು ಬೆಳೆಯುತ್ತದೆ" ಎಂದು ಆದೇಶಿಸಿದ್ದಾರೆ.

ಸದಾ ಆತ್ಮಧ್ಯಾನ ನಿರತರೂ, ವಿಷಯ ಪರಾಙ್ಮುಖರೂ, ಸಕಲಶಾಸ್ತ್ರ ಪಾಂಡಿತ್ಯಶೀಲರೂ, ಮಹಾತಪಸ್ವಿಗಳೂ, ವೈದಿಕ ಧರ್ಮಪರಿಪಾಲಕರೂ, ಅವಧೂತರೂ ಆಗಿದ್ದ ಮಹಾತ್ಮ ಶ್ರೀಚಂದ್ರಶೇಖರಭಾರತೀ ಮಹಾಸ್ವಾಮಿಗಳ ಶಿಷ್ಯರಾದ ಶ್ರೀಮದಭಿನವ ವಿದ್ಯಾತೀರ್ಥರೂ ಸಹ ಆ ಮೊದಲ ವಿದ್ಯಾತೀರ್ಥರಂತೆಯೇ ವ್ಯಾಖ್ಯಾನಪೀಠದಲ್ಲಿ ಚಿರಕಾಲ ವಿರಾಜಮಾನರಾಗಿದ್ದು ಧರ್ಮಧ್ವಜದಡಿಯಲ್ಲಿ ನಮ್ಮೆಲ್ಲರನ್ನೂ ಮುನ್ನಡೆಸಿದ್ದಾರೆ. ಅದ್ವೈತ ದುಂದುಭಿಯನ್ನು ಭರತವರ್ಷವೇ ಏಕೆ ವಿಶ್ವದಲ್ಲೆಲ್ಲಾ ಮೊಳಗಿಸಿದ್ದಾರೆ.

ಶ್ರೀಶಂಕರ ಭಗವತ್ಪಾದರಂತೆಯೇ ಈ ಗುರುಗಳೂ ಭರತಖಂಡದ ಅನೇಕ ಸ್ಥಳಗಳಲ್ಲಿ ಶಂಕರಮಠಗಳನ್ನು ಸ್ಥಾಪಿಸಿದರು. ಅದ್ವೈತ ವೇದಾಂತದ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸಿದರು. ಸಂಸ್ಕೃತ ವಿದ್ಯಾ ಪ್ರಸಾರಕ್ಕಾಗಿ "ಶ್ರೀ ಸುರಸರಸ್ವತೀ ಸಭಾ" ಎಂಬ ಸಂಸ್ಥೆಯನ್ನೂ, ವೈದಿಕ ವಿದ್ಯಾ ಪ್ರಸಾರಕ್ಕಾಗಿ "ವೇದ ವಿದ್ಯಾ ಪರಿಷತ್" ಎಂಬ ಸಂಸ್ಥೆಯನ್ನೂ ಸ್ಥಾಪಿಸಿದರು. ಶ್ರೀಗಳವರನ್ನು ಕಂಡ ಯಾರಿಗಾದರೂ ಅವರಲ್ಲಿ ತನ್ನ ತಾಯಿಯನ್ನು ಕಂಡಂತೆ ಭಾಸವಾಗುತ್ತಿತ್ತು.. ಶ್ರೀಗಳವರ ವಾತ್ಸಲ್ಯ, ಕರುಣೆ, ಅನುಕಂಪಗಳು

ಅನುಪಮವಾಗಿದ್ದವು.

ಈಗ ಶ್ರೀ ಶಾರದಾ ಪೀಠದಲ್ಲಿ ಜಗದ್ಗುರು ಶ್ರೀ ಭಾರತೀ ತೀರ್ಥರೂ, ಅವರ ಕರಕಮಲ ಸಂಜಾತರಾದ ಶ್ರೀ ವಿಧುಶೇಖರ ಭಾರತೀಯವರೂ ವಿರಾಜಮಾನರಾಗಿದ್ದಾರೆ.

**– ಓಂ ತತ್ಸತ್–**



# ಅನುಬಂಧ ೧

ಶ್ರೀಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳವರು ಶ್ರೀ ನರಸಿಂಹಶಾಸ್ತ್ರಿಯವರನ್ನೇ ಶಿಷ್ಯರನ್ನಾಗಿ ಪರಿಗ್ರಹಿಸಬೇಕೆಂಬ ಉದ್ದೇಶವನ್ನು ಮೊದಲಿನಿಂದಲೂ ಹೊಂದಿದ್ದರೆಂದು ಹಿಂದೆ ಓದಿದೆವಲ್ಲವೇ? ಶ್ರೀಗಳವರು ರಚಿಸಿರುವ ದೇವೀ ಸ್ತೋತ್ರಗಳಲ್ಲಿ ನಾವದನ್ನು ಕಾಣಬಹುದು

ಕಾಲಾಹಂಕಾರ ನಿರ್ವಾಪಣಚಣ ಹೃದಯಾಂಭೋಜ ಬಾಲಾರುಣಾಭೇ
ಕಾಯಕ್ಲೇಶಾದಿ ಹೀನೈರಪಿ ಸುಖಸುಲಭೈಃ ಸೇವನೈಃ ಪ್ರೀಯಮಾಣೇ।
ಕಾಣಾದಾಕ್ಷಾಂಘ್ರಿ ಶೇಷ ಪ್ರಮುಖ ಬುಧವರ್ಯೈಃ ಚಿಂತ್ಯಮಾನಾಂಘ್ರಿಪದ್ಮೇ
ಸರ್ವಜ್ಞಂ ಶ್ರೀನೃಸಿಂಹಂ ಕುರು ಶಿವದಯಿತೇ ಸತ್ವರಂ ಮದ್ವಿನಮ್ರಂ॥

ಯತ್ಪಾದಾಂಭಃ ಪ್ರಭೂತ ಪ್ರಣತಿರತಿ ಜವಾತ್ಕರ್ತುಮೀಷ್ಟೇ ಜಗತ್ಯಾಂ
ಕಾದಾಚಿತ್ಕಾಪಿ ಮೂಕಂ ಸುರಗುರು ಜಯಿನಂ ವಾಗ್ಭಿರನ್ಯಾದೃಷೀಭಿಃ।
ಸಾತ್ವಂ ವೇಲಾವಿಹೀನ ಪ್ರಸೃಮರ ಕರುಣಾಪೂರಪೂರ್ಣೈಃ ಕಟಾಕ್ಷೈಃ
ಸರ್ವಜ್ಞಂ ಶ್ರೀನೃಸಿಂಹಂ ಕುರು ಶಿವದಯಿತೇ ಸತ್ವರಂ ಮದ್ವಿನಮ್ರಂ॥

ಯಾಂ ಬೋದ್ಧುಂ ಶಾಂತಿದಾಂತಿ ಪ್ರಮುಖಗುಣವರ್ಯೈಃ ಸಂಯತಂತೇ ಯತೀಂದ್ರಾಃ
ಯಸ್ಯಾಃ ಕಾರುಣ್ಯಲೇಶಾತ್ ಜಗತಿ ಜನತತಿರ್ಜನ್ಮ ಮೃತ್ಯೂ ಜಹಾತಿ।
ಸಾ ತ್ವಂ ಸಚ್ಚಿತ್ಸ್ವರೂಪಾ ಶುಕಮುಖಮುನಿಭಿಶ್ಚಿಂತ್ಯಮಾನಾ ನಿತಾಂತಂ
ಸರ್ವಜ್ಞಂ ಶ್ರೀನೃಸಿಂಹಂ ಕುರು ಶಿವದಯಿತೇ ಸತ್ವರಂ ಮದ್ವಿನಮ್ರಂ॥

ವಿದ್ಯಾನಾಥಾಬ್ಜನೇತ್ರ ಪ್ರಮುಖ ಸುರವರಾರಾಧ್ಯ ಪಾದಾರವಿಂದೇ
ವಿದ್ಯಾದಾನ ಪ್ರವೀಣೇ ಪ್ರಣತಜನ ಮನೋಬೋಧದಾನ ವ್ರತಾಢ್ಯೇ।
ಕಾಯಶ್ರೀ ಧಿಕ್ಕೃತೋದ್ಯದ್ದಿನಕರ ನಿಕರೇ ಚಕ್ರರಾಜಾಸನಸ್ಥೇ
ಸರ್ವಜ್ಞಂ ಶ್ರೀನೃಸಿಂಹಂ ಕುರು ಶಿವದಯಿತೇ ಸತ್ವರಂ ಮದ್ವಿನಮ್ರಂ॥
(ಭಕ್ತಿ ಸುಧಾತರಂಗಿಣಿ ಪುಟ ೪೪೫, ೪೪೬)

ಶ್ರೀನರಸಿಂಹ ಶಾಸ್ತ್ರಿಗಳು ತಮ್ಮ ಬ್ರಹ್ಮಚರ್ಯಾಶ್ರಮದಲ್ಲಿ ಸ್ನಾನ ಸಂಧ್ಯಾಗ್ನಿ ಕಾರ್ಯಗಳನ್ನು ಶ್ರದ್ಧೆಯಿಂದ ನಡೆಸುತ್ತಿದ್ದುದರಿಂದಲೂ, ಪರದೇವತೆಯ ಅನುಗ್ರಹದಿಂದಲೂ, ಜನ್ಮಾಂತರೀಯ ಸುಕೃತ ಪರಿಪಾಕದಿಂದಲೂ ತರ್ಕಶಾಸ್ತ್ರದಲ್ಲಿ ಎಲ್ಲ ಪಾಠಗಳನ್ನೂ ಪೂರೈಸಿ ನೈಪುಣ್ಯ ಗಳಿಸಿದುದರಿಂದ ಹರ್ಷಿಸಿದ ಶ್ರೀಗಳವರು ಜಗನ್ಮಾತೆಯನ್ನು ಈ ರೀತಿ ಪ್ರಾರ್ಥಿಸಿದರು.

